# ಯೋಗ ಮೀಮಾಂಸಾ

(ಯೋಗ ವಿದ್ಯೆಯ ಯಥಾರ್ಥ ಸ್ವರೂಪ ಮತ್ತು ಇದಕ್ಕೆ ಸಂಬಂಧಪಟ್ಟ ಕೆಲವು ಭ್ರಾಂತಿಗಳ ನಿವಾರಣೆ)

ಮೂಲ ಲೇಖಕರು
ಸ್ವಾಮಿ ಸತ್ಯಪತಿ ಪರಿವ್ರಾಜಕ

ಅನುವಾದಕರು
ಜ್ಯೇಷ್ಠವರ್ಮನ್

ಪ್ರಕಾಶಕರು
ಆರ್ಯಸಮಾಜ
ಸ್ವಾಮಿ ಶ್ರದ್ಧಾನಂದ ಭವನ,
ವಿಶ್ವೇಶ್ವರಪುರಂ, ಬೆಂಗಳೂರು - 560 004.
ದೂರವಾಣಿ : 626380

# ಯೋಗ ಮೀಮಾಂಸಾ



(ಯೋಗ ವಿದ್ಯೆಯ ಯಥಾರ್ಥ ಸ್ವರೂಪ ಮತ್ತು ಇದಕ್ಕೆ ಸಂಬಂಧಪಟ್ಟ ಕೆಲವು ಭ್ರಾಂತಿಗಳ ನಿವಾರಣೆ)

ಮೂಲ ಲೇಖಕರು :
ಸ್ವಾಮಿ ಸತ್ಯಪತಿ ಪರಿವ್ರಾಜಕ

ಅನುವಾದಕರು :
ಜ್ಯೇಷ್ಠವರ್ಮನ್

ಪ್ರಕಾಶಕರು :
ಆರ್ಯಸಮಾಜ
ಸ್ವಾಮಿ ಶ್ರದ್ಧಾನಂದ ಭವನ,
ವಿಶ್ವೇಶ್ವರಪುರಂ, ಬೆಂಗಳೂರು - 560 004.
ದೂರವಾಣಿ : 626380

 

**YOGA MEEMAMSA** A Book By Swami Satyapati Parivrajaka and translated by Jystverman Published by Arya Samaja, Swami Shraddhananda Bhawan, Visveswarapuram, Bangalore-4, Phone : 626380 ; Printed by Parimala Mudranalaya 517/60, 7th Main, 7th Cross, Hanumanthanagar, Bangalore-560 019. Ph. 629322/625516

ಪ್ರಥಮ ಮುದ್ರಣ : 1992

ಪ್ರತಿಗಳು : 2000

ಪುಟಗಳು : 196+viii

ಬೆಲೆ ಬೆಲೆ : 25/= (ಇಪ್ಪತ್ತೈದು ರೂಪಾಯಿಗಳು)

ಪ್ರಕಾಶಕರು : **ಆರ್ಯಸಮಾಜ**
ಸ್ವಾಮಿ ಶ್ರದ್ಧಾನಂದ ಭವನ,
ವಿಶ್ವೇಶ್ವರಪುರಂ, ಬೆಂಗಳೂರು - 560 004.
ದೂರವಾಣಿ : 626380

ಮುದ್ರಕರು : ಪರಿಮಳ ಮುದ್ರಣಾಲಯ
ಶ್ರೀರಾಮಾಂಜನೇಯ ರಸ್ತೆ,
ಹನುಮಂತನಗರ,
ಬೆಂಗಳೂರು-560 019 ☎ 625516

# ಪ್ರಕಾಶಕರ ಮುನ್ನುಡಿ

ಇಂದು ವಿಶ್ವದಲ್ಲಿ ಯೋಗದ ಬಗ್ಗೆ ಪ್ರಚಲಿತವಿರುವ ಲೇಖನ, ಉಪದೇಶ, ಆಚರಣೆಗಳ ಮೂಲಕ ದೇಶ ವಿದೇಶಗಳಲ್ಲಿ ಪ್ರಚಾರ ಹಾಗೂ ಪ್ರಸಾರವಾಗುತ್ತಿರುವ ವಿಷಯಗಳಿಗೆ ಸಂಬಂಧಿಸಿದಂತೆ ಕೆಲವು ಭ್ರಾಂತಿಗಳನ್ನು ವಿಶ್ಲೇಷಣೆ ಮಾಡಿ ಯೋಗ ಹೇಗೆ ಮಾನವ ಸಮಾಜಕ್ಕೆ ಕಲ್ಯಾಣಕಾರಿಯಾಗಿದೆಯೆಂಬುದನ್ನು ಮನದಟ್ಟು ಮಾಡಿರುವ ಪೂಜ್ಯ ಸ್ವಾಮಿ ಸತ್ಯಪತಿ ಪರಿವ್ರಾಜಕರ ಯೋಗ ಮೀಮಾಂಸಾ ಗ್ರಂಥವನ್ನು ಕನ್ನಡ ಭಾಷೆಯಲ್ಲಿ ಪ್ರಕಟಿಸಬೇಕೆಂದು ಪೂಜ್ಯ ಸ್ವಾಮೀ ಬ್ರಹ್ಮದೇವ ಅವರ ಉತ್ಕಟೇಚ್ಛೆಯ ಪರಿಣಾಮವಾಗಿ ಇಂದು ಈ ಗ್ರಂಥ ಕನ್ನಡಿಗರ ಕೈಸೇರುತ್ತಿದೆ.

ಯೋಗ ಮೀಮಾಂಸಾ ಗ್ರಂಥವನ್ನು ಕನ್ನಡ ಭಾಷೆಯಲ್ಲಿ ಪ್ರಕಾಶಿಸುವ ಸಲುವಾಗಿ ತಮ್ಮ ಅನುಮತಿಯನ್ನು ನೀಡಿದುದಲ್ಲದೆ, ಗ್ರಂಥದ ಪ್ರಕಾಶನಕ್ಕಾಗಿ ಹತ್ತು ಸಾವಿರ ರೂಪಾಯಿಗಳ ಧನರಾಶಿಯನ್ನೂ ನೀಡಿ ಆಶೀರ್ವದಿಸಿರುವ ಪೂಜ್ಯ ಸ್ವಾಮಿ ಸತ್ಯಪತಿ ಪರಿವ್ರಾಜಕರಿಗೆ ನಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತೇವೆ. ಈ ಗ್ರಂಥ ಇಂದು ಕನ್ನಡಿಗರ ಕೈ ಸೇರಲು ಪ್ರಮುಖ ಕಾರಣಕರ್ತರಾದ ಪೂಜ್ಯ ಸ್ವಾಮೀ ಬ್ರಹ್ಮದೇವ್ ಅವರಿಗೆ ನಮ್ಮ ಅನಂತಾನಂತಕೃತಜ್ಞತೆಗಳು.

ಮುಂಬಯಿಯ ವೇದಭಾಷಾಶಾಸ್ತ್ರಜ್ಞರೂ, ಸಮಾಜ ವಿಜ್ಞಾನಿಗಳೂ, ಸಂಸ್ಕೃತ ವಿದ್ವಾಂಸರೂ ಆದ ಪ್ರೊ|| ಜ್ಯೇಷ್ಠವರ್ಮನ್ ಅವರು ಈ ಗ್ರಂಥದ ಅನುವಾದ ಕಾರ್ಯವನ್ನು ವಹಿಸಿಕೊಂಡು ಸಮರ್ಪಕವಾಗಿ ಅನುವಾದ ಮಾಡಿಕೊಟ್ಟಿರುವುದಕ್ಕೆ ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

ಗ್ರಂಥದ ಹಸ್ತ ಪ್ರತಿಯನ್ನು ಪರಿಶೀಲಿಸಿ ಸುಂದರ ಮುದ್ರಣ ಪ್ರತಿಯನ್ನು ತಯಾರಿಸಿಕೊಟ್ಟು ಸಹಕರಿಸಿದ ಶ್ರೀಯುತರಾದ ಪಿ. ಕೃಷ್ಣ ಹಾಗೂ ಸುಧಾಮ ಅವರನ್ನೂ ಅಭಿನಂದಿಸುತ್ತೇವೆ.

ಈ ಗ್ರಂಥದ ಮುದ್ರಣ ಕಾರ್ಯವನ್ನು ಹಾಗೂ ಪ್ರೂಫ್‌ವಾಚನದ ಪೂರ್ಣ ಜವಾಬ್ದಾರಿಯನ್ನು ತಾವೇ ವಹಿಸಿಕೊಂಡು, ಅತ್ಯಲ್ಪಕಾಲದಲ್ಲಿ ಗ್ರಂಥವನ್ನು ಮುದ್ರಿಸಿಕೊಟ್ಟ ಪರಿಮಳ ಮುದ್ರಣಾಲಯದ ಮಾಲೀಕರಾದ ಶ್ರೀಯುತ ಚಿದಂಬರಯ್ಯನವರಿಗೂ ನಮ್ಮ ಹೃತ್ಪೂರ್ವಕ ಧನ್ಯವಾದಗಳು.

**ಆರ್ಯ ಸಮಾಜ**
ಸ್ವಾಮಿ ಶ್ರದ್ಧಾನಂದ ಭವನ, ವಿಶ್ವೇಶ್ವರಪುರಂ, ಬೆಂಗಳೂರು-560 004

| **ಬಿ.ಪಿ. ಯತಿರಾಜ್** | **ಎ. ನಂಜುಂಡಪ್ಪ** | **ಜಿ. ರಮಾನಂದ ಆರ್ಯ** |
|---|---|---|
| ಕೋಶಾಧ್ಯಕ್ಷ | ಕಾರ್ಯದರ್ಶಿ | ಅಧ್ಯಕ್ಷ |

# ಅನುವಾದಕನ ಎರಡು ಮಾತುಗಳು

ಪೂಜ್ಯ ಸ್ವಾಮಿ ಸತ್ಯಪತಿ ಪರಿವ್ರಾಜಕರು ಹಿಂದೀ ಭಾಷೆಯಲ್ಲಿ ಬರೆದಿರುವ "ಯೋಗ ಮೀಮಾಂಸಾ" ಎಂಬ ಗ್ರಂಥವನ್ನು ಕನ್ನಡ ಭಾಷೆಗೆ ಅನುವಾದ ಮಾಡಬೇಕೆಂಬ ನಿವೇದನೆಯು ನನಗೆ ಪೂಜ್ಯ ಸ್ವಾಮಿ ಬ್ರಹ್ಮದೇವರ ಕಡೆಯಿಂದ ಬಂದಾಗ ಮೊದಲು ನಾನು ಈ ಕಾರ್ಯಭಾರವನ್ನು ಸ್ವೀಕರಿಸಲು ಸ್ವಲ್ಪ ಹಿಂದು ಮುಂದೆ ಯೋಚಿಸಿದೆನು. ಇದಕ್ಕೆ ಕಾರಣಗಳೇನೆಂದರೆ, ಒಂದನೆಯದಾಗಿ, ನಾನು ಆರ್ಷಗ್ರಂಥಗಳನ್ನು ಬಿಟ್ಟು ಇತರ ಗ್ರಂಥಗಳ ಮೇಲೆ ಪರಿಶ್ರಮ ಮಾಡುವುದು ಅಷ್ಟೊಂದು ಉಪಯುಕ್ತವಲ್ಲ ಎಂದು ತಿಳಿದುಕೊಂಡಿದ್ದೇನೆ. ಎರಡನೆಯದಾಗಿ, ಅನುವಾದದ ಕಾರ್ಯವು ಒಂದು ರೀತಿಯಲ್ಲಿ ಅಪಾಯಕರವೂ ಆಗಿದೆ. ಮೂಲ ಲೇಖಕರ ಮನಸ್ಸನ್ನು ನೋಯಿಸಬೇಕೆಂದಾದರೆ, ಅವರ ರಚನೆಗಳನ್ನು ಅನುವಾದ ಮಾಡಬೇಕು, ಎಂದು ಯಾರೋ ಒಬ್ಬ ಧೀಮಂತ ವ್ಯಕ್ತಿಯು ಹೇಳಿದ್ದಾರೆ. ಯಾಕೆಂದರೆ, ಮೂಲ ಲೇಖಕರ ಆಳವು ಇಲ್ಲದ, ಮತ್ತು ಅವರ ಭಾವನೆಯನ್ನೂ ತಿಳಿಯದ ಒಬ್ಬ ಅನುವಾದಕನು, ತನ್ನ ಅಲ್ಪಜ್ಞತೆಯಿಂದ, ಪ್ರಮಾದವನ್ನು ಮಾಡುವುದು ಸಹಜವಾಗಿದೆ. ಇದರಿಂದ ಮೂಲ ಲೇಖಕರ ಮೇಲೆ ಅನ್ಯಾಯ ಮಾಡಿದಂತಾಗುತ್ತದೆ. ಇದಕ್ಕೆ ಹೊಣೆಗಾರನಾಗಲು ನಾನು ಇಷ್ಟಪಡುವುದಿಲ್ಲ. ಮೂರನೆಯದಾಗಿ, ನನ್ನ ಬಹು ಮುಖೀ ದಾಯಿತ್ವಗಳು. ಆದರೂ ಕೊನೆಗೆ ನಾನೀ ಅನುವಾದದ ಕಾರ್ಯಭಾರವನ್ನು ಸ್ವೀಕರಿಸುವ ಸಾಹಸವನ್ನು ಕೈಗೊಂಡೆ. ಇದಕ್ಕೂ ಕಾರಣಗಳು ಅನೇಕ ಇವೆ ಎಂದು ಹೇಳಬಹುದು. ಒಂದನೆಯದಾಗಿ, ಸ್ವಾಮಿ ಸತ್ಯಪತಿ ಪರಿವ್ರಾಜಕರ ಸತ್ಕೀರ್ತಿಯನ್ನು ನಾನು ಈ ಮೊದಲೇ ಕೇಳಿದ್ದೆ. ಆರ್ಯಜಗತ್ತಿನಲ್ಲಿ ಈಗ ಅವರೊಬ್ಬರು ನಿಜವಾಗಿಯೂ ಉಚ್ಚಕೋಟಿಯ ಯೋಗಿ ಎಂದು ಪ್ರಸಿದ್ಧರಾಗಿದ್ದಾರೆ. ಅಂತಹ ಮಹಾತ್ಮರ ಸೇವೆ ಮಾಡುವ ಸಂಧರ್ಭ ನನಗೆ ಸಿಕ್ಕಿದ್ದು ನನ್ನ ಭಾಗ್ಯ ಎಂದು ನಾನು ತಿಳಿದುಕೊಂಡೆ. ಎರಡನೆಯದಾಗಿ ಈ ಯೋಜನೆಗೆ ಮುಖ್ಯವಾಗಿ ಕಾರಣೀ ಭೂತರಾಗಿರುವ ಸ್ವಾಮಿ ಬ್ರಹ್ಮದೇವರು ನನ್ನ ಮೇಲೆ ತೋರಿಸಿರುವ ಸ್ನೇಹ ಮತ್ತು ಅಭಿಮಾನ, ಮತ್ತು ಮೂರನೆಯದಾಗಿ ಆರ್ಯಸಮಾಜ, ಶ್ರದ್ಧಾನಂದ ಭವನ, ವಿಶ್ವೇಶ್ವರಪುರಂ, ಇಲ್ಲಿಯ ಉತ್ಸಾಹೀ, ಕರ್ತವ್ಯಶೀಲ,

ಧರ್ಮನಿಷ್ಠ ತರುಣ ಕಾರ್ಯಕರ್ತರ ಪ್ರೀತಿ, ವಿಶ್ವಾಸಗಳು, ಇನ್ನು ಬಾಲ್ಯಕಾಲದಿಂದಲೂ ಯೋಗದ ಕಡೆಗೆ ನನ್ನಲ್ಲಿದ್ದ ಒಲವು ಇವೆಲ್ಲಾ ಒಟ್ಟು ಸೇರಿ ನಾನೀ ಕಾರ್ಯವನ್ನು ಬೇಗನೇ ಪೂರೈಸುವಂತೆ ಮಾಡಿವೆ.

ನನ್ನ ಸಾಮರ್ಥ್ಯಕ್ಕನುಸಾರವಾಗಿ ಪೂರ್ಣ ಪ್ರಾಮಾಣಿಕತೆಯಿಂದ ಈ ಅನುವಾದ ಕಾರ್ಯವನ್ನು ಮಾಡಿದ್ದೇನೆ. ಮೂಲ ಗ್ರಂಥದಲ್ಲಿ ಅಲ್ಲಲ್ಲಿ ಕಂಡು ಬಂದ ಕೆಲವು ಪುನರಾವೃತ್ತಿ ಎವಂ ಲೋಪಾದಿದೋಷಗಳನ್ನು ದೂರಮಾಡಲಿಕ್ಕೂ ಯತ್ನಿಸಿದ್ದೇನೆ. ಈ ಲೋಪದೋಷಗಳು ಬಹುಶಃ ಪೂರ್ವ ಸಂಪಾದಕರ ಅಥವಾ ಮುದ್ರಕರ ಪ್ರಮಾದದಿಂದಾಗಿರಬಹುದೆಂದು ನನ್ನ ಊಹೆ.

ಈ ಯೋಗ ಮೀಮಾಂಸವು, ಅನೇಕ ಗ್ರಂಥಗಳಿಂದ ಒಂದು ಮಹತ್ವ ಪೂರ್ಣವಾದ ಗ್ರಂಥವಾಗಿದೆ. ಇದರಲ್ಲಿ ಅತ್ಯಂತ ಸರಳವಾದ ಭಾಷೆಯಲ್ಲಿ, ಬಹಳ ಸುಲಭವಾಗಿ, ಜನಸಾಮಾನ್ಯರಿಗೆಲ್ಲಾ ಮನದಟ್ಟಾಗುವಂತೆ ಯೋಗದ ಸ್ವರೂಪವನ್ನು ಲೇಖಕರು ಹೇಳಿಕೊಟ್ಟಿದ್ದಾರೆ. ಇದರಿಂದ ಯೋಗದ ಮೇಲೆ ಜನರಿಗೆ ಶ್ರದ್ಧೆ ಮತ್ತು ಪ್ರೀತಿಯು ಖಂಡಿತವಾಗಿಯೂ ಹುಟ್ಟುತ್ತದೆ ಎಂದು ನನಗೆ ವಿಶ್ವಾಸವಿದೆ. ಯೋಗವು ಪ್ರತಿಯೊಬ್ಬ ಮಾನವನಿಗೂ ಬೇಕಾದ ವಿಷಯವಾಗಿದ್ದರೂ, ವಿಶೇಷವಾಗಿ ಸಾಮಾಜಿಕ ಕಾರ್ಯಕರ್ತರಿಗೆ ಇದು ಅತ್ಯಗತ್ಯ ಎಂದು ನಾನು ತಿಳಿದಿದ್ದೇನೆ.

ಯೋಗಿಯಲ್ಲದವನು ಎಂದರೆ ಪರಮಾತ್ಮನ ಭಕ್ತಿ ಇಲ್ಲದವನು, ತನ್ನ ಚಿತ್ತದ ಮೇಲೆ, ಹಾಗೂ ಇಂದ್ರಿಯಗಳ ಮೇಲೆ ಅಧಿಕಾರ ಇಲ್ಲದವನು, ವೇದ-ಶಾಸ್ತ್ರಗಳ ಸ್ವಾಧ್ಯಾಯವನ್ನು ಮಾಡದವನು ಯಾವ ಕಾರ್ಯಕ್ಷೇತ್ರದಲ್ಲಿಯೂ ಸಫಲನಾಗಲಿಕ್ಕೆ ಸಾಧ್ಯವಿಲ್ಲ. ಈ ಮಾತು, ವ್ಯಾಪಾರ ಅಥವಾ ಔದ್ಯೋಗಿಕ ಕ್ಷೇತ್ರದಲ್ಲಿರುವವರಿಗೂ ಸಲ್ಲುತ್ತದೆ. ವಿದ್ಯಾ ಅಥವಾ ಸಾರ್ವಜನಿಕ ಕ್ಷೇತ್ರದಲ್ಲಿರುವವರಿಗೂ ಸಲ್ಲುತ್ತದೆ. ಯಾಕೆಂದರೆ ಯೋಗದಿಂದ ಮನುಷ್ಯನ ವ್ಯಕ್ತಿತ್ವವು ವಿಕಸಿತವಾಗುತ್ತದೆ. ವ್ಯವಹಾರ ಕುಶಲತೆಯು ಬೆಳೆಯುತ್ತದೆ. ಪ್ರೀತಿ ವಿಶ್ವಾಸಗಳು ಸದೃಢವಾಗುತ್ತವೆ. ಇದರಿಂದ ಐಕ್ಯತೆ, ಏಕಾತ್ಮತೆ, ಸುಖ, ಶಾಂತಿ, ಉನ್ನತಿ ಇತ್ಯಾದಿಗಳು ಲಭಿಸುತ್ತವೆ. ಸಭಾ ಸಂಸ್ಥೆಗಳಲ್ಲಿ ಈಗ ನಮಗೆ ಕಂಡು ಬರುತ್ತಿರುವ ಜಗಳಗಳಿಗೆ ಮುಖ್ಯಕಾರಣ, ಅಲ್ಲಿಯ ಕಾರ್ಯಕರ್ತರಲ್ಲಿರುವ ಯೋಗದ ಅಭಾವವಾಗಿದೆ. ಯೋಗದ ಅಭಾವದಿಂದಲೇ ಜನರ ಕಾರ್ಯಕ್ಷಮತೆ, ಕಾರ್ಯದಕ್ಷತೆ ಮತ್ತು ಯೋಗ್ಯತೆಯ ನ್ಯೂನತೆಯು ನಮಗೆ ಕಂಡು ಬರುತ್ತದೆ. ಇದರಿಂದ ನಮ್ಮ ಸಮಾಜಕ್ಕೆ, ದೇಶಕ್ಕೆ ಎಷ್ಟು ಹಾನಿಯಾಗುತ್ತದೆ ಎಂದು ಹೇಳಿ ಫಲವಿಲ್ಲ.

ಈ ಯೋಗ ಮೀಮಾಂಸದ ಇನ್ನೊಂದು ವಿಶೇಷತೆ ಏನೆಂದರೆ ಇದರಲ್ಲಿ ಯೋಗದ ಹೆಸರಿನಲ್ಲಿ ನಡೆಯುತ್ತಿರುವ ಅನೇಕ ಪ್ರಕಾರದ ಪಾಖಂಡಗಳ ಖಂಡನೆ ಮಾಡಲಿದೆ. ಅಂತೆಯೇ ಯೋಗದ ಕುರಿತಾಗಿ ಜನರಲ್ಲಿ ಹರಡಿರುವ ಅನೇಕ ರೀತಿಯ ಭ್ರಾಂತಿಗಳನ್ನು ಯೋಗ್ಯ ವಿದ್ವಾಂಸ ಲೇಖಕರು ಉತ್ತಮ ರೀತಿಯಲ್ಲಿ ದೂರ ಮಾಡಲು ಯತ್ನಿಸಿದ್ದಾರೆ. ಇದೊಂದು ದೊಡ್ಡ ಲೋಕೋಪಕಾರೀ ಕಾರ್ಯವಾಗಿದೆ.

ಈ ಎಲ್ಲಾ ಕಾರಣಗಳಿಂದ ಪೂಜ್ಯ ಸ್ವಾಮಿ ಸತ್ಯಪತಿ ಪರಿವ್ರಾಜಕರ ಈ ಸತ್ಪ್ರಯತ್ನವು ಸಫಲವಾಗಬೇಕು, ಮತ್ತು ಇದರ ಹಿಂದೆ ಅಡಕವಾಗಿರುವ ಅವರ ಉದಾತ್ತ ಕಾಮನೆಯೂ ಪೂರ್ಣವಾಗಲೇಬೇಕೆಂದು ನನ್ನ ಆಶಯ. ಇದರೊಂದಿಗೆ, ಇಂತಹ ಸತ್ಕಾರ್ಯದಲ್ಲಿ ರುಚಿ ತೋರಿಸಿ, ಪೂಜ್ಯ ಸ್ವಾಮಿ ಬ್ರಹ್ಮದೇವರ ಸತ್ಪ್ರಯಾಸ ಹಾಗೂ ಪ್ರೇರಣೆಯಿಂದ ಈ ಗ್ರಂಥದ ಕನ್ನಡ ಭಾಷಾಂತರವನ್ನು ಪ್ರಕಟನೆ ಮಾಡಲು ನಿಶ್ಚಯ ಮಾಡಿ, ಅನುವಾದದ ಕಾರ್ಯಕ್ಕೆ ನನ್ನನ್ನು ನಿಯುಕ್ತ ಮಾಡಿ ನನ್ನ ಮೇಲೆ ವಿಶ್ವಾಸವನ್ನು ತೋರಿಸಿ ನನ್ನನ್ನು ಗೌರವಿಸಿದ, ಆರ್ಯಸಮಾಜ, ವಿಶ್ವೇಶ್ವರಪುರಂ, ಬೆಂಗಳೂರು, ಇದರ ಕಾರ್ಯಕಾರಿಣೀ ಸಮಿತಿಯ ಸದಸ್ಯರಿಗೆಲ್ಲಾ ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಮಾತ್ರವಲ್ಲದೆ, ನನ್ನ ಅನುವಾದದ ಹಸ್ತಲಿಪಿಯನ್ನು ಪರಿಶೀಲಿಸಿ ಸುಂದರವಾದ ಮುದ್ರಣಪ್ರತಿಯನ್ನು ತಯಾರಿಸಿ ನನಗೆ ಸಹಕರಿಸಿದ ಶ್ರೀಕೃಷ್ಣ ಮತ್ತು ಶ್ರೀ ಸುಧಾಮ, ಇವರಿಗೂ ನನ್ನ ಕೃತಜ್ಞತೆಗಳನ್ನು ನಾನಿಲ್ಲಿ ಸಲ್ಲಿಸುತ್ತಿದ್ದೇನೆ.

ಧನ್ಯವಾದಗಳು

ಜ್ಯೇಷ್ಠವರ್ಮನ್

ಎಂ.ಎಸ್. 19/660 ಚೆಂಬೂರು ಕಾಲೋನಿ,

ದಿನಾಂಕ : 25ನೇ ಆಗಸ್ಟ್ 1992 ಮುಂಬಯಿ - 400 074

# ಭೂಮಿಕಾ

ಯೋಗವು ಸಂಪೂರ್ಣ ಮಾನವ ಸಮಾಜಕ್ಕೆ ಕಲ್ಯಾಣಕಾರಿಯಾಗಿರುವ ಒಂದು ಬಹಳ ಮಹತ್ವಪೂರ್ಣ ವಿದ್ಯೆಯಾಗಿದೆ. ಆದುದರಿಂದ ಇದರ ಪ್ರಚಾರ ಮತ್ತು ಪ್ರಸಾರ, ಇವೆರಡನ್ನೂ ಮಾಡುವುದು ಮಾತ್ರವಲ್ಲದೆ, ಮಾಡಿಸುವುದು, ಹಾಗೂ ಯೋಗದ ನಿಯಮಗಳನ್ನು ತಮ್ಮ ದೈನಂದಿನ ಜೀವನದಲ್ಲಿ ಆಚರಣೆಗೆ ತರುವುದು ಎಲ್ಲರ ಕರ್ತವ್ಯವಾಗಿದೆ. ಆದುದರಿಂದಲೇ ನಾನು ಈ ವಿಷಯದ ಮೇಲೆ ಲೇಖನಿ ಎತ್ತಿದ್ದೇನೆ.

ಇಷ್ಟು ಮಾತ್ರವಲ್ಲದೆ, ಈ ಕಾರ್ಯಕ್ಕೆ ನಾನು ಕೈ ಹಾಕುವುದಕ್ಕೆ ಇನ್ನೂ ಒಂದು ಕಾರಣ ಇದೆ. ವಿಶುದ್ಧ ವೇದಾನು-ಕೂಲ ಯೋಗದ ಅಭ್ಯಾಸದಿಂದ ನನಗೆ ಎಷ್ಟು ಲಾಭವಾಗಿದೆಯೋ ಅದನ್ನು ಅನ್ಯರೂ ತಿಳಿದು ಅವರೂ ಲಾಭಾನ್ವಿತರಾಗಬೇಕು, ಮತ್ತು ಇದರೊಟ್ಟಿಗೆ, ಯೋಗದ ಹೆಸರಿನಲ್ಲಿ ಹರಡಿರುವ ಕೆಲವು ಭ್ರಾಂತಿಗಳನ್ನು ದೂರ ಮಾಡಲೂಬೇಕು ಎಂದು ನನ್ನ ಅಭಿಲಾಶೆ.

ಈ ಪುಸ್ತಕದ ಪೂರ್ವಾರ್ಧದಲ್ಲಿ, ಯೋಗದರ್ಶನದ ಆಧಾರದ ಮೇಲೆ ಯೋಗದ ವಾಸ್ತವಿಕ ಸ್ವರೂಪ, ಅದರ ಫಲ, ಸಾಧನೆ, ಬಾಧಕಗಳು— ಇವುಗಳನ್ನೆಲ್ಲಾ ತಿಳಿಸಲು ಪ್ರಯತ್ನಿಸಿದ್ದೇನೆ. ಈ ಪೂರ್ವ ಭಾಗವನ್ನು ಓದಿ, ಮನನ ಇತ್ಯಾದಿಗಳಿಂದ ಯೋಗದ ಜಿಜ್ಞಾಸುಗಳು ಸುಲಭವಾಗಿ ಯೋಗದ ಮಾರ್ಗದಲ್ಲಿ ನಡೆದು ಸಫಲರಾಗಲು ಮತ್ತು ಅನ್ಯರಿಗೂ ಮಾರ್ಗದರ್ಶಕರಾಗಲು ಸಾಧ್ಯವಿದೆ. ಈ ಪುಸ್ತಕದ ಉತ್ತರಾರ್ಧದಲ್ಲಿ ಇಂದು ಲೇಖನ, ಉಪದೇಶ, ಮತ್ತು ಆಚರಣೆಗಳ ಮೂಲಕ ದೇಶ-ವಿದೇಶಗಳಲ್ಲಿ ಪ್ರಚಾರ ಮತ್ತು ಪ್ರಸಾರದ ವಿಷಯಗಳಾಗಿರುವ ಯೋಗಕ್ಕೆ ಸಂಬಂಧಪಟ್ಟ ಕೆಲವು ಭ್ರಾಂತಿಗಳ ವಿಶ್ಲೇಷಣೆ ಮಾಡಿರುತ್ತೇನೆ.

ಯೋಗಕ್ಕೆ ಸಂಬಂಧ ಪಟ್ಟ ಈ ಭ್ರಾಂತಿಗಳನ್ನು ಸರಿಯಾಗಿ ಅರಿತುಕೊಳ್ಳದೆ ಇದ್ದರೆ, ಮುಂದೆ ಯೋಗಮಾರ್ಗದಲ್ಲಿ ನಡೆಯುವುದು ಬಹಳ ಕಷ್ಟ. ಈ ಭ್ರಾಂತಿಗಳ ಖಂಡನೆಯನ್ನು ನಾನು ಸರ್ವರ ಹಿತದ ದೃಷ್ಟಿಯಿಂದ ಮಾಡಿದ್ದೇನೆಯೇ ಹೊರತು, ಯಾರಿಗೂ ಕೇಡನ್ನು ಬಗೆದು ಈ ಕಾರ್ಯ ಮಾಡಿಲ್ಲ. ಇಲ್ಲಿ ಪಕ್ಷಪಾತವನ್ನು ಬಿಟ್ಟು, ಯಾವುದು ಸತ್ಯವೋ ಅದನ್ನು ಸತ್ಯವೆಂದೂ, ಮತ್ತು ಯಾವುದು ಅಸತ್ಯವೋ ಅದನ್ನು

ಅಸತ್ಯವೆಂದೂ ಹೇಳುವುದು ನನ್ನ ಮುಖ್ಯ ಉದ್ದೇಶ್ಯವಾಗಿದೆ. ವೇದ ಮತ್ತು ವೇದಾನುಕೂಲ ಗ್ರಂಥಗಳ ಅಧ್ಯಯನ ಮತ್ತು ಕ್ರಿಯಾತ್ಮಕ ಯೋಗಾಭ್ಯಾಸಮಾಡಿ, ನಾನು ಇದರ ಪರಿಣಾಮವಾಗಿ ಈ ನಿಷ್ಕರ್ಷೆಗೆ ಬಂದಿದ್ದೇನೆ: ಏನೆಂದರೆ, ಕೇವಲ ವೈದಿಕ ಯೋಗಕ್ಕೆ ಮಾತ್ರ ನಮ್ಮ ಎಲ್ಲಾ ದುಃಖ ಕಷ್ಟಗಳನ್ನು ದೂರಮಾಡಿ ಮೋಕ್ಷಾನಂದವನ್ನು ಒದಗಿಸುವ ಸಾಮರ್ಥ್ಯವಿದೆ. ಬೇರೆ ಯಾವ ರೀತಿಯ ಯೋಗಕ್ಕೂ ಇದು ಸಾಧ್ಯವಿಲ್ಲ. ಈ ಗ್ರಂಥದಲ್ಲಿ, ಒಂದು ವೇಳೆ ಏನಾದರೂ ದೋಷಗಳು ಕಂಡುಬಂದರೆ, ಅದನ್ನು ಸಪ್ರಮಾಣವಾಗಿ ನನಗೆ ತೋರಿಸಿಕೊಡಬೇಕೆಂದು ಸಹೃದಯಿ ಮಹಾನುಭಾವರಲ್ಲಿ ನನ್ನ ನಿವೇದನೆ. ಈ ದೋಷಗಳನ್ನು ಖಂಡಿತವಾಗಿಯೂ ಅರಿತುಕೊಳ್ಳಲು ಪ್ರಯತ್ನಿಸುವೆನು ಮತ್ತು ಅವುಗಳನ್ನು ನಿವಾರಿಸುವೆನು.

ಕೊನೆಗೆ, ನಾನು ಈ ಗ್ರಂಥವನ್ನು ಬರೆಯುವುದಕ್ಕೆ ಸಮರ್ಥನಾಗುವಂತೆ ಮಾಡಿದ ಆ ಪರಮ ಪಿತ ಪರಮಾತ್ಮನ ಕೃಪೆಗಾಗಿ ನಾನು ಧನ್ಯವಾದಗಳನ್ನು ಹೇಳುತ್ತೇನೆ; ಯಾವ ಋಷಿ-ಮುನಿಗಳ ಗ್ರಂಥಗಳನ್ನು ಓದಿದುದರ ಫಲವಾಗಿ ಯೋಗದ ವಾಸ್ತವಿಕ ಸ್ವರೂಪವನ್ನು ತಿಳಿದುಕೊಳ್ಳುವುದಕ್ಕೆ ನನಗೆ ಸಹಾಯತೆ ಸಿಕ್ಕಿತೋ, ಅವರಿಗೂ ನಾನು ಕೃತಜ್ಞನಾಗಿದ್ದೇನೆ. ಯಾವ ವಿದ್ವಾಂಸರ ಸನ್ನಿಧಿಯಲ್ಲಿ ನಾನು ವಿದ್ಯೆಯನ್ನು ಕಲಿತಿರುವೆನೋ, ಅವರಿಗೂ ನನ್ನ ಧನ್ಯವಾದಗಳು; ಈ ಗ್ರಂಥದ ಲೇಖನ ಮತ್ತು ಸಂಶೋಧನೆಯ ಕಾರ್ಯದಲ್ಲಿ ನನಗೆ ಸಹಯೋಗ ಕೊಟ್ಟವರಿಗೂ ನನ್ನ ಕಡೆಯಿಂದ ಧನ್ಯವಾದಗಳು, ಮಾತ್ರವಲ್ಲದೆ ಈ ಗ್ರಂಥದ ಪ್ರಕಾಶನಕ್ಕಾಗಿ ಆರ್ಥಿಕ ಸಹಾಯತೆಯನ್ನು ನೀಡಿದವರಿಗೂ ಧನ್ಯವಾದಗಳು.

**ಸ್ವಾಮೀ ಸತ್ಯಪತಿ ಪರಿವ್ರಾಜಕ**

# ಯೋಗ ಮೀಮಾಂಸಾ

(ಪೂರ್ವಾರ್ಧ)

ಒಂದು

## ಸಮಾಧಿಪಾದ

### ಯೋಗ ಶಬ್ದಾರ್ಥ ವಿಚಾರ

ವ್ಯಾಕರಣದ ದೃಷ್ಟಿಯಿಂದ ನೋಡಿದರೆ ಯೋಗ ಶಬ್ದವು "ಯುಜ ಸಮಾಧೌ" ಎಂದರೆ ಸಮಾಧಿ ಅರ್ಥದಲ್ಲಿ "ಯುಜ" ಧಾತುವಿಗೆ ಘಞ ಪ್ರತ್ಯಯ ಸೇರಿಸಿದಾಗ ಸಿದ್ಧವಾಗುತ್ತದೆ. ಯೋಗದರ್ಶನದಲ್ಲಿ ಅನ್ಯಧಾತುಗಳಿಂದ ನಿಷ್ಪನ್ನವಾಗುವ ಯೋಗ ಶಬ್ದವನ್ನು ಪರಿಗಣಿಸಲಾಗುವುದಿಲ್ಲ. ಯಾಕೆಂದರೆ ಯೋಗದರ್ಶನದ ವ್ಯಾಸ-ಭಾಷೆಯಲ್ಲಿ "**ಯೋಗಃ ಸಮಾಧಿಃ**" (ಅಧ್ಯಾಯ 1 ಪಾದ 1), ಅರ್ಥಾತ್ ಸಮಾಧಿಯನ್ನೇ ಯೋಗ ಎಂದು ಹೇಳಲಾಗಿದೆ. ಇದು ಎಲ್ಲಾ ಸ್ಥಿತಿಗಳಲ್ಲಿಯೂ ಇರಬೇಕಾಗಿರುವ ಚಿತ್ತದ ಧರ್ಮವಾಗಿದೆ. ಚಿತ್ತವು ಐದು ಸ್ಥಿತಿಗಳಿಗೆ ಒಳಗಾಗುತ್ತದೆ. "**ಕ್ಷಿಪ್ತಂಮೂಢಂವಿಕ್ಷಿಪ್ತಮೇಕಾಗ್ರಂನಿರುದ್ಧಮಿತಿಚಿತ್ತಭೂಮಯಃ**"(ಯೋಗ ದರ್ಶನ ಅಧ್ಯಾಯ 1 ಪಾದ 1) ಕ್ಷಿಪ್ತ = ಅತಿಚಂಚಲ । ಮೂಢ = ಮೋಹಮಯ ಅಥವಾ ಮೂರ್ಛಿತ ಸ್ಥಿತಿ । ವಿಕ್ಷಿಪ್ತ = ಚಿತ್ತದ ಏಕಾಗ್ರತೆಯು ಯಾವುದಾದರೊಂದು ಕಾರಣದಿಂದ ಭಂಗವಾಗುವುದು । ಏಕಾಗ್ರ = ಧೀರ್ಘಕಾಲ ಚಿತ್ತವು ಯಾವುದಾದರೂ ಒಂದೇ ವಿಷಯದಲ್ಲಿ ಸ್ಥಿರವಾಗಿರುವುದು । ಇದಕ್ಕೆ ಯೋಗದರ್ಶನದಲ್ಲಿ ಸಂಪ್ರಜ್ಞಾತ ಸಮಾಧಿ ಎಂದು ಹೇಳುತ್ತಾರೆ. ನಿರುದ್ಧ = ಸಂಪ್ರಜ್ಞಾತ ಸಮಾಧಿಯೂ ನಿಂತು ಬಿಡುವ ಸ್ಥಿತಿ. ಇದಕ್ಕೆ ಅಸಂಪ್ರಜ್ಞಾತ ಸಮಾಧಿ ಅಥವಾ ನಿರ್ಬೀಜಸಮಾಧಿ ಎಂದೂ ಹೇಳುತ್ತಾರೆ. ಈ ಸ್ಥಿತಿಯಲ್ಲಿಯೇ ಪರಮಾತ್ಮನ ದರ್ಶನ ಲಭ್ಯವಾಗುತ್ತದೆ.

  

**ಪ್ರಶ್ನೆ** :– ಈ ಸ್ಥಿತಿಯು ಜ್ಞಾನ ಶೂನ್ಯವೆ?

**ಉತ್ತರ** :– ಅಲ್ಲ. ಇದು ಜ್ಞಾನದ ಅತ್ಯುನ್ನತ ಮಟ್ಟವಾಗಿದೆ. ಯಾರು ಇದನ್ನು ಜ್ಞಾನಶೂನ್ಯ (ಜ್ಞಾನಾಲಯ)ದ ಸ್ಥಿತಿ ಎಂದು ಹೇಳುತ್ತಾರೋ ಅವರು ಯೋಗ ವಿದ್ಯೆಯನ್ನು ಸರಿಯಾಗಿ ತಿಳಿದುಕೊಂಡಿಲ್ಲ. ಇಲ್ಲಿ ವಾಸ್ತವಿಕವಾಗಿ ಜೀವಾತ್ಮನು ವಿಕೃತಿ ಮತ್ತು ಪ್ರಕೃತಿಯ ಭೇದವನ್ನು ಸರಿಯಾಗಿ ತಿಳಿದುಕೊಂಡು ಪರಮಾತ್ಮನ ಸ್ವರೂಪದಲ್ಲಿ ಮಗ್ನನಾಗಿರುತ್ತಾನೆ. ಇದೇ ಪರಮಾತ್ಮನ ಉಪಾಸನೆ.

ಪರಮಾತ್ಮನ ಉಪಾಸನೆಯಿಂದ ಜ್ಞಾನದ ವಿಶೇಷ ಪ್ರವೃದ್ಧಿಯಾಗುತ್ತದೆ. ಅಜ್ಞಾನದ ಲಯವಾಗುತ್ತದೆ. ಆದುದರಿಂದ ಚಿತ್ತದ ಈ ನಿರುದ್ಧ ಸ್ಥಿತಿಯನ್ನು ಅಜ್ಞಾನ ಅಥವಾ ಅವಿದ್ಯೆಯ ಶೂನ್ಯ ಸ್ಥಿತಿ ಎಂದು ಹೇಳಬಹುದೇ ಹೊರತು, ಜ್ಞಾನ ಶೂನ್ಯ ಸ್ಥಿತಿ ಎಂದು ಹೇಳುವುದು ಸರಿಯಲ್ಲ.

ಈ ರೀತಿ ಚಿತ್ತ ಮತ್ತು ಚಿತ್ತದ ಐದು ಅವಸ್ಥಾಂತರಗಳ ಸರಿಯಾದ ಜ್ಞಾನವು ಯೋಗ ಜಿಜ್ಞಾಸುಗಳಿಗೆ ಬಹಳ ಅಗತ್ಯವಾಗಿದೆ. ಸಾಮಾನ್ಯವಾಗಿ ಯೋಗಾಭ್ಯಾಸ ಮಾಡುವವರು ಚಿತ್ತವನ್ನು ಸಚೇತನವೆಂದು ನಂಬಿಕೊಂಡಿರುತ್ತಾರೆ. ಆದುದರಿಂದ ಇವರಿಗೆ ಚಿತ್ತವನ್ನು ವಶೀಕರಿಸಲು ಸಾಧ್ಯವಾಗುವುದಿಲ್ಲ.

## ಯೋಗದ ವಾಸ್ತವಿಕ ಸ್ವರೂಪ

ಈಗಿನ ಕಾಲದಲ್ಲಿ ಜನರು ನಾನಾ ಪ್ರಕಾರದ ಯೋಗಗಳನ್ನು ಪ್ರಚಾರಕ್ಕೆ ತರುತ್ತಿದ್ದಾರೆ. ಬ್ರಹ್ಮನಲ್ಲಿ ಲೀನವಾಗುವುದೇ ಯೋಗ ಎಂದು ಕೆಲವರು ; ಭೂಮಿಯ ಅಡಿಯಲ್ಲಿ ಕುಳಿತುಕೊಳ್ಳುವುದು ನಿಜವಾದ ಯೋಗ ಎಂದು ಇನ್ನು ಕೆಲವರು ; ನಾನಾ ಪ್ರಕಾರದ ಆಸನಗಳ ಅಭ್ಯಾಸ ಮಾಡುವುದು ಯೋಗವೆಂದು ಮತ್ತೆ ಕೆಲವರು ಹೇಳುತ್ತಾರೆ. ಎಲ್ಲಾ ಭೋಗಗಳನ್ನು ಸೇವಿಸಿಕೊಂಡು ಸುಖವಾಗಿ ಬಾಳುವುದೇ ಯೋಗ ಎಂದು ಹೇಳುವವರೂ ಇದ್ದಾರೆ. ಕೆಲವರು ಜನರನ್ನು ದೀರ್ಘಕಾಲ ಉಪವಾಸದಲ್ಲಿಟ್ಟು ಬಳಲಿಸಿ, ದುರ್ಬಲರನ್ನಾಗಿ ಮಾಡಿ, ಮೂರ್ಛಿತರನ್ನಾಗಿ ಮಾಡುತ್ತಾರೆ, ಮತ್ತು ಅವರ ನಾಡಿ ಪರೀಕ್ಷೆಮಾಡುತ್ತಾರೆ. ಈ ಮೂರ್ಛೆಯ ಸ್ಥಿತಿಯನ್ನೂ ಇವರು ಯೋಗವೆಂದು ಹೇಳುತ್ತಾರೆ. ಈ ಮೊದಲು ಹೇಳಿದಂತೆ ಜ್ಞಾನ ಶೂನ್ಯತೆಯ ಸ್ಥಿತಿಯನ್ನು ಯೋಗವೆಂದು ಹೇಳುವವರೂ ಇದ್ದಾರೆ. ದೀರ್ಘಕಾಲ ಶ್ವಾಸೋಚ್ಛ್ವಾಸವನ್ನು ನಿಲ್ಲಿಸಿ ಇಟ್ಟುಕೊಳ್ಳುವುದನ್ನು ಯೋಗವೆಂದು ಹೇಳುವವರು

ಕಡಿಮೆ ಇಲ್ಲ. ಕೆಲವರ ದೃಷ್ಟಿಯಲ್ಲಿ ಹಠಯೋಗದಲ್ಲಿ ಕಲಿಸಲಾಗುವ ನೇತಿ, ಧೌತಿ ಇತ್ಯಾದಿ ಷಟ್ಕರ್ಮಗಳೇ ಯೋಗವಾಗಿದೆ. ಇನ್ನು ಕೆಲವರ ದೃಷ್ಟಿಯಲ್ಲಿ ಮೌನ ವ್ರತಧಾರಣೆಮಾಡಿ ಏಕಾಂತದಲ್ಲಿ ಕುಳಿತುಕೊಂಡಿರುವುದು ಯೋಗವಾಗಿದೆ. ತಮ್ಮ ಇಷ್ಟದೇವತೆಗೆ ಪಶುಬಲಿ ಕೊಡುವುದನ್ನು ಕೂಡ ಯೋಗವೆಂದು ಕರೆಯುವವರ ಸಂಖ್ಯೆ ಕಡಿಮೆಯಿಲ್ಲ. ಈ ರೀತಿ ಯೋಗದ ಹೆಸರಿನಲ್ಲಿ ಅನೇಕ ಅಂಧ ಪರಂಪರೆಗಳು ಈಗ ಪ್ರಚಾರದಲ್ಲಿವೆ. ಇಲ್ಲಿ ಸತ್ಯ ಸಂಗತಿ ಏನೆಂದರೆ, ಇವುಗಳಲ್ಲಿ ನಿಜವಾಗಿ ಯಾವುದೂ ಯೋಗವಲ್ಲ.

ಮಹರ್ಷಿ ಪತಂಜಲಿ ಯೋಗದ ವಾಸ್ತವಿಕ ಸ್ವರೂಪವನ್ನು ಈ ರೀತಿ ಹೇಳಿ ಕೊಟ್ಟಿದ್ದಾರೆ :

**ಯೋಗಶ್ಚಿತ್ತವೃತ್ತಿನಿರೋಧಃ ।** [ಯೋಗದರ್ಶನ 1-2]

ಅರ್ಥಾತ್, ಚಿತ್ತವೃತ್ತಿಯ ನಿರೋಧವೇ ಯೋಗ. ಚಿತ್ತವು ಒಂದು ಜಡಪದಾರ್ಥವಾಗಿದೆ. ಸತ್ವ, ರಜ ಮತ್ತು ತಮೋಗುಣಗಳ ಸಂಯೋಗದಿಂದ ಇದರ ರಚನೆಯಾಗಿದೆ. ಜೀವಾತ್ಮನ ಪ್ರಭಾವದಿಂದಾಗಿ ಅದರಲ್ಲಿ ನಾನಾ ಪ್ರಕಾರದ ತರಂಗಗಳು ಉತ್ಪನ್ನವಾಗುತ್ತವೆ. ಈ ತರಂಗಗಳ ಉತ್ಪತ್ತಿ-ಲಯವನ್ನೇ ಚಿತ್ತವೃತ್ತಿ ಎಂದು ಹೇಳುತ್ತಾರೆ. [ಚಿತ್ತಂ ಹಿ ಪ್ರಖ್ಯಾ ಪ್ರವೃತ್ತಿ ಸ್ಥಿತಿಶೀಲತ್ವಾತ್ ತ್ರಿಗುಣಮ್॥ ಯೋಗದರ್ಶನ-1-2ರಲ್ಲಿ ವ್ಯಾಸ ಭಾಷ್ಯ]

ಯಾವ ರೀತಿಯಲ್ಲಿ ಕನ್ನಡಿಯಲ್ಲಿ ಪ್ರತಿಬಿಂಬವು ಕಂಡು ಬರುತ್ತದೆಯೋ ಅದೇ ರೀತಿ ಚಿತ್ತದಲ್ಲಿ ಜೀವಾತ್ಮನ ಪ್ರಭಾವವು ಪ್ರತಿಫಲಿಸುತ್ತದೆ. ಈ ರಹಸ್ಯವನ್ನು ಅರಿತುಕೊಂಡು ಅಭ್ಯಾಸ ಪೂರ್ವಕ ಚಿತ್ತದ ಈ ವೃತ್ತಿಯನ್ನು ತಡೆದಿಡುವುದೇ ಯೋಗವಾಗಿದೆ.

ಈ ಯೋಗವು ಸಂಪ್ರಜ್ಞಾತ ಮತ್ತು ಅಸಂಪ್ರಜ್ಞಾತ ಎಂದು ಎರಡು ವಿಧವಾಗಿದೆ. ಯೋಗಾಭ್ಯಾಸಿಯು ತನ್ನ ಚಿತ್ತದ ಮೇಲೆ ಪೂರ್ಣ ಅಧಿಕಾರವನ್ನು ಸಿದ್ಧಿಸಿದಾಗ ಅವನಿಗೆ ಸಂಪ್ರಜ್ಞಾತ ಯೋಗವು ಲಭಿಸುತ್ತದೆ. ಈ ಸ್ಥಿತಿಯಲ್ಲಿ ಅವನ ಚಿತ್ತವು ಅವನ ಇಚ್ಛೆಯಂತೆ ಬಹು ದೀರ್ಘಕಾಲ ಒಂದೇ ವಿಷಯದ ಮೇಲೆ ಕೇಂದ್ರೀಕೃತವಾಗುತ್ತದೆ. ಇದನ್ನೇ ಏಕಾಗ್ರತೆ ಎಂದು ಹೇಳುತ್ತಾರೆ. ಉದಾಹರಣೆಗಾಗಿ : 'ಓಂ' ಇದು ಪರಮಾತ್ಮ-ವಾಚಕ ಶಬ್ದವಾಗಿದೆ. ಪರಮಾತ್ಮನು ಇಲ್ಲಿ ವಾಚ್ಯ, ಅರ್ಥಾತ್ 'ಓಂ' ಶಬ್ದದ ಅರ್ಥ (ವಸ್ತು)ವಾಗಿದೆ. ಈ ರೀತಿ ಯೋಗಿಯು ವಾಚಕ ಶಬ್ದ ಮತ್ತು ವಾಚ್ಯ ವಸ್ತುವಿನ ಸಂಬಂಧವನ್ನು ಅರಿತುಕೊಂಡು 'ಓಂ' ಈ ಪ್ರಣವ

ಮಂತ್ರದ ಜಪಮಾಡುತ್ತಾನೆ. ಈ ರೀತಿ ಜಪಮಾಡುವಾಗ ಅವನು ತನ್ನ ಮನಸ್ಸಿನಲ್ಲಿ ಅನ್ಯ ಯಾವುದೇ ವಿಷಯವನ್ನು ಯೋಚಿಸುವುದಿಲ್ಲ. ಚಿತ್ತದ ಈ ಏಕಾಗ್ರತೆಯೇ ಸಂಪ್ರಜ್ಞಾತ ಸಮಾಧಿಯಾಗಿದೆ. ಇದನ್ನು ಸಬೀಜ ಸಮಾಧಿ ಎಂದೂ ಹೇಳುತ್ತಾರೆ. ಈ ಸಂಪ್ರಜ್ಞಾತ ಸಮಾಧಿಯು ಪರಿಪಕ್ವವಾದಾಗ ಯೋಗಿಗೆ ಋತಂಭರಾ ಎಂಬ ವಿಶೇಷ ರೀತಿಯ ಪ್ರಜ್ಞೆಯು ಲಭಿಸುತ್ತದೆ. ಈ ಸ್ಥಿತಿಯಲ್ಲಿ ಯೋಗಿಯ ಬುದ್ಧಿಯು ಕೇವಲ ಸತ್ಯ ಜ್ಞಾನವನ್ನೇ ಧಾರಣೆ ಮಾಡಿಕೊಂಡಿರುತ್ತದೆ. ಮಿಥ್ಯೆಗೆ ಇಲ್ಲಿ ಸ್ಥಾನ ಇರುವುದಿಲ್ಲ.

ಯೋಗಿಯು ಈ ಸ್ಥಿತಿಯನ್ನು ಹೊಂದಿದ ನಂತರ, ಅವನು ಪ್ರಾಪಂಚಿಕ ಜನರನ್ನು ನೋಡುವ ದೃಷ್ಟಿಯೇ ಬದಲಾಗುತ್ತದೆ. ಯಾವ ರೀತಿಯಲ್ಲಿ ಉನ್ನತ ಪರ್ವತ ಶಿಖರವನ್ನು ಏರಿದ ಒಬ್ಬ ವ್ಯಕ್ತಿಗೆ ಕೆಳಗೆ ನೆಲದ ಮೇಲಿನ ಜನರು ಹೇಗೆ ಕಾಣುತ್ತಾರೆಯೋ, ಅದೇ ರೀತಿ ಯೋಗಿಗೆ ಇತರ ಸಾಂಸಾರಿಕ ಜನರು ಕಂಡು ಬರುತ್ತಾರೆ. ಈ ಯೋಗಿಯು ತಾನು ಅಜ್ಞಾನ ಮತ್ತು ಕಷ್ಟಗಳಿಂದ ಬಿಡುಗಡೆ ಹೊಂದಿ, ನಿಜವಾದ ಸ್ವಾತಂತ್ರ್ಯವನ್ನು ಅನುಭವಿಸುತ್ತಾನೆ. ಇವನಿಗೆ ಇತರ ಪ್ರಾಪಂಚಿಕ ಜನರು ಕ್ಲೇಶಗ್ರಸ್ತರಾಗಿರುವಂತೆ ತೋರಿಬರುತ್ತಾರೆ. ಇಂತಹ ಯೋಗಿಗೆ ಪರಮಾತ್ಮನ ಅನುಭೂತಿ ಆಗಿರುವುದರಿಂದ, ಲೌಕಿಕ ಪದಾರ್ಥಗಳ ಕಡೆಗೆ ಅವನಿಗೆ ವೈರಾಗ್ಯವು ಉತ್ಪನ್ನವಾಗುತ್ತದೆ. ಈ ಸಂಸಾರದಲ್ಲಿ ಅವನಿಗೆ ಏನೂ ಸಾರವು ಕಾಣುವುದಿಲ್ಲ. ಯೋಗಿಯು ಈ ಸ್ಥಿತಿಯನ್ನು ಹೊಂದಿದಾಗ, ಅವನಿಗೆ ಸಂಪ್ರಜ್ಞಾತ ಸಮಾಧಿಯು ಕೂಡ ಪರಮಾತ್ಮನ ಅನುಭೂತಿಗೆ ಅಡ್ಡಿಯಾಗಿರುವಂತೆ ಕಾಣುತ್ತದೆ. ಆದುದರಿಂದ ಈ ಸ್ಥಿತಿಯನ್ನು ಹೊಂದಿದಾಗ ಅವನಿಗೆ ಸಂಪ್ರಜ್ಞಾತ ಸಮಾಧಿಯು ಕೂಡ ಪರಮಾತ್ಮನ ಅನುಭೂತಿಗೆ ಅಡ್ಡಿಯಾಗಿರುವಂತೆ ಕಾಣುತ್ತದೆ. ಆದುದರಿಂದ ಈ ಯೋಗಿಯು ಅದನ್ನು ಬಿಟ್ಟು ಬಿಡುತ್ತಾನೆ. ಈಗ ಇವನ ಏಕಾಗ್ರತೆಯ ವಸ್ತುವು ಯಾವುದೇ ಲೌಕಿಕವಸ್ತು ಆಗಿರದೆ, ಅದರ ಬದಲಿಗೆ ಪಾರ ಲೌಕಿಕ ವಸ್ತು, ಪರಮಾತ್ಮ-ತತ್ವವು ಅವನ ಏಕಾಗ್ರತೆಯ ಕೇಂದ್ರವಾಗುತ್ತದೆ. ಈ ಸ್ಥಿತಿಯನ್ನೇ ಅಸಂಪ್ರಜ್ಞಾತ ಸಮಾಧಿ ಎನ್ನುತ್ತಾರೆ. ಇದನ್ನೇ ನಿರ್ಬೀಜ ಸಮಾಧಿ ಎಂದೂ ಕರೆಯುತ್ತಾರೆ. ಈ ಸ್ಥಿತಿಯಲ್ಲಿಯೇ ಯೋಗಿಗೆ ಪರಮಾತ್ಮನು ಗೋಚರನಾಗುತ್ತಾನೆ. ಇಲ್ಲಿಯೇ ಅವನಿಗೆ ವಿಶೇಷ ಜ್ಞಾನ ಮತ್ತು ಪರಮಾನಂದವು ಪ್ರಾಪ್ತವಾಗುತ್ತದೆ. ಅಗ್ನಿಯಲ್ಲಿ ಕಾದು ಕೆಂಪಾದ ಲೋಹದಲ್ಲಿ ಸರ್ವತ್ರ ಅಗ್ನಿಯೇ ಕಾಣುವಂತೆ, ಯೋಗಿಗೆ ಪ್ರಪಂಚದಲ್ಲಿ ಸರ್ವತ್ರ ಪರಮಾತ್ಮನೇ ಕಾಣುತ್ತಾನೆ. ಯಾವ ರೀತಿಯಲ್ಲಿ ಸಾಮಾನ್ಯ ಮನುಷ್ಯನಿಗೆ ಮಧುವಿನ ಸೇವನೆಯಿಂದ ಆನಂದವಾಗುತ್ತದೆಯೋ, ಅದೇ ರೀತಿಯಲ್ಲಿ ಯೋಗಿಗೆ ಪರಮಾತ್ಮನು ಗೋಚರವಾದಾಗ ಪರಮಾನಂದದ ಅನುಭವವಾಗುತ್ತದೆ.

## ಲೌಕಿಕ ಸುಖ ಮತ್ತು ಮೋಕ್ಷ ಸುಖದಲ್ಲಿರುವ ವ್ಯತ್ಯಾಸ

ಲೌಕಿಕ ಸುಖ ಮತ್ತು ಪರಮಾತ್ಮನ ಪ್ರಾಪ್ತಿಯಿಂದ ಒದಗುವ ಸುಖ— ಇವೆರಡಕ್ಕೂ ಮಹದಂತರವಿದೆ. ಲೌಕಿಕ ಸುಖವು ಕ್ಷಣಿಕ ಮತ್ತು ಪರಮಾತ್ಮ - ಪ್ರಾಪ್ತಿಯ ಸುಖವು ಶಾಶ್ವತವಾಗಿದೆ. ಲೌಕಿಕ ಸುಖವು ದುಃಖ ಮಿಶ್ರಿತವಾಗಿರುತ್ತದೆ. ಪರಮಾತ್ಮಪ್ರಾಪ್ತಿಯ ಸುಖದಲ್ಲಿ ದುಃಖವು ಇಲ್ಲವೇ ಇಲ್ಲ. ಲೌಕಿಕ ಸುಖಕ್ಕೆ ಮಿತಿ ಇದೆ. ಆದುದರಿಂದ ಜನರು ಲೌಕಿಕ ಸುಖದಿಂದ ಬೇಸರ ಪಡುವುದೂ ಇದೆ. ಪರಮಾತ್ಮನ ಪ್ರಾಪ್ತಿಯ ಸುಖದಲ್ಲಿ ಎಂದಿಗೂ ಇಂತಹ ಸ್ಥಿತಿಯು ಉತ್ಪನ್ನವಾಗುವುದಿಲ್ಲ. ಲೌಕಿಕ ಸುಖದಿಂದ ಜನರು ರೋಗಿಗಳಾಗುವುದೂ ಇದೆ. ಪರಮಾತ್ಮನ ಸುಖದಿಂದ ಜನರು ರೋಗಿಗಳಾಗುವ ಪ್ರಶ್ನೆಯೇ ಇಲ್ಲ. ಲೌಕಿಕ ಸುಖವನ್ನು ಅನುಭವಿಸುವ ವ್ಯಕ್ತಿ ತನ್ನ ಮನಸ್ಸು ಮತ್ತು ಇಂದ್ರಿಯಗಳ ವಶವರ್ತಿಯಾಗುತ್ತಾನೆ. ಪರಮಾತ್ಮನ ಪ್ರಾಪ್ತಿಯ ಸುಖವನ್ನು ಅನುಭವಿಸುವ ವ್ಯಕ್ತಿ ತನ್ನ ಮನಸ್ಸು ಮತ್ತು ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಳ್ಳುತ್ತಾನೆ. ಈ ರೀತಿ ಲೌಕಿಕ ಸುಖಕ್ಕೂ ಅಲೌಕಿಕ ಸುಖಕ್ಕೂ ತುಂಬಾ ವ್ಯತ್ಯಾಸ ಇದೆ. ಕೇವಲ ಪರಮಾತ್ಮನ ಪ್ರಾಪ್ತಿಯ ಅಲೌಕಿಕ ಸುಖದಿಂದಲೇ ಜನರಿಗೆ ಪರಮ ತೃಪ್ತಿಯು ದೊರೆಯುತ್ತದೆ. ಇದು ಒಂದು ಬಾರಿ ದೊರೆತ ನಂತರ ಇತರ ಯಾವ ಆಶೇ ಅಭಿಲಾಶೆಗಳು ಶೇಷ ಉಳಿಯುವುದಿಲ್ಲ. ಒಬ್ಬ ಸಾಂಸಾರಿಕ ವ್ಯಕ್ತಿಯು ಕಷ್ಟಗಳಿಂದ ಬಿಡುಗಡೆ ಹೊಂದಿ, ಸುಖದ ಪ್ರಾಪ್ತಿಗಾಗಿ, ಸರ್ವಸ್ವವನ್ನೂ ತ್ಯಾಗಮಾಡಿ, ಒಂದು ವೇಳೆ ಚಕ್ರವರ್ತಿ ರಾಜ್ಯವನ್ನು ಪ್ರಾಪ್ತಿಮಾಡಿಕೊಂಡರೂ, ಕೂಡ, ಪರಮಾತ್ಮನ ಪ್ರಾಪ್ತಿಯಿಂದ ಒಬ್ಬ ಯೋಗಿಗೆ ಸಿಗುವ ಸುಖದ ಅನುಭವವು ಆತನಿಗೆ ಸಿಗಲು ಸಾಧ್ಯವಿಲ್ಲ. ಇದರಿಂದ, ಮಾನವ ಜೀವನದ ಪೂರ್ಣ ಸಫಲತೆಯ ಆಧಾರ ಯೋಗ, ಪ್ರಾಪಂಚಿಕ ವಿಷಯಗಳು ಅಲ್ಲ, ಎಂದು ಸಿದ್ಧವಾಗುತ್ತದೆ. ಆದುದರಿಂದ ಪ್ರತಿಯೊಬ್ಬ ವ್ಯಕ್ತಿಯೂ ಕೂಡ ತನು, ಮನ ಮತ್ತು ಧನದಿಂದ ಯೋಗದ ಪ್ರಾಪ್ತಿಗಾಗಿ ಪ್ರಯತ್ನವನ್ನು ಮಾಡಬೇಕು ಮತ್ತು ಯೋಗ ವಿರೋಧಿ ಮಾರ್ಗವನ್ನು ಸರ್ವಥಾ ಬಿಟ್ಟುಬಿಡಬೇಕು.

## ಯೋಗದರ್ಶನದ ಮೂಲ ಆಧಾರವು ವೇದ

ಯೋಗವಿದ್ಯೆಯ ಮೂಲವು ವೇದವಾಗಿದೆ.

**ಯುಂ ಜಾನಃ ಪ್ರಥಮಂ ಮನಸ್ತತ್ತ್ವಾಯ ಸವಿತಾ ಧಿಯಃ ।**
**ಅಗ್ನೇ ಜ್ಯೋತಿರ್ನಿಚಾಯ್ಯ ಪೃಥಿವ್ಯಾ ಅಧ್ಯಾಭರತ್ ॥** [ಯಜು 11-1]

ಈ ಮಂತ್ರದ ಭಾಷ್ಯೆಯಲ್ಲಿ ಮಹರ್ಷಿ ದಯಾನಂದರು ಈ ರೀತಿ ಬರೆದಿದ್ದಾರೆ. "[ಯುಂಜಾನಃ] ಯೋಗಾಭ್ಯಾಸ ಮಾಡುವ ಜನರು [ತತ್ತ್ವಾಯ] ಪರಮ ತತ್ತ್ವ ಎಂದರೆ ಬ್ರಹ್ಮಜ್ಞಾನದ ಪ್ರಾಪ್ತಿಗಾಗಿ[ಪ್ರಥಮಂ ಮನಃ] ಮೊತ್ತ ಮೊದಲು ತಮ್ಮ ಮನಸ್ಸನ್ನು ಪರಮಾತ್ಮನಲ್ಲಿ ಕೇಂದ್ರಿತವನ್ನಾಗಿ ಮಾಡುತ್ತಾರೆ. ಆಗ [ಸವಿತಾ] ಪರಮೇಶ್ವರನು ತನ್ನ ಕೃಪೆಯಿಂದ [ಧಿಯಂ] ಅವರ ಬುದ್ಧಿಯನ್ನು ತನ್ನಲ್ಲಿ ಧರಿಸಿಕೊಳ್ಳುತ್ತಾನೆ. [ಅಗ್ನಿರ್ಜ್ಯೋತಿಃ] ಮತ್ತೆ ಅವರು ಪರಮಾತ್ಮನ ಪ್ರಕಾಶವನ್ನು ವಿಶ್ವಾಸಪೂರ್ವಕವಾಗಿ [ಅಧ್ಯಾಭರತ್] ಯಥಾಪ್ರಕಾರ ಧಾರಣೆ ಮಾಡಿಕೊಳ್ಳುತ್ತಾರೆ. ಪೃಥ್ವಿಯ ಮೇಲೆ ಯೋಗಿಗಳ ಇದೇ ಪ್ರಸಿದ್ಧ ಲಕ್ಷಣವಾಗಿದೆ" [ದ್ರಷ್ಟವ್ಯಃ ಋಗ್ವೇದಾದಿ ಭಾಷ್ಯಭೂಮಿಕಾ ಉಪಾಸನಾ ವಿಷಯಃ].

ವೇದದ ಇನ್ನೊಂದು ಮಂತ್ರವು ಈ ರೀತಿ ಹೇಳುತ್ತದೆ.

**ವೇದಾಹಮೇತಂ ಪುರುಷಂ ಮಹಾಂತಮಾದಿತ್ಯವರ್ಣಂ ತಮಸಃ ಪರಸ್ತಾತ್ ।**
**ತಮೇವ ವಿದಿತ್ವಾತಿ ಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇಽಯನಾಯ ॥**

[ಯಜು. 31-18]

ಈ ಮಂತ್ರದ ಭಾವಾರ್ಥ ಹೀಗಿದೆ : ವಿದ್ವಾಂಸನಾದ ವ್ಯಕ್ತಿಯು ತಾನು ಪರಮಾತ್ಮನನ್ನು ತಿಳಿದುಕೊಂಡು, ಇತರ ಜನರಿಗೆ ತಾನು, "ಆ ಮಹಾನ್ ಗುಣಗಳಿಂದ ಯುಕ್ತವಾದ ಜ್ಞಾನದಿಂದ ಪರಿಪೂರ್ಣವಾದ ಮತ್ತು ಅಜ್ಞಾನದ ಲೇಶವೂ ಇಲ್ಲದ ಪರಮಾತ್ಮನನ್ನು ಅರಿತುಕೊಂಡಿದ್ದೇನೆ ; ಆದುದರಿಂದ ನಾನು ವಿಶ್ವಾಸ ಪೂರ್ವಕವಾಗಿ ಹೇಳಬಲ್ಲೆನು, ಏನೆಂದರೆ, ಆ ಪರಮಾತ್ಮನನ್ನು ಅರಿತು ಕೊಂಡನಂತರವೇ ಮನುಷ್ಯರು ಜನ್ಮ-ಮರಣಗಳ ದುಃಖದಿಂದ ಮುಕ್ತರಾಗಬಲ್ಲರು, ಮತ್ತು ಈ ದುಃಖದಿಂದ ಬಿಡುಗಡೆ ಹೊಂದಲು ಬೇರೆಯಾವ ಮಾರ್ಗವೂ ಇಲ್ಲ", ಎಂದು ಹೇಳುತ್ತಾನೆ.

ಇದರಿಂದ ವೇದವೇ ಯೋಗದ ಆದಿಮೂಲವೆಂದು ಸಿದ್ಧವಾಗುತ್ತದೆ. ಈ ವೇದೋಕ್ತಯೋಗವನ್ನೇ ಸೃಷ್ಟಿಯ ಪ್ರಾರಂಭದಿಂದ ಯೋಗಿಗಳು ಪ್ರಚಾರ ಮಾಡಿಕೊಂಡು ಬಂದಿದ್ದಾರೆ. ಪತಂಜಲಿ ಮುನಿಗಳು ತಮ್ಮ ಯೋಗದರ್ಶನದಲ್ಲಿ ಈ ವೇದೋಕ್ತಯೋಗವನ್ನೇ ತೋರಿಸಿಕೊಟ್ಟಿದ್ದಾರೆ.

## ಯೋಗದ ಫಲ

ಪರಮಾನಂದವೇ ಯೋಗದ ಫಲವಾಗಿದೆ ಅದು ಈ ರೀತಿಯಾಗಿದೆ :

**ತದಾ ದ್ರಷ್ಟುಃ ಸ್ವರೂಪೇಽವಸ್ಥಾನಮ್ ॥** [ಯೋಗದರ್ಶನ 1-3]

ಎಂದರೆ, ಚಿತ್ತವೃತ್ತಿಯು ಸಂಪೂರ್ಣ ನಿಂತು ಹೋದಾಗ, ಸರ್ವದ್ರಷ್ಟಾಪರಮಾತ್ಮನ ಸ್ವರೂಪದಲ್ಲಿ ಜೀವಾತ್ಮನು ಸ್ಥಿತನಾಗುತ್ತಾನೆ. ಅರ್ಥಾತ್, ಜೀವಾತ್ಮನು ಪರಮಾತ್ಮನ ನಿಜ ಸ್ವರೂಪವನ್ನು ಸರಿಯಾಗಿ ಅರಿತುಕೊಂಡು, ಪ್ರಾಕೃತಿಕ ವಸ್ತುಗಳ ಉಪಾಸನೆಯನ್ನು ಬಿಟ್ಟು, ಕೇವಲ ಪರಮಾತ್ಮನ ಸ್ವರೂಪದಲ್ಲಿಯೇ ಮಗ್ನ ನಾಗುತ್ತಾನೆ; ಅದರಲ್ಲಿ ಜೀವಾತ್ಮನಿಗೆ ಪರಮ ಸತ್ಯದ ಜ್ಞಾನ ಮತ್ತು ಪರಮ ಆನಂದದ ಪ್ರಾಪ್ತಿಯಾಗುತ್ತದೆ. ಈ ಸ್ಥಿತಿಯಲ್ಲಿ ಜೀವಾತ್ಮನಿಗೆ ಮೋಕ್ಷದ ಅನುಭವವಾಗುತ್ತದೆ. ಇದು ಚಿತ್ತದ ನಿರುದ್ಧಾವಸ್ಥೆ ಅಥವಾ ಅಸಂಪ್ರಜ್ಞಾತ ಸಮಾಧಿಯಾಗಿದೆ. ಈ ಸ್ಥಿತಿಯಲ್ಲಿ ಜೀವಾತ್ಮನಿಗೆ ಪರಮಾತ್ಮನ ಸಾಕ್ಷಾತ್ಕಾರ ವಾಗುತ್ತದೆ. ಯಾವ ರೀತಿಯಲ್ಲಿ ಅಗ್ನಿ, ವಾಯು ಮೊದಲಾದ ಪದಾರ್ಥಗಳ ವಿಶೇಷಗುಣಗಳಿಂದ ನಮಗೆ ಈ ಪದಾರ್ಥಗಳ ಪ್ರತ್ಯಕ್ಷ ಜ್ಞಾನವು ಒದಗುತ್ತದೆಯೋ, ಅದೇ ರೀತಿ ಯೋಗಿಗೆ, ಮೇಲೆ ಹೇಳಿದ ಅಸಂಪ್ರಜ್ಞಾತ ಸಮಾಧಿಯ ಸ್ಥಿತಿಯಲ್ಲಿ ಪರಮ ಸತ್ಯ, ಪರಮ ಆನಂದಾದಿ ಗುಣಗಳಿಂದ ಪರಮಾತ್ಮನ ಪ್ರತ್ಯಕ್ಷ ಜ್ಞಾನವು ಲಭಿಸುತ್ತದೆ.

ವ್ಯಾಸ ಭಾಷೆಯಲ್ಲಿ, ಮೇಲಿನ ಸೂತ್ರದ ಅರ್ಥ ಈ ರೀತಿ ಇದೆ :-

**"ಸ್ವರೂಪ ಪ್ರತಿಷ್ಠಾ, ತದಾನೀಂ ಚಿತಿಶಕ್ತಿಃ, ಯಥಾ ಕೈವಲ್ಯೇ".**

ಅರ್ಥಾತ್, ಚಿತ್ತವೃತ್ತಿಯ ನಿರೋಧವಾದಾಗ ಜೀವಾತ್ಮನು, ಪೂರ್ಣ ಮೋಕ್ಷದ ಸ್ಥಿತಿಯಲ್ಲಿ ಅವನ ಸ್ಥಿತಿಯು ಹೇಗಿರುತ್ತದೆಯೋ, ಅದೇ ರೀತಿಯಲ್ಲಿ, ಶರೀರಧಾರಣೆ ಮಾಡಿಕೊಂಡಿರುವಾಗಲೇ, ತನ್ನ ಮೂಲ ವಾಸ್ತವಿಕ ಸ್ವರೂಪದಲ್ಲಿ ಸ್ಥಿತನಾಗುತ್ತಾನೆ.

ಸತ್ಯಾರ್ಥ ಪ್ರಕಾಶದ ನವಮ ಸಮುಲ್ಲಾಸದಲ್ಲಿ, ಮಹರ್ಷಿ ದಯಾನಂದರು ಈ ಸೂತ್ರದ ಅರ್ಥವನ್ನು ಈ ರೀತಿ ವಿವರಿಸಿದ್ದಾರೆ : "ಚಿತ್ತದಲ್ಲಿ ಏಕಾಗ್ರತೆ ಮತ್ತು ನಿರುದ್ಧ ಸ್ಥಿತಿಯು ಉತ್ಪನ್ನವಾದಾಗ, ಜೀವಾತ್ಮನು ಸರ್ವದ್ರಷ್ಟಾ ಪರಮಾತ್ಮನ ಸ್ವರೂಪದಲ್ಲಿ ಸ್ಥಿತನಾಗುತ್ತಾನೆ".

ಇಲ್ಲಿ, ವ್ಯಾಸ ಭಾಷ್ಯ ಮತ್ತು ಮಹರ್ಷಿದಯಾನಂದರು ಹೇಳಿದ ಅರ್ಥದಲ್ಲಿ ನಮಗೆ ಸ್ವಲ್ಪ ವಿರೋಧಾಭಾಸವು ತೋರಿಬರಬಹುದು. ಯಾಕೆಂದರೆ, ವ್ಯಾಸ ಭಾಷೆಯಲ್ಲಿ "**ಯಥಾ ಕೈವಲ್ಯೇ**" (ಮೋಕ್ಷದಲ್ಲಿರುವಂತೆ) ಎಂದು ಹೇಳಿದೆ. ಎಂದರೆ, ಮೋಕ್ಷದಲ್ಲಿ ಯಾವ ರೀತಿಯಲ್ಲಿ ಪರಮಾತ್ಮನ ಸ್ವರೂಪದಲ್ಲಿ ಜೀವಾತ್ಮನ ಸ್ಥಿತಿಯು

ಇರುತ್ತದೆಯೋ, ಅದೇ ರೀತಿಯಲ್ಲಿ ಈ ಶರೀರದಲ್ಲಿ ಇರುವಾಗಲೇ, ಸಮಾಧಿಯ ಸ್ಥಿತಿಯಲ್ಲಿ, ಯೋಗಿಯ ಆತ್ಮದ ಸ್ಥಿತಿಯು ಇರುತ್ತದೆ. ದಯಾನಂದರೂ ಹೀಗೆಂದೇ ಹೇಳಿದ್ದಾರೆ : ಪರಮಾತ್ಮನ ಸ್ವರೂಪದಲ್ಲಿ, ಜೀವಾತ್ಮನು ತನ್ನ ವಾಸ್ತವಿಕ ಸ್ವರೂಪದಲ್ಲಿ ಸ್ಥಿತನಾಗುತ್ತಾನೆ. ಇಲ್ಲಿ ಕೈವಲ್ಯ (ಮೋಕ್ಷ)ದ ದೃಷ್ಟಾಂತ ಕೊಟ್ಟಿರುವುದರಿಂದ, ವ್ಯಾಸರು ಕೂಡ ಸರ್ವದ್ರಷ್ಟಾ ಪರಮಾತ್ಮನ ವಾಸ್ತವಿಕ ಸ್ವರೂಪದಲ್ಲಿ ಜೀವಾತ್ಮನ ಸ್ಥಿತಿ ಎಂದು ಅಭಿಪ್ರಾಯ ಪಟ್ಟಿದ್ದಾರೆ, ಎಂದು ನಾವು ತಿಳಿದುಕೊಳ್ಳಬೇಕು. ಆದುದರಿಂದ, ಇಲ್ಲಿ ಈ ಇಬ್ಬರು ಋಷಿಗಳ ವಿಚಾರಗಳಲ್ಲಿ ಪರಸ್ಪರ ವಿರೋಧವು ಸರ್ವಥಾ ಇಲ್ಲ.

## ಸಮಾಧಿಗಿಂತ ಭಿನ್ನ ಸ್ಥಿತಿಯಲ್ಲಿ ಜೀವಾತ್ಮ

**ವೃತ್ತಿಸಾರೂಪ್ಯಮಿತರತ್ರ ।** [ಯೋಗದರ್ಶನ 1-4]

ಈ ಸೂತ್ರಕ್ಕನುಸಾರವಾಗಿ ಹೇಳುವುದಾದರೆ, ಸಮಾಧಿಗಿಂತ ಭಿನ್ನ ಸ್ಥಿತಿಯಲ್ಲಿ, ಜೀವಾತ್ಮನು ತನ್ನ ಚಿತ್ತವೃತ್ತಿಯ ಪ್ರಭಾವಕ್ಕೊಳಗಾಗಿದ್ದು, ತನ್ನನ್ನು ತಾನೇ ಈ ವೃತ್ತಿಗಳ ದೃಷ್ಟಿಯಿಂದಲೇ ನೋಡುತ್ತಿರುತ್ತಾನೆ. ವೃತ್ತಿಗಳು ಇಂದ್ರಿಯ, ಶರೀರ ಹಾಗೂ ಜೀವಾತ್ಮನನ್ನು ಸಮಾನ ದೃಷ್ಟಿಯಲ್ಲಿ ನೋಡುತ್ತವೆ. ಇದು ಒಂದು ಅಜ್ಞಾನದ ಸ್ಥಿತಿ. ಸಮಾಧಿಯಲ್ಲಿ ವಾಸ್ತವಿಕ ಜ್ಞಾನದಿಂದಾಗಿ ಜೀವಾತ್ಮನು ಆನಂದವನ್ನು ಅನುಭವಿಸುತ್ತಾನೆ. ಮತ್ತು ಇತರ ಸ್ಥಿತಿಯಲ್ಲಿ ಅವನು ನಾನಾ ರೀತಿಯ ದುಃಖಗಳನ್ನು ಅನುಭವಿಸುತ್ತಾನೆ. ಇದಕ್ಕೆ ಕಾರಣ, ಚಿತ್ತವೃತ್ತಿಯ ಪ್ರಭಾವದ ರೂಪದಲ್ಲಿ ಒಂದು ರೀತಿಯ ಬಂಧನ.

ಮಹರ್ಷಿ ದಯಾನಂದರು, ತಮ್ಮ ಋಗ್ವೇದಾದಿ ಬಾಷ್ಯಭೂಮಿಕೆಯಲ್ಲಿ, ಉಪಾಸನಾ ವಿಷಯದ ಪ್ರಕರಣದಲ್ಲಿ, ಈ ಸೂತ್ರದ ಅರ್ಥವನ್ನು ವಿವರಿಸುವಾಗ **"ಇತರತ್ರ ಸಾಂಸಾರಿಕ ವ್ಯವಹಾರೇ ಪ್ರವೃತ್ತೇಽಪ್ಯುಪಾಸಕಸ್ಯ ಯೋಗಿನಃ ಶಾಂತಾ ಧರ್ಮಾರೂಢಾ ವಿದ್ಯಾವಿಜ್ಞಾನ ಪ್ರಕಾಶಾ ಸತ್ಯ ತತ್ವನಿಷ್ಠಾಽತೀವ ತೀವ್ರಾ ಸಾಧಾರಣ ಮನುಷ್ಯವಿಲಕ್ಷಣಾಽಪೂರ್ವೈವ ವೃತ್ತಿರ್ಭವತಿ । ನೈವೇದೃಶ್ಯನು ಪಾಸಕಾನಾಮ-ಯೋಗಿನಾಂ ಕದಾಚಿದ್ ವೃತ್ತಿರ್ಜಾಯತ ಇತಿ॥"** ಎಂದು ಬರೆದಿದ್ದಾರೆ. ಇದರ ತಾತ್ಪರ್ಯವೇನೆಂದರೆ, ಪರಮಾತ್ಮನ ಉಪಾಸಕರಾದ ಯೋಗಿಗಳು ಸಮಾಧಿಯ ಸ್ಥಿತಿಯಿಂದ ಹೊರಗೆ ಬಂದು, ಸಾಂಸಾರಿಕ ವ್ಯವಹಾರದಲ್ಲಿ ಪ್ರವೃತ್ತರಾದರೂ ಕೂಡ, ಅವರ ಮನೋ ಸ್ಥಿತಿಯು ಸಾಮಾನ್ಯ, ಅನುಪಾಸಕ, ಅಯೋಗಿ ಮನುಷ್ಯರ ಮನೋಸ್ಥಿತಿಗಿಂತ ತೀರಾ ಭಿನ್ನವಾಗಿರುತ್ತದೆ. ಯೋಗಿಗಳ ಚಿತ್ತವೃತ್ತಿಯು

ಪ್ರಶಾಂತವಾಗಿಯೂ, ಧರ್ಮದಲ್ಲಿ ಪ್ರತಿಷ್ಠಿತವಾಗಿಯೂ, ವಿದ್ಯೆ ಮತ್ತು ವಿಜ್ಞಾನಗಳಿಂದ ಪ್ರಕಾಶಿತವಾಗಿಯೂ, ಸತ್ಯ, ತತ್ವದಲ್ಲಿ ಅತಿ ತೀವ್ರನಿಷ್ಠೆಯಿಂದ ಯುಕ್ತವಾಗಿಯೂ ಇರುತ್ತದೆ. ಇಂತಹ ಜನರನ್ನು ಜೀವನ್ಮುಕ್ತರೆಂದೂ, ಸ್ಥಿತಪ್ರಜ್ಞರೆಂದೂ ಕರೆಯುತ್ತಾರೆ. ಸರ್ವ ಸಾಮಾನ್ಯ ಜನರಲ್ಲಿ ಇಂತಹ ವಿಶೇಷ ಲಕ್ಷಣಗಳು ಕಂಡುಬರುವುದಿಲ್ಲ.

ಇಲ್ಲಿ ಒಂದು ಮಾತು ಸ್ಪಷ್ಟವಾಗುತ್ತದೆ : ಸಾಂಸಾರಿಕ ವ್ಯವಹಾರದಲ್ಲಿ ಎದುರಿಸಬೇಕಾಗಿ ಬರುವ ಸಂಕಟಗಳಿಗೆ ಹೆದರಿ, ಕಾಡುಗಳಿಗೋ, ಮಠಗಳಿಗೋ ಅಥವಾ ಇನ್ನಿತರ ಉಪದ್ರವಗಳಿಲ್ಲದ ಸ್ಥಾನಗಳಿಗೋ, ಏಕಾಂತ ವಾಸವನ್ನೋ, ಶಾಂತಿಯನ್ನೋ, ಹುಡುಕಿಕೊಂಡು, ಸಂಸಾರವನ್ನು ಬಿಟ್ಟು ಓಡಿ ಹೋಗುವುದು ನಿಜವಾದ ಯೋಗಿಗಳ ಲಕ್ಷಣ ಅಲ್ಲ. ಇವರನ್ನು ಹೇಡಿಗಳು ಅಥವಾ ಪಲಾಯನವಾದಿಗಳು ಎಂದು ಕರೆಯುವುದೇ ಸರಿ.

ಈ ರೀತಿ ಮಹರ್ಷಿ ದಯಾನಂದರು, ಸಮಾಧಿ ಸ್ಥಿತಿಯ ಹೊರಗೆ ಒಬ್ಬ ಯೋಗಿಯ ಸ್ಥಿತಿ ಹೇಗಿರುತ್ತದೆ, ಮತ್ತು ಒಬ್ಬ ಸಾಮಾನ್ಯ ಲೌಕಿಕ ವ್ಯಕ್ತಿಯ ಜೀವನಕ್ಕೂ, ಯೋಗಿಯ ಜೀವನಕ್ಕೂ ಏನು ವ್ಯತ್ಯಾಸ ಇದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ ಹೊರತು, ಇಲ್ಲಿ, ಇವರು ಸೂತ್ರಕಾರರ ವಿಚಾರಕ್ಕೆ ಪ್ರತಿಕೂಲವಾಗಿ ಏನೂ ಹೇಳಿಲ್ಲ.

## ಚಿತ್ತವೃತ್ತಿಯ ಸ್ವರೂಪ

**ಪ್ರಮಾಣ ವಿಪರ್ಯಯ ವಿಕಲ್ಪನಿದ್ರಾಸ್ಮೃತಯಃ ॥**(ಯೋಗದರ್ಶನ 1-6)

ಅರ್ಥ :– ಪ್ರಮಾಣ, ವಿಪರ್ಯಯ, ವಿಕಲ್ಪ, ನಿದ್ರಾ ಮತ್ತು ಸ್ಮೃತಿ— ಇವು ಐದು ಚಿತ್ತವೃತ್ತಿಯ ಹೆಸರುಗಳು. ಯೋಗದ ಸಿದ್ಧಿಯಾಗಬೇಕಾದರೆ ಈ ವೃತ್ತಿಗಳನ್ನು ತಡೆಯಬೇಕು. ಈಗ ಈ ವೃತ್ತಿಗಳ ಪರಿಚಯ ಮಾಡಿಕೊಳ್ಳೋಣ.

**ಪ್ರಮಾಣ : ಪ್ರತ್ಯಕ್ಷಾನುಮಾನಾಗಮಾಃ ಪ್ರಮಾಣಾನಿ ॥** [ಯೋಗದರ್ಶನ 1-7]

ಅರ್ಥಾತ್, ಪ್ರತ್ಯಕ್ಷ, ಅನುಮಾನ, ಮತ್ತು ಆಗಮ ಈ ಮೂರನ್ನು ಪ್ರಮಾಣ ವೃತ್ತಿಗಳೆಂದು ಹೇಳುತ್ತಾರೆ.

[ಪ್ರಮಾ ಎಂದರೆ ಯಥಾರ್ಥ ಜ್ಞಾನ. ಯಥಾರ್ಥಜ್ಞಾನದ ಆಧಾರವೇ ಪ್ರಮಾಣ] ರೂಪ ಇತ್ಯಾದಿ ಐದು ವಿಷಯಗಳ ಸಂಬಂಧವು ಚಕ್ಷು ಆದಿ ಐದು ಇಂದ್ರಿಯಗಳೊಂದಿಗೆ ಸ್ಥಾಪಿತವಾದಾಗ ಒದಗುವ ಜ್ಞಾನವನ್ನು ಪ್ರತ್ಯಕ್ಷ

ಜ್ಞಾನವೆನ್ನುತ್ತಾರೆ. ಪ್ರತ್ಯಕ್ಷತೆಯು ಇಲ್ಲಿ ಜ್ಞಾನದ ಆಧಾರವಾಗಿದೆ. ಆದುದರಿಂದ ಇದನ್ನು ಪ್ರತ್ಯಕ್ಷ ಪ್ರಮಾಣವೆನ್ನುತ್ತಾರೆ. ಈ ಜ್ಞಾನವು ಪೌರುಷೇಯ (ಪುರುಷನಿಷ್ಠ) ಜ್ಞಾನವಾಗಿದೆ. ಇದರಲ್ಲಿ ಅಸತ್ಯ, ಭ್ರಾಂತಿ, ಅಥವಾ ಸಂಶಯಕ್ಕೆ ಎಡೆ ಇರಬಾರದು. ಉದಾಹರಣೆಗಾಗಿ : ಒಬ್ಬ ವ್ಯಕ್ತಿಯು ಬೆಂಕಿಗೆ ಕೈಹಾಕಿ ಕೈಸುಟ್ಟುಕೊಳ್ಳುತ್ತಾನೆ ಎಂದುಕೊಳ್ಳುವ ; ಆ ವ್ಯಕ್ತಿಗೆ ಬೆಂಕಿಯು ನಿಜವಾಗಿಯೂ ಒಂದು ಸುಡುವ ಪದಾರ್ಥ ಎಂದು ಗೊತ್ತಾಗುತ್ತದೆ.

ನಾವು ಅನೇಕ ಬಾರಿ ಹೊಗೆ ಕಾಣುವಲ್ಲಿ ಬೆಂಕಿಯು ಇರುವುದನ್ನು ನೋಡಿದ್ದೇವೆ. ಇದರಿಂದಾಗಿ, ಎಲ್ಲಿ ಹೊಗೆ ಕಾಣುತ್ತದೋ ಅಲ್ಲಿ ಬೆಂಕಿ ಇದೆ ಎಂದುಕೊಳ್ಳುತ್ತೇವೆ. ಮನಸ್ಸಿನ ಈ ವ್ಯಾಪರವೇ ಅನುಮಾನ ವೃತ್ತಿಯಾಗಿದೆ.

ವೇದಾದಿ ಸತ್ಯಶಾಸ್ತ್ರಗಳು ಮತ್ತು ಆಪ್ತಪುರುಷರ ವಾಕ್ಯಗಳ ವಾಕ್ಯಗಳು ಎಂದಿಗೂ ಅಸತ್ಯವಾದುದನ್ನು ನಾವು ನೋಡಿಲ್ಲ. ಆದುದರಿಂದ ಇವುಗಳೂ ಜ್ಞಾನದ ಆಧಾರವಾಗಿದೆ. ಇವುಗಳು ಆಗಮ ಪ್ರಮಾಣಗಳು, ಇವುಗಳಿಂದ ಒದಗುವ ಯಥಾರ್ಥ ಜ್ಞಾನ ಆಗಮ ಜ್ಞಾನ, ಮತ್ತು ಈ ಜ್ಞಾನವನ್ನು ಗ್ರಹಿಸುವ ಮನೋವೃತ್ತಿಯು ಆಗಮ ವೃತ್ತಿಯಾಗಿದೆ. ಉದಾಹರಣೆಗಾಗಿ, ಆಪ್ತವಾಕ್ಯವೊಂದು ಹೇಳುತ್ತದೆ : "**ಸತ್ಯಮೇವ ಜಯತೇ**" ಎಂದರೆ, ಸತ್ಯವೇ ಸದಾ ವಿಜಯಿಯಾಗುತ್ತದೆ. ಈ ಮಾತು ಎಂದೂ ಸುಳ್ಳಾಗದೆ ಇರುವುದರಿಂದ ಎಲ್ಲರಿಗೂ ನಂಬುವುದಕ್ಕೆ ಯೋಗ್ಯವಾಗಿದೆ. ಆದುದರಿಂಧ ಇಂತಹ ವಾಕ್ಯಗಳೂ ಯಥಾರ್ಥ ಜ್ಞಾನದ ಆಧಾರವಾಗಿವೆ. ಆದುದರಿಂದ ಇವುಗಳನ್ನು ಆಗಮ ಪ್ರಮಾಣಗಳೆಂದು ಹೇಳುತ್ತಾರೆ. ಈ ಪ್ರಮಾಣಗಳಿಂದ ಜ್ಞಾನಗಳಿಸುವ ಚಿತ್ತದ ವೃತ್ತಿಗೆ ಆಗಮ ವೃತ್ತಿಯೆನ್ನುತ್ತಾರೆ. ಸಮಾಧಿ ಸ್ಥಿತಿಯಲ್ಲಿ ಈ ಮೂರು ವೃತ್ತಿಗಳನ್ನೂ ತಡೆದಿಡಲಾಗುತ್ತದೆ. ವ್ಯವಹಾರ ಕಾಲದಲ್ಲಿ ಇವುಗಳಿಂದ ತುಂಬಾ ಪ್ರಯೋಜನ ಪಡೆಯಲಾಗುತ್ತದೆ.

**ವಿಪರ್ಯಯ: ವಿಪರ್ಯಯೋ ಮಿಥ್ಯಾಜ್ಞಾನ ಮತದ್ರೂಪ ಪ್ರತಿಷ್ಠಮ್ ॥**
[ಯೋಗದರ್ಶನ 1-8]

ಅರ್ಥಾತ್, ಮಿಥ್ಯಾ ಜ್ಞಾನವೇ ವಿಪರ್ಯಯ. ಇಲ್ಲಿ ಒಂದು ವಸ್ತುವಿನ ಜ್ಞಾನವು, ಆ ವಸ್ತುವಿನ ನಿಜಸ್ವರೂಪಕ್ಕಿಂತ ಭಿನ್ನವಾಗಿರುತ್ತದೆ. ಉದಾಹರಣೆಗಾಗಿ, ಕೆಲವು ಬಾರಿ ಜನರು ಕತ್ತಲೆಯಲ್ಲಿ ಹಗ್ಗವನ್ನು ಕಂಡು ಅದು ಹಾವು ಎಂದುಕೊಳ್ಳುತ್ತಾರೆ. ಇಲ್ಲಿ, ಈ ರೀತಿ, ಹಾವಿನ ಜ್ಞಾನ, ನಿಜವಾದ ವಸ್ತು, ಹಗ್ಗ- ಇದರ ಸ್ವರೂಪಕ್ಕಿಂತ ಭಿನ್ನವಾಗಿದೆ. ಇದೇ ರೀತಿ ನಮ್ಮ ಅನಿತ್ಯ ಶರೀರವನ್ನು ನಿತ್ಯವೆಂದು

ತಿಳಿದುಕೊಳ್ಳುವುದು, ಅಮರ ಜೀವಾತ್ಮನನ್ನು ಮರ್ತ್ಯನೆಂದು ತಿಳಿದುಕೊಳ್ಳುವುದು; ಅಸತ್ಯಭಾಷಣ, ಕಳ್ಳತನ, ಭ್ರಷ್ಟಾಚಾರ ಇತ್ಯಾದಿ ದುಷ್ಟಾಚಾರಗಳನ್ನು ಶಿಷ್ಟಾಚಾರವೆಂದು ತಿಳಿದುಕೊಳ್ಳುವುದು. ಸತ್ಯಭಾಷಣ, ಪ್ರಾಮಾಣಿಕತೆ ಇತ್ಯಾದಿ ಸದಾಚಾರಗಳನ್ನು ಮೂರ್ಖಾಚಾರವೆಂದು ತಿಳಿದುಕೊಳ್ಳುವುದು ; ಇಂದ್ರಿಯಗಳ ವಿಷಯಗಳ ಭೋಗವನ್ನು ಸುಖಕರವೆಂದು ಭಾವಿಸುವುದು. ಸರಳ ಜೀವನ, ತಪಸ್ಸು ಯೋಗಾಭ್ಯಾಸ ಇತ್ಯಾದಿಗಳಿಂದ ಒದಗುವ ಆನಂದವನ್ನು ದುಃಖವೆಂದು ಭಾವಿಸುವುದು ; ಶರೀರ, ಮನಸ್ಸು, ಇಂದ್ರಿಯ ಇತ್ಯಾದಿ ಜಡವಸ್ತುಗಳನ್ನು ಚೇತನವೆಂದೂ, ಮತ್ತು ನಿಜವಾಗಿಯೂ ಚೇತನವಾಗಿರುವ ಆತ್ಮನನ್ನು ಜಡವೆಂದೂ ಅರಿತುಕೊಳ್ಳುವುದು - ಇವೆಲ್ಲಾ ವಿಪರ್ಯಯ ವೃತ್ತಿಯ ಲಕ್ಷಣಗಳಾಗಿವೆ. ಇಂತಹ ಮಿಥ್ಯಾ ಜ್ಞಾನವು ಇರುವ ತನಕ, ಯಾರಿಗೂ ಸಮಾಧಿಯನ್ನು ಸಿದ್ಧಿಸಲಿಕ್ಕೆ ಸಾಧ್ಯವಿಲ್ಲ. ಜಗತ್ತಿನಲ್ಲಿ ಅನೇಕ ಮಂದಿ ಯೋಗಾಭ್ಯಾಸಿಗಳು ಮನುಷ್ಯನ ಮನಸ್ಸನ್ನು ಒಂದು ಚೇತನ ಪದಾರ್ಥವೆಂದು ತಿಳಿದು ಕೊಂಡಿರುತ್ತಾರೆ, ಮತ್ತು ಬಹಳ ಪ್ರಯತ್ನಮಾಡಿದರೂ ಮನಸ್ಸು ವಶಕ್ಕೆ ಬರುವುದಿಲ್ಲವೆಂದು ಹೇಳುತ್ತಿರುತ್ತಾರೆ. ಇದು ಇವರ ಮಿಥ್ಯಾಜ್ಞಾನ ಮತ್ತು ವಿಪರ್ಯಯ ವೃತ್ತಿಯ ಲಕ್ಷಣವಾಗಿದೆ.

**ಶಬ್ದ ಜ್ಞಾನಾನುಪಾತೀ ವಸ್ತು ಶೂನ್ಯೋವಿಕಲ್ಪಃ ।** [ಯೋಗದರ್ಶನ 1-9]

ಅರ್ಥಾತ್, ವಾಸ್ತವಿಕವಾಗಿ ಇಲ್ಲದೆ ಇರುವ ವಸ್ತುವಿನ ಕೇವಲ ಶಬ್ದೋಚ್ಚಾರಣೆಯಿಂದ ಜ್ಞಾನವನ್ನು ಗ್ರಹಿಸುವ ಮನೋಪ್ರಕ್ರಿಯೆಯು ವಿಕಲ್ಪವೃತ್ತಿಯಾಗಿದೆ. ಯಥಾ ಬಂಜೆಯ ಮಗ, ಗಗನ ಕುಸುಮ ಇತ್ಯಾದಿ. ಈ ಮಾತುಗಳನ್ನು ಕೇಳಿ ಒಬ್ಬ ವ್ಯಕ್ತಿಯು ಬಂಜೆಗೂ ಸಂತಾನೋತ್ಪತ್ತಿಯಾಗುತ್ತದೆ, ಆಕಾಶದಲ್ಲಿಯೂ ಹೂಗಳು ಅರಳುತ್ತವೆ ಎಂದು ನಂಬಿಕೊಳ್ಳಬಹುದು. ಈ ರೀತಿ ಶಬ್ದೋಚ್ಚಾರಣೆ ಮಾತ್ರ ಕೇಳಿ, ಜ್ಞಾನದ ಆಭಾಸ ಉತ್ಪನ್ನವಾಗುವ ಪ್ರಕ್ರಿಯೆಗೆ ವಿಕಲ್ಪವೃತ್ತಿ ಎಂದು ಹೆಸರು.

ಒಬ್ಬ ಯೋಗಾಭ್ಯಾಸ ಮಾಡಲು ಬಯಸುವ ವ್ಯಕ್ತಿಯು ಒಂದು ಕಡೆಯಲ್ಲಿ ಧ್ಯಾನದಲ್ಲಿ ಕುಳಿತುಕೊಂಡಿದ್ದಾನೆ ಎಂದುಕೊಳ್ಳುವ ; ಆಗ ಯಾರೋ ಒಬ್ಬ ಯೋಗಾಭ್ಯಾಸಿಯ ಬಳಿಗೆ ಹೋಗಿ, ಅವನ ಕಿವಿಯಲ್ಲಿ ಹೇಳುತ್ತಾನೆ : ಇಲ್ಲಿ ಭೂತಗಳು ಇವೆ. ಅವು ಮನುಷ್ಯರನ್ನು ಕೊಂದು ತಿಂದುಬಿಡುತ್ತವೆ. ಈ ಮಾತುಗಳನ್ನು ಕೇಳಿದ ಆ ಯೋಗಾಭ್ಯಾಸೀ ಮನುಷ್ಯನು, ಇದು ನಿಜವಾಗಿರಬೇಕು ಎಂದು ನಂಬಿಕೊಳ್ಳುತ್ತಾನೆ ಮತ್ತು ಹೆದರಿ, ಅಲ್ಲಿಂದ ಬೇರೆಕಡೆಗೆ ಹೋಗಿಬಿಡುತ್ತಾನೆ. ಈ ರೀತಿಯ ಪರಿಸ್ಥಿತಿಗಳು ಯೋಗಿಯ ಜೀವನದಲ್ಲಿ ತುಂಬಾ ಬರಬಹುದು. ಇದರಿಂದ

ಪ್ರಭಾವಿತನಾದರೆ, ಅವನಿಗೆ ಯೋಗವು ಸಿದ್ಧಿಸುವುದಿಲ್ಲ.

ತಾತ್ಪರ್ಯವೇನೆಂದರೆ, ಮೇಲೆ ಹೇಳಿದ ವಿಕಲ್ಪವೃತ್ತಿಯು ಯೋಗಮಾರ್ಗದಲ್ಲಿ ಒಂದು ವಿಘ್ನವಾಗಿ ಬರುತ್ತದೆ. ಆದುದರಿಂದ ಅದನ್ನು ಚೆನ್ನಾಗಿ ತಿಳಿದುಕೊಳ್ಳಬೇಕಾದುದು ಬಹಳ ಅಗತ್ಯವಾಗಿದೆ.

**ಅಭಾವ ಪ್ರತ್ಯಯಾಲಂಬನಾವೃತ್ತಿರ್ನಿದ್ರಾ ॥** [ಯೋಗದರ್ಶನ 1-10]

ಎಂದರೆ, ಮನಸ್ಸು ಎಚ್ಚರಿಕೆಯ ಸಮಯದಲ್ಲಿ ಅಥವಾ ಮಲಗಿರುವ ಸಮಯದಲ್ಲಿ, ಎಲ್ಲವೂ ಅಭಾವವಾಗಿ ಕಂಡುಬರುವ ಸ್ಥಿತಿಯನ್ನು ಆಶ್ರಯಗೊಳ್ಳುವುದನ್ನು ನಿದ್ರಾವೃತ್ತಿ ಎಂದು ಕರೆಯುತ್ತಾರೆ. ಈ ನಿದ್ರಾವೃತ್ತಿಯೂ ಸಮಾಧಿಗೆ ತೊಂದರೆಯಾಗುತ್ತದೆ. ಆದುದರಿಂದ ಚಿತ್ತದ ಈ ವೃತ್ತಿಯನ್ನೂ ತಡೆಯುವುದು ಅವಶ್ಯಕವಾಗಿದೆ.

**ಪ್ರಶ್ನೆ** :– ಇಪ್ಪತ್ತನಾಲ್ಕು ತಾಸು ನಿದ್ರೆಯನ್ನು ತಡೆಯುವುದರಿಂದ ಸಮಾಧಿಯು ಸಿದ್ಧವಾಗಬಹುದೆ?

**ಉತ್ತರ**:– ಇಲ್ಲ, ಕೇವಲ ಸಮಾಧಿಕಾಲದಲ್ಲಿ ಮಾತ್ರ ನಿದ್ದೆಯನ್ನು ತಡೆಯುವುದು ಅಗತ್ಯವಾಗಿದೆ. ಮಹರ್ಷಿ ದಯಾನಂದರು ಈ ವಿಷಯದ ಕುರಿತಾಗಿ, ತಮ್ಮ ಸತ್ಯಾರ್ಥಪ್ರಕಾಶದ ನವಮ ಸಮುಲ್ಲಾಸದಲ್ಲಿ ಈ ರೀತಿ ಬರೆದಿದ್ದಾರೆ. ಒಬ್ಬ ಮನುಷ್ಯನಿಗೆ ನಿತ್ಯವೂ ಕನಿಷ್ಠಪಕ್ಷ, ಎರಡು ತಾಸು ಧ್ಯಾನ ಅಗತ್ಯ ಮಾಡಬೇಕಾಗುತ್ತದೆ. ಈ ಸಮಯವನ್ನು ಪ್ರಾತಃಕಾಲ ಒಂದು ತಾಸು ಮತ್ತು ಸಾಯಂಕಾಲ ಒಂದು ತಾಸು, ಈ ರೀತಿ ವಿಭಜಿಸಬಹುದು. ಯಾರಿಗಾದರೂ ಇಷ್ಟವಿದ್ದರೆ ಅವರು ಇದಕ್ಕಿಂತಲೂ ಹೆಚ್ಚು ಸಮಯ ಧ್ಯಾನ ಮಾಡಬಹುದು. ಆದರೆ 24 ತಾಸು ಯೋಗಾಭ್ಯಾಸ ಮಾಡುವ ಅಗತ್ಯ ಇಲ್ಲ. ಸಮಾಧಿಗೆ ಪೂರ್ಣ 24 ತಾಸು ನಿದ್ದೆಯನ್ನು ಜಯಿಸುವುದು ಅಗತ್ಯ ಎಂದು ಹೇಳುವವರಿಗೆ ಯೋಗದ ನಿಜವಾದ ಸ್ವರೂಪವು ಗೊತ್ತಿರುವುದಿಲ್ಲ. ಯಾಕೆಂದರೆ, ಆರೋಗ್ಯದ ರಕ್ಷಣೆಗೆ ಆಹಾರ, ನಿದ್ರೆ ಮತ್ತು ಬ್ರಹ್ಮಚರ್ಯದ ಪಾಲನೆ— ಈ ಮೂರೂ ಆವಶ್ಯಕವಾಗಿವೆ. ಅನ್ಯಥಾ, ವ್ಯಕ್ತಿಯು ರೋಗಿಯಾಗಿ ಯೋಗಾಭ್ಯಾಸಕ್ಕೆ ಅಯೋಗ್ಯನಾಗುತ್ತಾನೆ.

ಕೆಲವರು ಮಧ್ಯರಾತ್ರಿ 12 ಗಂಟೆಗೆ ಎದ್ದು ಧ್ಯಾನಕ್ಕೆ ಕುಳಿತುಕೊಳ್ಳುತ್ತಾರೆ.

ಆಗ ಅವರಿಗೆ ನಿಜವಾಗಿಯೂ ನಿದ್ರಾವಸ್ಥೆಯೇ ಒದಗಬಹುದಲ್ಲದೆ, ಸಮಾಧಿಯು ಸಿದ್ಧಿಸುವುದಿಲ್ಲ. ಇಂತಹ ಜನರು ತಾವು ನಿದ್ರೆಯ ಅವಸ್ಥೆಯಲ್ಲಿ ಕಾಲಕಳೆದರೂ ಕೂಡ, ತಾವು ಇಷ್ಟುಗಂಟೆ ಸಮಾಧಿಯಲ್ಲಿದ್ದೆವು ಎಂದು ಹೇಳುತ್ತಾರೆ. ತಾವು ದೊಡ್ಡ ಯೋಗಿಗಳು ಎಂದು ತೋರಿಸುವುದಕ್ಕೆ ಇದು ಇವರು ಮಾಡುವ ಆಡಂಬರದ ಮಾತಾಗಿದೆ. ಸಮಯಕ್ಕೆ ಸರಿಯಾಗಿ ಮಲಗುವುದು, ಮತ್ತು ಸಮಯಕ್ಕೆ ಸರಿಯಾಗಿ ಎದ್ದು ನಿದ್ರಾರಹಿತರಾಗಿ ಯೋಗಾಭ್ಯಾಸ ಮಾಡುವುದೇ ನಿಜವಾಗಿಯೂ ನಿದ್ರೆಯನ್ನು ಜಯಿಸುವುದಾಗಿದೆ. 24 ಗಂಟೆ ಬಲಪೂರ್ವಕವಾಗಿ ನಿದ್ರೆಯನ್ನು ತಡೆದು ಎಚ್ಚರಿಕೆಯಲ್ಲಿರಲು ಪ್ರಯತ್ನ ಪಡುವುದು ನಿದ್ರೆಯನ್ನು ಗೆಲ್ಲುವುದಲ್ಲ.

**ಅನುಭೂತ ವಿಷಯಾಸಂಪ್ರಮೋಷಃ ಸ್ಮೃತಿಃ ॥** [ಯೋಗದರ್ಶನ 1-11]

ಹಿಂದೆ ಅನುಭವಿಸಿದ ವಿಷಯದ ಪುನಃ ಸ್ಮರಣೆ ಮಾಡುವುದು ಸ್ಮೃತಿವೃತ್ತಿಯಾಗಿದೆ. ಸಾಧಕನು ಧ್ಯಾನಮಗ್ನನಾಗಿ ಕುಳಿತಾಗ, ಅವನಿಗೆ ಪೂರ್ವಸ್ಮೃತಿಯು ಬಂದು ಅವನ ಸಮಾಧಿಯು ಭಂಗವಾಗುವುದಿದೆ. ಈ ಸ್ಮೃತಿ ವೃತ್ತಿಯನ್ನು ತಡೆಯಲಿಕ್ಕಾಗದೆ, ಅನೇಕ ಬಾರಿ ಯೋಗಾಭ್ಯಾಸಿಗಳು ನಿರಾಶೆಯಿಂದ ಯೋಗಾಭ್ಯಾಸದ ಪ್ರಯತ್ನವನ್ನೇ ಬಿಟ್ಟುಬಿಡುವುದುಂಟು. ಅನೇಕ ಬಾರಿ, ನಮಗನಿಸುತ್ತದೆ ಏನೆಂದರೆ, ಈ ವಿಚಾರಗಳೆಲ್ಲಾ ಧ್ಯಾನಮಾಡಲಿಕ್ಕೆ ಕುಳಿತಾಗಲೇ ಬರುತ್ತವೆಯಲ್ಲಾ, ಎಂದು. ನಿಜವಾಗಿ ನೋಡಿದರೆ, ಇದು ಹಾಗಲ್ಲ. ವಿಚಾರ ತರಂಗಗಳು, ಧ್ಯಾನಕ್ಕೆ ನಾವು ಕುಳಿತಿಲ್ಲವಾದರೂ, ಏಳುತ್ತಾ ಬೀಳುತ್ತಾ ಇರುತ್ತವೆ. ಆದರೆ ಸಾಧಕನು ಆ ವಿಚಾರಗಳ ಕಡೆಗೆ ಗಮನ ಕೊಡುವುದಿಲ್ಲ.

ಸ್ಮೃತಿ ವೃತ್ತಿಯನ್ನು ತಡೆಯಬೇಕಾದರೆ, ಈ ಸ್ಮೃತಿಗಳು ತಾವಾಗಿಯೇ ಉತ್ಪನ್ನವಾಗುವುದಿಲ್ಲ, ಇವುಗಳನ್ನು ಜೀವಾತ್ಮನು ತರುತ್ತಾನೆ, ಎಂಬ ಸಂಗತಿಯನ್ನು ಸಾಧಕನು ತಿಳಿದುಕೊಳ್ಳಬೇಕು. ತನ್ನ ಅಜ್ಞಾನದ ದೆಸೆಯಿಂದಾಗಿ, ಸಾಧಕನು ಮನಸ್ಸು ಬಂದು ಚೇತನ ಪದಾರ್ಥ ಮತ್ತು ಅದು ಸ್ಮೃತಿಯನ್ನು ತರುತ್ತದೆ, ಎಂದು ಭಾವಿಸಿಕೊಂಡಿರುತ್ತಾನೆ. ಈ ಭಾವನೆಯಿಂದಾಗಿಯೇ ಅವನು ಮನಸ್ಸಿನಲ್ಲಿ ವಿಚಾರಗಳನ್ನು ತಡೆಯುವುದು ಅಸಾಧ್ಯ ಎಂದು ನಂಬಿಕೊಂಡಿರುತ್ತಾನೆ. ಆದರೆ ಅವನಿಗೆ ಮನಸ್ಸು ಇಂದ್ರಿಯಗಳು ಮತ್ತು ಶರೀರ ಜಡವಸ್ತುಗಳು, ಅವುಗಳನ್ನು ಶ್ರೇಷ್ಠ ಅಥವಾ ನಿಕೃಷ್ಟ ಕಾರ್ಯಗಳಲ್ಲಿ ತೊಡಗಿಸುವವನು ನಾನು ಎಂಬ ಸತ್ಯಸಂಗತಿಯು ಗೊತ್ತಾದಾಗ, ಸ್ಮೃತಿಯನ್ನು ತಡೆಯುವ ಕಾರ್ಯವು ಬೇಗನೆ ಸಫಲವಾಗಬಹುದು.

## ಚಿತ್ತವೃತ್ತಿಯ ಮುಖ್ಯಭೇದಗಳು

ಚಿತ್ತವೃತ್ತಿಯನ್ನು ತಡೆಯುವ ಪ್ರಯತ್ನವು ಸುಲಭವಾಗಬೇಕಾದರೆ ಯೋಗಿಗೆ ಇದರ ಕೆಲವು ಮುಖ್ಯಭೇದಗಳನ್ನೂ ತಿಳಿದುಕೊಳ್ಳಬೇಕಾಗುತ್ತದೆ.

**ವೃತ್ತಯಃ ಪಂಚತಯ್ಯಃ ಕ್ಲಿಷ್ಟಾಕ್ಲಿಷ್ಟಾಃ ॥** [ಯೋಗದರ್ಶನ 1-5]

ಅರ್ಥಾತ್, ಮೇಲೆ ವಿವರಿಸಿದ ಪ್ರಮಾಣ ವಿಪರ್ಯಯ ವಿಕಲ್ಪ ನಿದ್ರಾ ಮತ್ತು ಸ್ಮೃತಿ ಎಂಬ ಈ ಐದು ರೀತಿಯ ಚಿತ್ತವೃತ್ತಿಗಳು ಕ್ಲಿಷ್ಟ ಮತ್ತು ಅಕ್ಲಿಷ್ಟ ಎಂದು ಎರಡು ವಿಧವಾಗಿವೆ. ಮನುಷ್ಯರನ್ನು ಅಜ್ಞಾನ, ಅಧರ್ಮ ಮತ್ತು ನಾಸ್ತಿಕತೆಯ ಕಡೆಗೆ ಒಯ್ಯುವ ಚಿತ್ತವೃತ್ತಿಯು ಕ್ಲಿಷ್ಟ, ಎಂದರೆ, ದುಃಖಕರವಾಗಿದೆ ; ಜ್ಞಾನ, ಧರ್ಮ ಮತ್ತು ಆಸ್ತಿಕತೆಯ ಕಡೆಗೆ ಒಯ್ಯುವ ಚಿತ್ತವೃತ್ತಿಯು ಅಕ್ಲಿಷ್ಟ ಎಂದರೆ, ಸುಖಕಾರಿಯಾಗಿದೆ. ಈ ರೀತಿ ಮೇಲೆ ಹೇಳಿದ ಐದು ಪ್ರಕಾರದ ಚಿತ್ತವೃತ್ತಿಗಳಲ್ಲಿ ಪ್ರತಿಯೊಂದು ಚಿತ್ತವೃತ್ತಿಯಲ್ಲಿ ಕ್ಲಿಷ್ಟ ಮತ್ತು ಅಕ್ಲಿಷ್ಟ ಎಂಬ ಎರಡು ಭೇದಗಳು ಕಂಡುಬರುತ್ತವೆ.

ಉದಾಹರಣೆಗಾಗಿ, ಒಬ್ಬ ವ್ಯಕ್ತಿಯು ತನ್ನ ಮಿತ್ರನನ್ನು ಪ್ರತ್ಯಕ್ಷವಾಗಿ ಕಂಡು ಸುಖ, ಎಂದರೆ, ಆನಂದವನ್ನು ಅನುಭವಿಸುತ್ತಾನೆ. ಈ ರೀತಿ, ಮಿತ್ರದರ್ಶನದ ಪ್ರತ್ಯಕ್ಷ ಪ್ರಮಾಣವು ಅಕ್ಲಿಷ್ಟವೃತ್ತಿ ಎಂದಾಯಿತು. ಆದರೆ ಇನ್ನೊಬ್ಬ ಕ್ರೂರ ಶತ್ರುವನ್ನು ಪ್ರತ್ಯಕ್ಷಕಂಡಾಗ ಅವನಿಗೆ ಕ್ಲಿಷ್ಟ, ಎಂದರೆ ಕಷ್ಟದ ಅನುಭವವಾಗಬಹುದು. ಈ ತರದಲ್ಲಿ ಪ್ರತ್ಯಕ್ಷ ಪ್ರಮಾಣವೆಂಬ ಒಂದೇ ಚಿತ್ತವೃತ್ತಿಯು ಸುಖಕ್ಕೂ ಕಾರಣವಾಗುತ್ತದೆ, ಮತ್ತು ದುಃಖಕ್ಕೂ ಕಾರಣವಾಗುತ್ತದೆ. ಇದೇ ರೀತಿಯಲ್ಲಿ, ಅನುಮಾನ ಮತ್ತು ಶಬ್ದ ಪ್ರಮಾಣಗಳ ಬಗ್ಗೆಯೂ ತಿಳಿದುಕೊಳ್ಳಬೇಕು.

ಒಬ್ಬ ವ್ಯಕ್ತಿಯು ಕತ್ತಲೆಯಲ್ಲಿ ಹಗ್ಗದ ತುಂಡನ್ನು ಕಂಡು ಅದು ಸರ್ಪವೆಂದು ಎಣಿಸಿ ಹೆದರುತ್ತಾನೆ. ಇದು ಕ್ಲಿಷ್ಟ, ಎಂದರೆ, ದುಃಖದ ಅನುಭವವಾಗಿದೆ. ಇನ್ನೊಬ್ಬ ವ್ಯಕ್ತಿಯು ಕತ್ತಲೆಯಲ್ಲಿ ಮಲಗಿರುವ ಸರ್ಪವನ್ನು, ಹಗ್ಗದ ತುಂಡು ಎಂದು ತಿಳಿದು ಕೊಂಡು, ಸಂತೋಷದಿಂದ ತನ್ನ ಕೆಲಸಕ್ಕಾಗಿ ಅದಕ್ಕೆ ಕೈಹಾಕುತ್ತಾನೆ. ಈ ರೀತಿ ಇಂತಹ ವಿಪರ್ಯಯ ವೃತ್ತಿಯಿಂದ, (ಮಿಥ್ಯಾಜ್ಞಾನದಿಂದ) ಆ ವ್ಯಕ್ತಿಗೆ, ಆ ಕ್ಷಣದಲ್ಲಿ, ತನ್ನ ಕೆಲಸ ಆಯಿತಲ್ಲಾ, ಎಂದು ಸುಖದ ಅನುಭವವಾಗುತ್ತದೆ. ಬಂಜೆಯೊಬ್ಬಳ ಮಗ ಬರುತ್ತಾನೆ, ಅವನು ಬಹಳ ಉತ್ತಮ ಸ್ವಭಾವದ ವ್ಯಕ್ತಿ ಎಂಬ ಮಾತನ್ನು ಯಾರ ಬಾಯಿಂದಲೋ ಕೇಳಿ, ಕೆಲವರಿಗೆ ಸಂತೋಷವಾಗಬಹುದು. ಅಥವಾ ಆ ವಂಧ್ಯಾಪುತ್ರನು ಬಹಳ ದುಷ್ಟನಾಗಿದ್ದಾನೆ ಎಂಬ ಮಾತನ್ನು ಕೇಳಿ ಕೆಲವರಿಗೆ ದುಃಖ,

ಎಂದರೆ ಬೇಸರವಾಗಲೂಬಹುದು. ಹೀಗೆ ವಿಕಲ್ಪ ವೃತ್ತಿಯೂ ಎರಡು ವಿಧವಾಗಿದೆ.

ಇದೇ ರೀತಿ ನಿದ್ರಾವೃತ್ತಿಯು ಕೂಡ ಸುಖದಾಯಕ ಅಥವಾ ಕಷ್ಟದಾಯಕವಾಗಬಹುದು. ಸಾತ್ವಿಕ ನಿದ್ರೆಯಿಂದ ಸುಖ ಮತ್ತು ರಾಜಸಿಕ ನಿದ್ರೆಯಿಂದ ದುಃಖವು ಉತ್ಪನ್ನವಾಗುತ್ತದೆ. ಇನ್ನು ಸ್ಮೃತಿಯ ವಿಷಯದಲ್ಲಿಯೂ ಹೆಚ್ಚು ಹೇಳಬೇಕಾಗಿಲ್ಲ. ಸುಖಕರವಾದ ಅನುಭವದ ಸ್ಮರಣೆಯಿಂದ ಸುಖ ಮತ್ತು ದುಃಖಕರವಾದ ಅನುಭವದ ನೆನಪು ಬಂದಾಗ ಮನುಷ್ಯನಿಗೆ ದುಃಖವೂ ಆಗುತ್ತದೆ.

## ವೃತ್ತಿಗಳನ್ನು ತಡೆಯುವ ಉಪಾಯಗಳು

ಪತಂಜಲಿ ಮುನಿಗಳು ಚಿತ್ತವೃತ್ತಿಗಳನ್ನು ತಡೆಯುವುದಕ್ಕೆ ಉಪಾಯಗಳನ್ನು ಹೇಳಿ ಕೊಟ್ಟಿದ್ದಾರೆ.

**ಯಥಾ – ಅಭ್ಯಾಸ ವೈರಾಗ್ಯಾಭ್ಯಾಂ ತನ್ನಿರೋಧಃ ॥**

[ಯೋಗದರ್ಶನ 1-12]

ಅರ್ಥಾತ್, ನಿರಂತರ ಅಭ್ಯಾಸ ಮತ್ತು ನಿಜವಾದ ವೈರಾಗ್ಯ-ಈ ಉಪಾಯಗಳ ಮೂಲಕ ಚಿತ್ತದ ವೃತ್ತಿಗಳಿಂದ ನಾವು ಮುಕ್ತಿ ಪಡೆಯಬಹುದು. ಆದರೆ, ಅಭ್ಯಾಸ ಮತ್ತು ವೈರಾಗ್ಯಕ್ಕೆ ವಿವೇಕವು ಅನಿವಾರ್ಯ ಸಾಧನವಾಗಿದೆ. ಎಂದರೆ, ಅಭ್ಯಾಸ, ವೈರಾಗ್ಯ ಮತ್ತು ವಿವೇಕ ಇವು ಮೂರು ಕೂಡ ವೃತ್ತಿ ನಿರೋಧಕ್ಕೆ ಅತ್ಯಗತ್ಯವೆಂದಾಯಿತು. ಈಶ್ವರ ಜೀವ, ಪ್ರಕೃತಿ ಮತ್ತು ವಿಕೃತಿಗಳ ವ್ಯಾವಹಾರಿಕ ಜ್ಞಾನವನ್ನು ವಿವೇಕವೆಂದು ಹೇಳುತ್ತಾರೆ. ಕೇವಲ ಶಾಬ್ದಿಕ ಜ್ಞಾನದಿಂದ ವಿವೇಕವು ಸಿದ್ಧಿಸುವುದಿಲ್ಲ.

ಮನುಷ್ಯನು ತನ್ನ ಮನಸ್ಸನ್ನು ವಶದಲ್ಲಿ ಇಟ್ಟುಕೊಳ್ಳುವುದಕ್ಕೆ ಎಷ್ಟು ಪ್ರಯತ್ನ ಮಾಡುತ್ತಾನೋ, ಮನಸ್ಸು ಅಷ್ಟೇ ಚಂಚಲವಾಗಿ ಬಿಡುತ್ತದೆ, ಮತ್ತು ಅದನ್ನು ಎಡೆತಡೆಗಳಿಲ್ಲದೆ ಅಲೆದಾಡಲು ಬಿಟ್ಟರೆ ಅದು ತನ್ನಷ್ಟಕ್ಕೆ ವಶಕ್ಕೆ ಬರುತ್ತದೆ, ಎಂದು ಕೆಲವರು ಹೇಳುತ್ತಾರೆ. ಇದು ನಿಜವಲ್ಲ, ಯಾಕೆಂದರೆ, ಒಬ್ಬ ವಾಹನ ಚಾಲಕನು ತನ್ನ ವಾಹನವನ್ನು ನಿಯಂತ್ರಣ (Brake)ದಲ್ಲಿ ಇಟ್ಟುಕೊಳ್ಳದಿದ್ದರೆ, ಯಾವರೀತಿಯಲ್ಲಿ ಅದು ಅಪಘಾತಕ್ಕೆ ಒಳಗಾಗಬಹುದೋ ಅದೇ ರೀತಿಯಲ್ಲಿ ಸ್ವಚ್ಛಂದ ಮನೋವೃತ್ತಿಯ ಜನರ ಜೀವನವೂ ದುರಂತಕ್ಕೆ ಒಳಗಾಗುತ್ತದೆ. ವಾಹನವು ಒಂದು ಜಡವಸ್ತುವಾಗಿದೆ. ಅದನ್ನು ಎಲ್ಲಿಗೆ ಬೇಕೋ ಅಲ್ಲಿಗೆ ಓಡಿಸಬಹುದು. ಅದು ಚಾಲಕನ ನಿಯಂತ್ರಣದಲ್ಲಿ ಇದ್ದು ಓಡುತ್ತಿದ್ದರೆ, ಅಪಾಯಕ್ಕೆ ಒಳದಾಗದೆ ಸುಖವಾಗಿ, ನಿರ್ದಿಷ್ಟ ಸಮಯದಲ್ಲಿ ತನ್ನ ಗಂತವ್ಯಸ್ಥಾನಕ್ಕೆ ತಲಪುತ್ತದೆ.

ಇದೇ ರೀತಿಯಲ್ಲಿ ಮನಸ್ಸನ್ನು ನಿಗ್ರಹದಲ್ಲಿ ಇಟ್ಟುಕೊಂಡರೆ ಮಾತ್ರ, ಅದು ನಮ್ಮನ್ನು, ದುರಂತಗಳಿಗೆ ಒಳಗಾಗದೆ ಇಷ್ಟ ಸಿದ್ಧಿಯ ಕಡೆಗೆ ಕೊಂಡು ಹೋಗಬಹುದು. ಅನ್ಯಥಾ, ಇದು ಸಾಧ್ಯವಿಲ್ಲ.

## ಅಭ್ಯಾಸದ ಸ್ವರೂಪ

**ತತ್ರ ಸ್ಥಿತೌ ಯತ್ನೋಽಭ್ಯಾಸಃ ll** [ಯೋಗದರ್ಶನ 1-13]

ಚಿತ್ತದ 'ಸ್ಥಿತಿ'ಯ ರಕ್ಷಣೆಗಾಗಿ ಮಾಡುವ ಪ್ರಯತ್ನಕ್ಕೆ ಅಭ್ಯಾಸ ಎಂದು ಹೇಳುತ್ತಾರೆ. ಚಿತ್ತದ ಏಕಾಗ್ರತೆಗೆ ಯೋಗ ಶಾಸ್ತ್ರದಲ್ಲಿ ಸ್ಥಿತಿ ಎಂದು ಹೆಸರು. ಆದುದರಿಂದ ಈ ಶಾಸ್ತ್ರದಲ್ಲಿ ಏಕಾಗ್ರತೆಯ ರಕ್ಷಣೆಗಾಗಿ ಮಾಡುವ ಪ್ರಯಾಸವೇ ಅಭ್ಯಾಸ ಎಂದಾಗುತ್ತದೆ. ಯೋಗ ಶಾಸ್ತ್ರೋಕ್ತಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ– ಇವುಗಳ ಆಚರಣೆಯೇ ಆ ಪ್ರಯಾಸವಾಗಿದೆ. ಪ್ರಾರಂಭದಲ್ಲಿ ಮನಸ್ಸನ್ನು ಸಂಪೂರ್ಣವಶದಲ್ಲಿ ಇಟ್ಟುಕೊಳ್ಳುವುದು ಅಸಂಭವವೆಂದು ಕಾಣುತ್ತದೆ. ಆದರೆ ಸರಿಯಾದ ವಿವೇಕ, ವೈರಾಗ್ಯ ಮತ್ತು ಅಭ್ಯಾಸದಿಂದ ಮನಸ್ಸು ವಶಕ್ಕೆ ಬರುತ್ತದೆ.

**ಸತು ದೀರ್ಘಕಾಲ ನೈರಂತರ್ಯ ಸತ್ಕಾರಾಸೇವಿತೋದೃಢ ಭೂಮಿಃ ll**
[ಯೋಗದರ್ಶನ 1-14]

ಅರ್ಥಾತ್, ಧೀರ್ಘಕಾಲ, ನಿರಂತರವಾಗಿ, 'ಸತ್ಕಾರ' ಸೇವನೆಯಿಂದ ಅಭ್ಯಾಸವು ಸುದೃಢಾವಸ್ಥೆಯನ್ನು ತರುತ್ತದೆ. ಧೀರ್ಘಕಾಲ ಎಂದರೆ, ಅಶುಭ ಸಂಸ್ಕಾರಗಳು ಸುಟ್ಟುಹೋಗುವ ತನಕ, ಯಾವ ರೀತಿಯಲ್ಲಿ ಒಂದು ಬೀಜವನ್ನು ಬೆಂಕಿಯಲ್ಲಿ ಹುರಿದ ನಂತರ, ಮತ್ತೆ ಅದರಲ್ಲಿ ಮೊಳಕೆ ಬರುವುದಿಲ್ಲವೋ, ಅದೇ ರೀತಿ, ವಾಸನಾರೂಪೀ ಸಂಸ್ಕಾರವನ್ನು ಅಭ್ಯಾಸರೂಪೀ ಬೆಂಕಿಯಲ್ಲಿ ಸುಟ್ಟನಂತರ ಪುನಃ ಅದು ಉದಿಸುವುದಿಲ್ಲ. ಆದುದರಿಂದ ಸಂಸ್ಕಾರವು ಈ ರೀತಿ ಸಂಪೂರ್ಣ ದಗ್ಧವಾಗುವ ತನಕ ಅಭ್ಯಾಸವು ನಡೆಯುತ್ತಿರಬೇಕು. ಇದಕ್ಕೆ ಎಷ್ಟು ಸಮಯ ಬೇಕಾಗುತ್ತದೆಯೋ ಅಷ್ಟೇ ಸಮಯಕ್ಕೆ ದೀರ್ಘಕಾಲ ಎಂದು ಹೇಳುತ್ತಾರೆ. ತಾತ್ಪರ್ಯವೇನೆಂದರೆ, ಇದಕ್ಕೆ ಇಷ್ಟೇ ದಿನ, ಇಷ್ಟೇ ವರ್ಷವಾಗುತ್ತದೆ ಎಂದು ಹೇಳಲಿಕ್ಕೆ ಬರುವುದಿಲ್ಲ. ಇದು ವ್ಯಕ್ತಿಯ ಸಾಮರ್ಥ್ಯವನ್ನು ಹೊಂದಿಕೊಂಡಿದೆ.

ಈ ಅಭ್ಯಾಸವು ಗುರಿಮುಟ್ಟುವ ತನಕ ನಿರಂತರವಾಗಿ ನಡೆಯಬೇಕು. ಇದನ್ನು ಮಧ್ಯದಲ್ಲಿ ಬಿಟ್ಟರೆ, ಪೂರ್ವವಾಸನೆಗಳು ಪುನಃ ಎದ್ದು ಬಂದು, ಸಮಾಧಿಗೆ ಅಡ್ಡಿಯಾಗುತ್ತದೆ.

'ಸತ್ಕಾರ' ಎಂಬ ಶಬ್ದಕ್ಕೆ ಇಲ್ಲಿ ವಿಶಿಷ್ಟ ಅರ್ಥ ಇದೆ. ತಪಸ್ಸು, ಬ್ರಹ್ಮಚರ್ಯ ವಿದ್ಯಾಪೂರ್ವಕ ಅಭ್ಯಾಸ ಇವುಗಳನ್ನೆಲ್ಲಾ ಒಟ್ಟಿನಲ್ಲಿ ಸತ್ಕಾರ ಎಂದು ಹೇಳುತ್ತಾರೆ. ಈ ರೀತಿಯಲ್ಲಿ ಮಾಡಿದ ಅಭ್ಯಾಸವು ಅಶುಭ ಸಂಸ್ಕಾರಗಳ ಪ್ರಭಾವಕ್ಕೆ ಒಳಗಾಗುವುದಿಲ್ಲ. ಒಂದು ವೇಳೆ ವೈರಾಗ್ಯವು ಲಭಿಸಿದರೂ ಕೂಡ, ಈ ಅಭ್ಯಾಸವು ಸರಿಯಾಗಿ ನಡೆಯದಿದ್ದರೆ, ಯೋಗಾಭ್ಯಾಸಿಯು ಯೋಗಮಾರ್ಗದಲ್ಲಿ ದಾರಿತಪ್ಪಿಬೀಳುತ್ತಾನೆ.

## ವೈರಾಗ್ಯದ ಲಕ್ಷಣ

**ದೃಷ್ಟಾನುಶ್ರವಿಕವಿಷಯ ವಿತೃಷ್ಣಸ್ಯವಶೀಕಾರ ಸಂಜ್ಞಾವೈರಾಗ್ಯಮ್ ॥**

[ಯೋಗದರ್ಶನ 1-15]

ಜ್ಞಾನೇಂದ್ರಿಯಗಳ ಮೂಲಕ ಅನುಭವಿಸಲಾದ ವಿಷಯಗಳನ್ನು ಈ ಶಾಸ್ತ್ರದಲ್ಲಿ ದೃಷ್ಟ ಎಂದು ಹೇಳುತ್ತಾರೆ, ಮತ್ತು ಶಾಸ್ತ್ರ ಹಾಗೂ ಆಚಾರ್ಯರ ಉಪದೇಶಗಳಿಂದ ಕೇಳಿ ತಿಳಿದುಕೊಂಡ ವಿಷಯಗಳನ್ನು ಆನುಶ್ರಾವಿಕ ಎಂದು ಕರೆಯುತ್ತಾರೆ. ಈ ಎರಡು ತರದ ವಿಷಯಗಳ ತೃಷ್ಣಾರಹಿತ ಅನುಭೂತಿಗೆ ವಶೀಕಾರ ವೈರಾಗ್ಯ ಎಂದು ಹೇಳುತ್ತಾರೆ. ಇಲ್ಲಿ ಚಿತ್ತ ವಿಕಾರಕ್ಕೆ ಕಾರಣೀ ಭೂತವಾದ ರೂಪ, ರಸ, ಗಂಧಾದಿ ವಿಷಯಗಳು ಒದಗಿ ಬಂದರೂ ಕೂಡ, ತನ್ನ ವಿವೇಕದ ಬಲದಿಂದಾಗಿ ಯೋಗಾಭ್ಯಾಸಿಯ ಚಿತ್ತವು ರಾಗ-ದ್ವೇಷಾದಿ ವಿಕಾರಗಳಿಗೆ ಒಳಗಾಗುವುದಿಲ್ಲ. ಈ ವಶೀಕಾರ ವೈರಾಗ್ಯವನ್ನು ಸಾಮಾನ್ಯ ಅಥವಾ ಅಪರ ವೈರಾಗ್ಯವೆಂದೂ ಕರೆಯುತ್ತಾರೆ. ಸಾಮಾನ್ಯವಾಗಿ ವೈರಾಗ್ಯವು ಉತ್ಪನ್ನವಾಗಬೇಕಾದರೆ, ಒಬ್ಬ ವ್ಯಕ್ತಿಗೆ, ಸಾಂಸಾರಿಕ ಸುಖದಲ್ಲಿ ನಾಲ್ಕು ರೀತಿಯ ದುಃಖಗಳನ್ನು ಅನುಭವಿಸಬೇಕಾಗುತ್ತದೆ. ಈ ನಾಲ್ಕು ರೀತಿಯ ದುಃಖಗಳನ್ನು ಪರಿಣಾಮ ದುಃಖ, ತಾಪದುಃಖ, ಸಂಸ್ಕಾರದುಃಖ, ಮತ್ತು ಗುಣವೃತ್ತಿ ವಿರೋಧ ದುಃಖಗಳೆಂದು ಕರೆಯುತ್ತಾರೆ. ಪ್ರತಿಯೊಂದು ಸಾಂಸಾರಿಕ ಸುಖದಲ್ಲಿ ಇವುಗಳು ಮಿಶ್ರಿತವಾಗಿವೆ. ಒಬ್ಬ ವ್ಯಕ್ತಿಯು ಪದೇ ಪದೇ ಈ ದುಃಖಗಳನ್ನು ಅನುಭವಿಸಿದ ನಂತರ, ಸಹಜವಾಗಿ ವೈರಾಗ್ಯವನ್ನು ತಾಳುತ್ತಾನೆ. ಈ ವೈರಾಗ್ಯದಿಂದಾಗಿ ಅವನಿಗೆ ಪರಮಾತ್ಮನ ಉಪಾಸನೆಯಲ್ಲಿ ಅಭಿರುಚಿಯು ಉತ್ಪನ್ನವಾಗುತ್ತದೆ.

## ಪರವೈರಾಗ್ಯದ ಸ್ವರೂಪ

**ತತ್ಪರಂ ಪುರುಷಖ್ಯಾತೇರ್ಗುಣವೈತೃಷ್ಣಂ ॥** [ಯೋಗದರ್ಶನ 1-16]

ಅರ್ಥಾತ್ ಪರಮಾತ್ಮನ ಸ್ವರೂಪದ ಪರಿಜ್ಞಾನವಾದಾಗ ಸತ್ವ, ರಜ ಮತ್ತು ತಮೋ ಗುಣಗಳ ಮೇಲೆ ಲೇಶಮಾತ್ರವೂ ತೃಷ್ಣೆ ಅಥವಾ ಆಕರ್ಷಣೆ ಇಲ್ಲದಿರುವ, ಈ ಉತ್ತಮ ರೀತಿಯ ವೈರಾಗ್ಯಕ್ಕೆ ಪರವೈರಾಗ್ಯ ಎಂದು ಹೇಳುತ್ತಾರೆ. ಒಬ್ಬ ಸಾಧಕನು, ಸಂಪ್ರಜ್ಞಾತ ಸಮಾಧಿಯ ಅಭ್ಯಾಸಮಾಡುತ್ತಾ ಮಾಡುತ್ತಾ ಉನ್ನತ ಮಾನಸಿಕ ಸ್ಥಿತಿಯನ್ನು ಹೊಂದುತ್ತಾನೆ. ಆಗ ಅವನಿಗೆ ಪರಮಾತ್ಮನನ್ನು ತಿಳಿದುಕೊಳ್ಳುವ ಯೋಗ್ಯತೆಯು ಬರುತ್ತದೆ. ಸಂಪ್ರಜ್ಞಾತ ಸಮಾಧಿಯ ಸ್ಥಿತಿಯಲ್ಲಿ, ಸತ್ವಗುಣವು ಅಧಿಕವಾಗಿರುತ್ತದೆ. ಆದರೆ, ಸಾಧಕನಿಗೆ, ಸತ್ವಗುಣ ಪ್ರಧಾನ ಸ್ಥಿತಿಯಲ್ಲಿಯೂ ದೋಷವು ಕಂಡುಬಂದಾಗ, ಅದರಲ್ಲಿಯೂ ಅವನಿಗೆ ವೈರಾಗ್ಯವು ಉತ್ಪನ್ನವಾಗುತ್ತದೆ. ಈ ರೀತಿಯಲ್ಲಿ, ಅಪರ ವೈರಾಗ್ಯವು ಸಂಪ್ರಜ್ಞಾತ ಸಮಾಧಿಯ ಸಾಧನವಾಗಿದೆ. ಮತ್ತು ಪರವೈರಾಗ್ಯವು ಅಸಂಪ್ರಜ್ಞಾತ ಸಮಾಧಿಯ ಸಾಧನವಾಗಿದೆ.

**ಪ್ರಶ್ನೆ** :- ಕೆಲವರು, ವಿವೇಕ, ವೈರಾಗ್ಯ ಮತ್ತು ಅಭ್ಯಾಸ ಇಲ್ಲದೆ ಇದ್ದರೂ ಕೂಡ ಯೋಗದ ಸಿದ್ಧಿ ಸಂಭವ ಎಂದು ಹೇಳುವುದನ್ನು ಕೇಳಿದ್ದೇವೆ. ಇದು ನಿಜವೆ?

**ಉತ್ತರ**:- ಇದು ಪ್ರತ್ಯಕ್ಷಾದಿ ಪ್ರಮಾಣಗಳಿಗೆ ವಿರುದ್ಧವಾಗಿರುವುದರಿಂದ, ನಿಜವಲ್ಲ. ಈಗಿನ ಕಾಲದಲ್ಲಿ ಅನೇಕ ಜನರು ಯೋಗಾಭ್ಯಾಸ ಮಾಡುತ್ತಿದ್ದಾರೆ. ಮತ್ತು ಇತರರಿಗೂ ಕಲಿಸುತ್ತಿದ್ದಾರೆ. ಆದರೆ ಇವರೆಲ್ಲಾ ವಿವೇಕ, ವೈರಾಗ್ಯ ಮತ್ತು ಅಭ್ಯಾಸ ಇವುಗಳನ್ನು ಯೋಗದ ಸಾಧನವೆಂಬ ಮಾತನ್ನು ಒಪ್ಪುವುದಿಲ್ಲ. ಇದರ ಪರಿಣಾಮ ಈಗ ಏನಾಗಿದೆ ಎಂದರೆ, ನಿಜವಾಗಿಯೂ ಯೋಗ ಕಲಿಯಬೇಕೆಂದು ಪ್ರಯತ್ನಪಡುವವರಿಗೆ ನೂರಾರು ಮಂದಿ ಯೋಗ ಶಿಕ್ಷಕರಲ್ಲಿ ಒಬ್ಬ ನಿಜವಾದ ಯೋಗಿಯು ಸಿಗುವುದೂ ಕಷ್ಟವಾಗಿದೆ. ಆದುದರಿಂದ, ವಿವೇಕ, ವೈರಾಗ್ಯ ಮತ್ತು ಅಭ್ಯಾಸ, ಇವುಗಳನ್ನು ಯೋಗದ ಮುಖ್ಯಸಾಧನ ಎಂದು ತಿಳಿದುಕೊಂಡು ಯೋಗಮಾರ್ಗದಲ್ಲಿ ಮುಂದುವರಿಯಬೇಕು. ಆಗ ಮಾತ್ರ ಸಮಾಧಿಯು ಸಿದ್ಧಿಯಾಗುತ್ತದೆ. ಆದರೆ, ಈ ನಿಯಮಕ್ಕೆ ಒಂದು ಅಪವಾದ ಇದೆ. ಅದೇ ಈಶ್ವರ ಪ್ರಣಿಧಾನ.

## ಈಶ್ವರ-ಪ್ರಣಿಧಾನ

**ಈಶ್ವರ ಪ್ರಣಿ ಧಾನದ್ವಾ ॥** [ಯೋಗದರ್ಶನ 1-23]

ಅರ್ಥಾತ್, ಪರಮಾತ್ಮನ ವಿಶೇಷ ಭಕ್ತಿಯಿಂದಲೂ, ಸಮಾಧಿಯು ಶೀಘ್ರಸಿದ್ಧಿಸಲಿಕ್ಕೆ

ಸಾಧ್ಯವಿದೆ. ವಿಶೇಷ ಭಕ್ತಿಗೆ ಪ್ರಣಿಧಾನ ಎಂದು ಹೆಸರು. ಸಾಧಕನಿಗೆ ಪರಮಾತ್ಮನ ವಿಶೇಷ ದಿವ್ಯ ಗುಣಗಳ ಜ್ಞಾನವು ಒದಗಿಬಂದಾಗ, ಪ್ರಪಂಚದ ಅನ್ಯವಸ್ತುಗಳ ಕಡೆಗೆ ಅವನ ಆಸಕ್ತಿ ಮುಗಿದು ಹೋಗುತ್ತದೆ, ಮತ್ತು ಪರಮಾತ್ಮನ ಮೇಲೆ ವಿಶೇಷ ಪ್ರೇಮವು ಬೆಳೆಯುತ್ತದೆ. ಈ ಸ್ಥಿತಿಯಲ್ಲಿ ಅವನು ಪರಮಾತ್ಮನ ಕೃಪೆಗೆ ಪಾತ್ರನಾಗುತ್ತಾನೆ ಮತ್ತು ಈ ಕಾರಣದಿಂದಾಗಿ ಅವನಿಗೆ ಸಮಾಧಿಯು ಬೇಗನೇ ಸಿದ್ಧಿಸುತ್ತದೆ.

ಯೋಗದರ್ಶನ ಪಾದ - ೨ ಸೂತ್ರ ೧ ರ ಅರ್ಥವನ್ನು ವಿವರಿಸುವಾಗ ವ್ಯಾಸಮುನಿಗಳು ಈಶ್ವರ ಪ್ರಣಿಧಾನದ ರಹಸ್ಯವನ್ನು ಬಹಳ ಸೊಗಸಾಗಿ ತಿಳಿಸಿದ್ದಾರೆ. ಅವರ ಮಾತಿನಲ್ಲಿ ಹೇಳುವುದಾದರೆ, "**ಸರ್ವಕ್ರಿಯಾಣಾಂ ಪರಮಗುರಾವರ್ಪಣಂ ತತ್ಫಲ ಸಂನ್ಯಾಸೋ ವಾ**", ಎಂದರೆ, ಸಮಸ್ತ ಕ್ರಿಯೆಗಳನ್ನು ಪರಮಗುರು ಪರಮಾತ್ಮನಿಗೆ ಸಮರ್ಪಣೆ ಮಾಡುವುದು ಮತ್ತು ಆ ಕ್ರಿಯೆಗಳ ಲೌಕಿಕ ಪ್ರತಿಫಲದ ಅಭಿಲಾಶೆಯನ್ನು ಇಟ್ಟುಕೊಳ್ಳದಿರುವುದೇ ಈಶ್ವರ ಪ್ರಣಿಧಾನವಾಗಿದೆ.

## ಪರಮಾತ್ಮನ ಸ್ವರೂಪ

ಈಶ್ವರ ಪ್ರಣಿಧಾನವು ಪರಮಾತ್ಮನ ವಾಸ್ತವಿಕ ಸ್ವರೂಪವನ್ನು ಅರಿತುಕೊಳ್ಳುವ ತನಕ ಸಿಧಿಸುವುದಿಲ್ಲ. ಪತಂಜಲಿ ಮುನಿಗಳು ಪರಮಾತ್ಮನ ನಿಜಸ್ವರೂಪವನ್ನು ಜನರು ಸರಿಯಾಗಿ ಅರಿತುಕೊಳ್ಳಲಿ ಎಂಬ ಉದ್ದೇಶದಿಂದ, ಅವನ ಮುಖ್ಯ ಲಕ್ಷಣಗಳನ್ನು ಈ ರೀತಿ ತಿಳಿಸಿದ್ದಾರೆ.

**ಕ್ಲೇಶಕರ್ಮವಿಪಾಕಾಶಯೈರಪರಾಮೃಷ್ಟಃ ಪುರುಷ ವಿಶೇಷ ಈಶ್ವರಃ ॥**

[ಯೋಗದರ್ಶನ 1-24]

ಅರ್ಥಾತ್, ಅವಿದ್ಯಾದಿ ಕ್ಲೇಶಗಳು, ಶುಭಾಶುಭ ಕರ್ಮಗಳು, ಮತ್ತು ಆಕರ್ಮಗಳ ಫಲಭೋಗದಿಂದ ಉತ್ಪನ್ನವಾಗುವ ಸಂಸ್ಕಾರಗಳು, ಇವುಗಳಿಂದ ಸರ್ವಥಾ ದೂರ ಇರುವುದು ಪರಮಾತ್ಮನ ವಿಶಿಷ್ಟ ಲಕ್ಷಣವಾಗಿದೆ. ಅನ್ಯ ಜೀವಾತ್ಮಗಳಲ್ಲಿ ಈ ವಿಶಿಷ್ಟ ಲಕ್ಷಣವು ಕಂಡುಬರುವುದಿಲ್ಲ. ಎಂದರೆ, ಸಾಮಾನ್ಯ ಜೀವಾತ್ಮರು ಅವಿದ್ಯಾದಿ ದೋಷಗಳಿಂದ ಯುಕ್ತರಾಗಿರುತ್ತಾರೆ. ಮತ್ತು ಈ ದೋಷಗಳಿಂದಾಗಿ ದುಃಖಿತರಾಗಿರುತ್ತಾರೆ. ಈ ಜೀವಾತ್ಮರು ಶುಭ ಅಥವಾ ಅಶುಭ ಕರ್ಮಗಳನ್ನು ಮಾಡುತ್ತಿರುತ್ತಾರೆ. ಈ ಕರ್ಮಗಳಿಗನುಸಾರವಾಗಿ ಅವರಿಗೆ ಫಲವೂ ಸಿಗುತ್ತದೆ. ಈ ಫಲವು ಅವರಿಗೆ ಸುಖ ಅಥವಾ ದುಃಖವನ್ನು ಕೊಡುತ್ತದೆ. ಈ ರೀತಿ ತಮ್ಮ ತಮ್ಮ ಕರ್ಮ ಫಲಗಳ ಭೋಗದಿಂದ ಅವರ ಮೇಲೆ ತದನುಸಾರವಾಗಿ ಉತ್ತಮ

ಅಥವಾ ಕೆಟ್ಟ ಸಂಸ್ಕಾರಗಳು ಬೀಳುತ್ತವೆ. ಈ ಸಂಸ್ಕಾರಗಳಿಗನುಸಾರವಾಗಿ ಅವರ ಮುಂದಿನ ಜನ್ಮವು ತಯಾರಾಗುತ್ತದೆ. ಈ ಶೃಂಖಲೆಯು ಸದಾ ನಡೆಯುತ್ತಾ ಇರುತ್ತದೆ. ಇದನ್ನೇ ಕರ್ಮ ಬಂಧನ ಎಂದು ಹೇಳುತ್ತಾರೆ. ಎಲ್ಲಾ ಆತ್ಮಗಳೂ ಬಂಧನದಲ್ಲಿ ಇರುತ್ತವೆ. ದೇವರೂ ಒಂದು ಆತ್ಮವೇ ಆದರೂ, ದೇವರು ಇತರ ಆತ್ಮಗಳಂತೆ ಈ ಬಂಧನದ ಒಳಗೆ ಇರುವುದಿಲ್ಲ. ಅವರು ಈ ಬಂಧನದ ಹೊರಗೆ ಇದ್ದಾರೆ. ಯಾಕೆಂದರೆ, ದೇವರು ಸಾಮಾನ್ಯ ಆತ್ಮ ಅಲ್ಲ. ದೇವರು ಪರಮ ಆತ್ಮ. ಜ್ಞಾನಿಗಳು ಇಲ್ಲಿ ಪರಮಾತ್ಮನ ವಿಶೇಷ ಲಕ್ಷಣಗಳನ್ನು ನಮಗೆ ತಿಳಿಸಿದ್ದಾರೆ. ಇದರಿಂದ ಜೀವಾತ್ಮರಿಗೂ ಪರಮಾತ್ಮನಿಗೂ ಇರುವ ವ್ಯತ್ಯಾಸವು ಬಹಳ ಸ್ಪಷ್ಟವಾಗುತ್ತದೆ. ಮಾತ್ರವಲ್ಲ, ಲೋಕದಲ್ಲಿ ಜನರು ಎಷ್ಟೆಲ್ಲಾ ಶರೀರಧಾರೀ ದೇವರುಗಳ ಪ್ರಚಾರ ಮಾಡಿರುವರೋ, ಆ ದೇವರುಗಳೆಲ್ಲಾ ಮೇಲೆ ಹೇಳಿದ ಅವಿದ್ಯೆ, ಕರ್ಮ ವಿಪಾಕಾದಿ ದೋಷಗಳಿಂದ ಯುಕ್ತರಾಗಿರುವುದರಿಂದ, ದೇವರು ಅಲ್ಲವೇ ಅಲ್ಲ ಎಂದು ಸ್ಪಷ್ಟವಾಗುತ್ತದೆ. ಯಾಕೆಂದರೆ, ಶರೀರಧಾರಿ ವ್ಯಕ್ತಿಯು ಕ್ಲೇಶಾದಿ ದೋಷಗಳಿಂದ ಮುಕ್ತನಾಗಿರಲು ಸಾಧ್ಯವಿಲ್ಲ.

ದೇವರನ್ನು ನಂಬದೆ ಇರುವ ನಾಸ್ತಿಕರ ಸಿದ್ಧಾಂತವೂ ಈ ಮೇಲಿನ ಸೂತ್ರದಿಂದ ಸರಿಯಲ್ಲ ಎಂದು ಇಲ್ಲಿ ನಮಗೆ ಗೊತ್ತಾಗುತ್ತದೆ. ಇದೇ ರೀತಿ, ಜೀವಾತ್ಮನೇ ಪರಮಾತ್ಮನೆಂದು ಹೇಳುವವರ ಮತವೂ, ಜೀವಾತ್ಮ ಮತ್ತು ಪರಮಾತ್ಮ, ಇವೆರಡೂ ಒಂದೇ ಬೇರೆ ಬೇರೆ ಅಲ್ಲ ಎಂದು ಹೇಳುವವರ ಮತವೂ ತಪ್ಪು ಎಂದೂ ಸಿದ್ಧವಾಗುತ್ತದೆ. ಪುರುಷ ವಿಶೇಷನೇ ದೇವರು, ಎಲ್ಲಾ ಜೀವಾತ್ಮರೂ ದೇವರಲ್ಲ.

ಇಲ್ಲಿ ಒಂದು ಮಾತು ವಿಚಾರಣೀಯವಾಗಿದೆ, ಅದೇನೆಂದರೆ, ಸೂತ್ರಕಾರರು ದೇವರನ್ನು ಕರ್ಮವಿಪಾಕಾಶಯೈರಪರಾಮೃಷ್ಟ ಎಂದು ಹೇಳಿರುವುದರಿಂದ, ಕೆಲವರು ದೇವರು ಕರ್ಮರಹಿತನೆಂದು ಇಲ್ಲಿ ಅಭಿಪ್ರಾಯ ಪಟ್ಟುಕೊಳ್ಳಬಹುದು. ಇದು ಸರಿಯಲ್ಲ. ಯಾಕೆಂದರೆ, ಯಾವ ರೀತಿಯಲ್ಲಿ ಜೀವಾತ್ಮರು ಶುಭಾಶುಭಕರ್ಮಗಳನ್ನು ಮಾಡುತ್ತಿರುತ್ತಾರೋ, ಆ ರೀತಿಯಲ್ಲಿ ಪರಮಾತ್ಮನು, ಕರ್ಮ ಮಾಡುತ್ತಿರುವುದಿಲ್ಲ. ಪರಮಾತ್ಮನು, ಸರ್ವಜ್ಞ, ಸರ್ವಶಕ್ತ, ಪವಿತ್ರ ಮತ್ತು ಕಲ್ಯಾಣಕಾರಿ ಆಗಿರುವುದರಿಂದ, ಅವನ ಕರ್ಮವು ಸದಾ ಶುಭಕರವಾಗಿಯೇ ಇರುತ್ತದೆ. ಅದು ಎಂದಿಗೂ ಅಶುಭವಾಗಿರುವುದಿಲ್ಲ. ಸೃಷ್ಟಿಯ ಉತ್ಪತ್ತಿ, ಸ್ಥಿತಿ ಮತ್ತು ಪ್ರಲಯ, ಜೀವರ ಕರ್ಮಾನುಸಾರವಾಗಿ ಫಲಕೊಡುವ ವ್ಯವಸ್ಥೆ, ಇತ್ಯಾದಿ ದೇವರ ಕಾರ್ಯಗಳಾಗಿವೆ. ಆದುದರಿಂದ, ದೇವರನ್ನು ಕರ್ಮರಹಿತನೆಂದು ನಂಬುವವರು ನಿಜವಾಗಿಯೂ ದೇವರ

ವಾಸ್ತವಿಕ ಸ್ವರೂಪವನ್ನು ಅರಿತುಕೊಂಡಿಲ್ಲವೆಂದೇ ಹೇಳಬಹುದು.

**ತತ್ರ ನಿರತಿಶಯಂ ಸರ್ವಜ್ಞ ಬೀಜಮ್ ॥** [ಯೋಗದರ್ಶನ 1-25]

ಅರ್ಥಾತ್, ಪರಮಾತ್ಮನಿಗಿಂತ ದೊಡ್ಡವರು ಬೇರೆ ಯಾರೂ ಇಲ್ಲ. ಯಾಕೆಂದರೆ, ಅವನು ಸರ್ವಜ್ಞನು. ಭೂತ, ವರ್ತಮಾನ, ಮತ್ತು ಭವಿಷ್ಯತ್ತಿನ ಜ್ಞಾನವು ಸಂಪೂರ್ಣವಾಗಿ ಅವನಲ್ಲಿದೆ. ಅವನಿಗೆ ಸಮಾನರಾದ ವಿದ್ವಾಂಸರು ಹಿಂದೆ ಯಾರೂ ಹುಟ್ಟಿಲ್ಲ, ಈಗ ಯಾರೂ ಇಲ್ಲ, ಮತ್ತು ಇನ್ನು ಮುಂದಕ್ಕೂ ಯಾರೂ ಹುಟ್ಟುವಹಾಗಿಲ್ಲ.



**ಸ ಏಷ ಪೂರ್ವೇಷಾಮಪಿ ಗುರುಃ ಕಾಲೇನಾನವಚ್ಛೇಧಾತ್ ॥**

[ಯೋಗದರ್ಶನ 1-26]

ಎಂದರೆ, ಪರಮಾತ್ಮನು ಗುರುಗಳ ಗುರು. ಯಾಕೆಂದರೆ ಅವನು (ಭೂತ, ವರ್ತಮಾನ ಮತ್ತು ಭವಿಷ್ಯತ್ತು ಎಂಬ) ಕಾಲ ವಿಭಜನೆಗೆ ಒಳಗಾಗಿರುವುದಿಲ್ಲ. ದೊಡ್ಡ ದೊಡ್ಡ ಋಷಿ ಮಹರ್ಷಿ ಮತ್ತು ವಿಜ್ಞಾನಿಗಳು ಕಾಲದ ದವಡೆಯೊಳಗೆ ಹೋಗಿಬಿಟ್ಟಿದ್ದಾರೆ. ಎಂದರೆ, ಯಾವ ಶರೀರದ ಮಾಧ್ಯಮದಿಂದ ಅವರು ವಿದ್ಯೆಯನ್ನು ಕಲಿಯುತ್ತಿದ್ದರೋ ಮತ್ತು ಕಲಿಸುತ್ತಿದ್ದರೋ, ಆ ಶರೀರವು ನಶ್ವರವಾಗಿತ್ತು. ಆದುದರಿಂದ, ಶರೀರವು ಈ ರೀತಿ ನಾಶವಾಗಿ ಹೋದಕಾರಣ ಮುಂದೆ ಅವರು ಯಾರಿಗೂ ವಿದ್ಯೆಕಲಿಸಲಿಕ್ಕೆ ಸಾಧ್ಯವಾಗಲಿಲ್ಲ. ಇದರ ತಾತ್ಪರ್ಯ ಏನೆಂದರೆ ಎಷ್ಟರತನಕ (ಸಜೀವ) ಶರೀರ ಇರುತ್ತದೆಯೋ, ಅಷ್ಟರ ತನಕ ಮನುಷ್ಯರು ಗುರುಗಳಾಗಿ ವಿದ್ಯೆ ಕಲಿಸಲಿಕ್ಕೆ ಸಮರ್ಥರಾಗಿರುತ್ತಾರೆ. ಶರೀರವು ಬಿದ್ದು ಹೋದಮೇಲೆ ಈ ಸಾಮರ್ಥ್ಯವು ಕಳೆದು ಹೋಗುತ್ತದೆ. ಪರಮಾತ್ಮನು ಸರ್ವವ್ಯಾಪಕನು, ಸರ್ವಶಕ್ತನು, ಮತ್ತು ಸರ್ವಜ್ಞನು. ಆದುದರಿಂದ ಅವನಿಗೆ ಶರೀರದ ಅವಶ್ಯಕತೆ ಇಲ್ಲ. ಆದುದರಿಂದ ಅವನು ಎಲ್ಲಾ ಸಮಯದಲ್ಲಿಯೂ ಎಲ್ಲರಿಗೂ ಗುರು ಎಂದಾಗುವುದಕ್ಕೆ ಸಮರ್ಥನು. ಪರಮಾತ್ಮನ ಸಹಾಯತೆಯಿಂದ ಜೀವರು ಅನ್ಯರಿಗೆ ವಿದ್ಯೆಕಲಿಸಲು ಸಮರ್ಥರಾಗುತ್ತಾರೆ. ಪರಮಾತ್ಮನ ನಿಜವಾದ ಜ್ಞಾನ ಇಲ್ಲದವರು ಕೆಲವರು ಜೀವರು ಸ್ವಪ್ರಯತ್ನದಿಂದ ತಾವೇ ತಾವಾಗಿ ವಿದ್ವಾಂಸರಾಗುತ್ತಾರೆ ಎಂದು ತಿಳಿದುಕೊಂಡಿದ್ದಾರೆ. ಇನ್ನು ಕೆಲವರು ಪರಮಾತ್ಮನಿಗಿಂತಲೂ ಗುರುಗಳು ದೊಡ್ಡವರೆಂದು ಹೇಳುತ್ತಾರೆ. ಇದಕ್ಕೂ ಕಾರಣ, ಪರಮಾತ್ಮನ ಕುರಿತಾಗಿ ಅವರಲ್ಲಿರುವ ಅಜ್ಞಾನವಾಗಿದೆ. ನಿಜವಾಗಿ ಹೇಳುವುದಾದರೆ, ಎಲ್ಲಾ ಗುರುಗಳ, ವಿದ್ವಾಂಸರ ಮತ್ತು ಋಷಿಗಳ ಜ್ಞಾನವು, ಪರಮಾತ್ಮನ ಜ್ಞಾನದ ಮುಂದೆ ಅತಿ ಕ್ಷುಲ್ಲಕವಾಗಿದೆ. ಪ್ರಪಂಚದ ಗುರುಗಳೆಲ್ಲಾ ಪರಮಾತ್ಮನು ಕರುಣಿಸಿದ ವೇದ ಜ್ಞಾನವನ್ನು ಪಡೆದು, ಅವನು ಕೊಟ್ಟ ಮಾನವ ಶರೀರ, ಇಂದ್ರಿಯಗಳ

ಸಹಾಯತೆಯಿಂದ ಶಿಷ್ಯರಿಗೆ ವಿದ್ಯೆ ಕಲಿಸಲು ಯೋಗ್ಯರಾಗಿರುತ್ತಾರೆ. ಆದುದರಿಂದ ಗುರುಗಳು ಪರಮಾತ್ಮನಿಂದಲೂ ದೊಡ್ಡವರೆಂದು ಹೇಳುವುದು ಸರಿಯಲ್ಲ.

**ಪ್ರಶ್ನೆ** :– ಪರಮಾತ್ಮನು ಒಂದು ವಸ್ತು ; ಹೌದೋ ಅಲ್ಲವೋ?

**ಉತ್ತರ**:– ಹೌದು. ಪರಮಾತ್ಮನು ಒಂದು ವಸ್ತು. ಪೃಥ್ವೀ ಇತ್ಯಾದಿಗಳಂತೆ, ಪರಮಾತ್ಮನೂ ಒಂದು ಅಸ್ತಿತ್ವದಲ್ಲಿರುವ ಪದಾರ್ಥ. ಆದರೆ, ಪರಮಾತ್ಮನಿಗೂ, ಪೃಥ್ವೀ ಇತ್ಯಾದಿ ವಸ್ತುಗಳಿಗೂ ಒಂದು ವ್ಯತ್ಯಾಸ ಇದೆ. ಅದೇನೆಂದರೆ, ಈ ವಸ್ತುಗಳೆಲ್ಲಾ ಅನೇಕ ಅವಯವಗಳ ಸಂಯೋಗದಿಂದ ಉತ್ಪನ್ನವಾಗುತ್ತವೆ. ಪರಮಾತ್ಮನು ಈ ರೀತಿ ಉತ್ಪನ್ನವಾದ ವಸ್ತು ಅಲ್ಲ. ಅವನು ಅನುತ್ಪನ್ನನು. ಬಣ್ಣ, ಆಕೃತಿ, ಭಾರ, ಉದ್ದ, ಅಗಲ ಇತ್ಯಾದಿ ಲಕ್ಷಣಗಳಿಂದ ಯುಕ್ತವಾದ ವಸ್ತುಗಳೇ ನಿಜವಾಗಿಯೂ ವಸ್ತುಗಳು. ಈ ಲಕ್ಷಣಗಳಿಲ್ಲದ ವಸ್ತುಗಳು ನಿಜವಾದ ವಸ್ತುಗಳಲ್ಲ, ಎಂದು ಹೇಳುವುದು ಸರಿಯಲ್ಲ. ಯಾವುದರಲ್ಲಿ ಜ್ಞಾನ, ಆನಂದ, ಬಲ ಇತ್ಯಾದಿಗಳು ಇವೆಯೋ ಅದೂ ಕೂಡ ಒಂದು ವಸ್ತು ಆಗಿದೆ. ಇದಕ್ಕೆ ಪ್ರಮಾಣ ಮಹರ್ಷಿ ದಯಾನಂದರು "**ಆರ್ಯೋದ್ದೇಶ ರತ್ನಮಾಲಾ**" ಎಂಬ ಸ್ವರಚಿತ ಪುಸ್ತಕದಲ್ಲಿ, ಪ್ರಥಮ ರತ್ನದಲ್ಲಿ "ಯಾವುದು ಕೇವಲ ಚೇತನ ವಸ್ತುವೋ" ಎಂದು ಹೇಳಿ, ಕೇವಲ ಚೇತನ ಮಾತ್ರ ಲಕ್ಷಣವಾಗಿರುವುದನ್ನು ಒಂದು ವಸ್ತು ಎಂದು ಸ್ವೀಕರಿಸಿದ್ದಾರೆ. ತಮ್ಮ "**ಸತ್ಯಾರ್ಥ ಪ್ರಕಾಶ**"ದ ಸ್ವಮಂತವ್ಯಾಮಂತವ್ಯ ಪ್ರಕಾಶದಲ್ಲಿ, ಇವರು ಅನಾದಿ ಪದಾರ್ಥಗಳು ಮೂರು : ಪರಮಾತ್ಮ, ಜೀವ ಮತ್ತು ಪ್ರಕೃತಿ.........." ಎಂದೂ ಹೇಳಿದ್ದಾರೆ. ಆದುದರಿಂದ ಪರಮಾತ್ಮನೂ ಒಂದು ಪದಾರ್ಥ ಪರಮಾತ್ಮನನ್ನು ಒಂದು ವಸ್ತು ಅಥವಾ ಪದಾರ್ಥ ಎಂದು ತಿಳಿದುಕೊಂಡೇ "**ಈಶ್ವರ-ಪ್ರಣಿಧಾನ**"ದ ಸಿದ್ಧಿ ಸಂಭವವಾಗಿದೆ, ಅನ್ಯಥಾ ಇದು ಸಾಧ್ಯವಿಲ್ಲ. ಮತ್ತು ಕೆಲವರು ಪರಮಾತ್ಮನನ್ನು ಶರೀರಧಾರಿ ಎಂದುಕೊಂಡು ಅವನ ಭಕ್ತಿ ಮಾಡುತ್ತಾರೆ. ಬೇರೆ ಕೆಲವರು ಅವನನ್ನು ಸರ್ವವ್ಯಾಪಕನೆಂದುಕೊಂಡು ಅವನ ಉಪಾಸನೆ ಮಾಡುತ್ತಾರೆ, ಆದರೆ, ಅವನನ್ನು ಒಂದು "ಪದಾರ್ಥ" ಎಂದು ಒಪ್ಪಿಕೊಳ್ಳುವುದಿಲ್ಲ. ಈ ರೀತಿ ಪರಮಾತ್ಮನ ಸ್ವರೂಪವನ್ನು ಸರಿಯಾಗಿ ತಿಳಿದುಕೊಳ್ಳದೆ ಅವನ ಭಕ್ತಿ ಮಾಡುತ್ತಿರುವ ಕೋಟಿ ಕೋಟಿ ಜನರು ಸಫಲತೆಯನ್ನು ಪಡೆಯದೆ ಇರುತ್ತಾರೆ. ಒಂದು ವೇಳೆ ಪ್ರಪಂಚದ ಜನರೆಲ್ಲಾ

ಪರಮಾತ್ಮನ ಸ್ವರೂಪವನ್ನು ಸರಿಯಾಗಿ ತಿಳಿದುಕೊಂಡು ಅವನ ಭಕ್ತಿಮಾಡಿದರೆ, ಇಲ್ಲಿ ಅಜ್ಞಾನ, ಅನ್ಯಾಯ ಮತ್ತು ದುಃಖ ಇವು ಬೆಳೆಯುವುದಕ್ಕೆ ಸಾಧ್ಯವಿಲ್ಲ.

## ಪರಮಾತ್ಮನ ಹೆಸರು

**ತಸ್ಯವಾಚಕಃ ಪ್ರಣವಃ ॥** [ಯೋಗದರ್ಶನ 1-17]

ಅರ್ಥಾತ್, ಪರಮಾತ್ಮನ ವಾಚಕ ಶಬ್ದ ಅವನ ಹೆಸರು ಪ್ರಣವ, ಎಂದರೆ, ಓಮ್. ಪರಮಾತ್ಮನು ಏಕಸತ್ತಾತ್ಮಕ ವಸ್ತು. ಸಾಧಕನು ಪರಮಾತ್ಮನ ಸ್ವರೂಪ ಮತ್ತು ಅವನ ಹೆಸರನ್ನು ಸರಿಯಾಗಿ ಅರಿತುಕೊಂಡಾಗ, ಅವನಿಗೆ ಯೋಗಮಾರ್ಗದಲ್ಲಿ ಸಫಲತೆಯು ಸಿಗುತ್ತದೆ. ಮಹರ್ಷಿ ಪತಂಜಲಿಯವರು ಮೊದಲು ಪರಮಾತ್ಮನ ಸ್ವರೂಪವನ್ನು ತಿಳಿಸಿ, ಈಗ ಈ ಸೂತ್ರದಲ್ಲಿ ಅವನ ಹೆಸರನ್ನು ಹೇಳಿದ್ದಾರೆ. ಈಶ್ವರ-ಪ್ರಣೀಧಾನದಲ್ಲಿ ವಾಚಕ ಶಬ್ದ ಮತ್ತು ವಾಚ್ಯವಸ್ತು, ಇವೆರಡರ ಪರಿಜ್ಞಾನ ಬಹಳ ಅಗತ್ಯವಾಗಿದೆ. ಯಾವ ಹೆಸರಿನಿಂದ ನಾವು ದೇವರನ್ನು ಕರೆಯುತ್ತೇವೆಯೋ, ಆ ಹೆಸರು ದೇವರ ಸ್ವರೂಪವನ್ನು ತಿಳಿಸಬೇಕು. ಕೆಲವು ಜನರು, ಪರಮಾತ್ಮನ ಹೆಸರನ್ನು ಸ್ಮರಿಸುತ್ತಾರೆ, ಆದರೆ ಅವರಿಗೆ ಆ ಹೆಸರಿನ ಅರ್ಥ ಗೊತ್ತಿರುವುದಿಲ್ಲ. ಒಂದು ವೇಳೆ ಗೊತ್ತಿದ್ದರೂ ಕೂಡ, ಅದು ಅವನ ನಿಜ ಸ್ವರೂಪಕ್ಕೆ ವಿರುದ್ಧವಾಗಿದೆ. ಇನ್ನು ಕೆಲವರು ಪರಮಾತ್ಮನ ಹೆಸರಿನ ಅರ್ಥವನ್ನು ತಿಳಿದಿದ್ದಾರೆ, ಆದರೆ, ಅವರು ಜಪ ಮಾಡುವಾಗ ಮನಸ್ಸಿನಲ್ಲಿ ಅರ್ಥವು ನಿಲ್ಲುವುದಿಲ್ಲ ಮತ್ತು ಅರ್ಥವು ಮನಸ್ಸಿನಲ್ಲಿ ನಿಂತಾಗ ಜಪವು ಸಾಧ್ಯವಾಗುವುದಿಲ್ಲ. ಈ ಎಲ್ಲಾ ಸಮಸ್ಯೆಗಳನ್ನು ಬಗೆಹರಿಸುವ ಉಪಾಯ - ಪರಮಾತ್ಮನ ಸ್ವರೂಪ ಮತ್ತು ಅವನ ಹೆಸರಿನ ಜ್ಞಾನವು ಸಾಧಕನಿಗೆ ಪರಿಪಕ್ವವಾಗಿರಬೇಕು. ಜ್ಞಾನವು ಪರಿಪಕ್ವವಾದ ಮೇಲೆ ಜಪಮಾಡುವಾಗ ಅರ್ಥವನ್ನು ಮನಸ್ಸಿನಲ್ಲಿ ಗ್ರಹಿಸಿಕೊಂಡಿರುವುದಕ್ಕೆ ಏನೂ ತೊಂದರೆ ಬರುವುದಿಲ್ಲ.

## ಜಪ ಮಾಡುವ ವಿಧಿ

**ತಜ್ಜಪಸ್ತದರ್ಥಭಾವನಮ್ ॥** [ಯೋಗದರ್ಶನ 1-28]

ಅರ್ಥಾತ್, ಪ್ರಣವ ಮಂತ್ರ ಓಮ್, ಇದರ ಜಪಮಾಡುವಾಗ, ಇದರ ಅರ್ಥ = ಪರಮಾತ್ಮ-ಇದರ ಬಗ್ಗೆ ಮನಸ್ಸಿನಲ್ಲಿ ವಿಚಾರ ಮಾಡಬೇಕು. ಜಪ ಪ್ರಾರಂಭಮಾಡುವುದಕ್ಕೆ ಮೊದಲು, ಯೋಗದರ್ಶನ, ಯಜುರ್ವೇದದ ಅಧ್ಯಾಯ 40, ಮಂತ್ರ 8ರಲ್ಲಿ ಹೇಳಿದ ಪ್ರಕಾರ "ಸಪರ್ಯಗಾತ್..........." ಇತ್ಯಾದಿ, ಮತ್ತು

ಆರ್ಯಸಮಾಜದ ದ್ವಿತೀಯ ನಿಯಮದಲ್ಲಿ ವರ್ಣಿಸಿದಂತೆ ಪರಮಾತ್ಮನ ಸ್ವರೂಪವನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ನಂತರ, ಏಕಾಂತದಲ್ಲಿ ಕುಳಿತು, ಏಕಾಗ್ರತೆಯಿಂದ '**ಓಮ್**' ಈ ಪ್ರಣವ ಮಂತ್ರದ ಜಪಮಾಡುತ್ತಾ ಹೋಗಬೇಕು. ಪ್ರಾರಂಭದಲ್ಲಿ, ಮೌಖಿಕವಾಗಿ ಮಂತ್ರದ ಉಚ್ಚಾರಣೆ ಮಾಡುತ್ತಾ ಹೋದರೆ ತೊಂದರೆ ಇಲ್ಲ. ಈ ರೀತಿ ಜಪಮಾಡುವ ದೃಢ ಅಭ್ಯಾಸದ ನಂತರ ಮಾನಸಿಕ ಜಪಮಾಡುವುದಕ್ಕೆ ಏನೂ ಕಷ್ಟವಾಗುವುದಿಲ್ಲ. ಅಭ್ಯಾಸವು ದೃಢವಾದ ನಂತರ, ನಿಜವಾಗಿ ಹೇಳುವುದಾದರೆ, ಮಾನಸಿಕ ಜಪವೇ ಉತ್ತಮವಾಗಿದೆ. ಯಾವ ರೀತಿಯಲ್ಲಿ, ಬಾಯಿಯಿಂದ ಪುನಃ ಪುನಃ '**ಓಮ್**' ಎನ್ನುತ್ತಾ ಜಪಮಾಡಲಾಗುತ್ತದೆಯೋ, ಅದೇ ರೀತಿಯಲ್ಲಿ ಅರ್ಥವನ್ನು ಗ್ರಹಿಸಿಕೊಂಡು ಮನಸ್ಸಿನಲ್ಲಿ ಜಪಮಾಡಬೇಕು. ಈ ರೀತಿ ಅರ್ಥಸಹಿತ ಜಪಮಾಡಿದರೆ ಮನಸ್ಸು ವಶಕ್ಕೆ ಬರುತ್ತದೆ ಮತ್ತು ಪರಮಾತ್ಮನ ಮೇಲೆ ಪ್ರೀತಿಯು ದೃಢವಾಗುತ್ತದೆ. ಹೇಗೆ ಲಿಂಬೆ, ಲಿಂಬೆ ಎಂದು ಪುನಃ ಪುನಃ ಹೇಳಿದಾಗ ಬಾಯಿಯಲ್ಲಿ ನೀರು ಬರುತ್ತದೋ, ಅದೇ ರೀತಿ ದೇವರ ಹೆಸರನ್ನು ಅರ್ಥಸಹಿತವಾಗಿ ಜಪಿಸಿದರೆ, ಮನಸ್ಸಿನಲ್ಲಿ ದೇವರ ಕಡೆಗೆ ಆಕರ್ಷಣೆಯು ಉತ್ಪನ್ನವಾಗುತ್ತದೆ.

ಇಲ್ಲಿ ಒಂದು ಪ್ರಶ್ನೆಯು ಹುಟ್ಟಬಹುದು. ಲಿಂಬೆಹಣ್ಣನ್ನು ನಾವು ಪ್ರತ್ಯಕ್ಷ ನೋಡಿದ್ದೇವೆ ಮತ್ತು ಅವನ್ನು ತಿಂದು ರುಚಿಕೂಡ ನೋಡಿದ್ದೇವೆ. ದೇವರ ಬಗ್ಗೆ ಹೀಗೆ ಹೇಳುವುದಕ್ಕೆ ಸಾಧ್ಯವಿಲ್ಲ. ಪರಮಾತ್ಮನನ್ನು ಯಾರೂ ಪ್ರತ್ಯಕ್ಷ ನೋಡಿಲ್ಲ ಮತ್ತು ಅವನ ಆನಂದದ ಅನುಭವವನ್ನೂ ಪಡೆದು ನಮಗೆ ಗೊತ್ತಿಲ್ಲ ಎಂದು ಯಾರಾದರೂ ಹೇಳಬಹುದು. ಇದಕ್ಕೆ ಉತ್ತರ ಏನೆಂದರೆ ಸತ್ಯವಾದಿಗಳೂ ಸತ್ಯವನ್ನು ನಂಬುವವರೂ ಮತ್ತು ಸತ್ಯಮಾರ್ಗದಲ್ಲಿ ನಡೆಯುವವರೂ ಆದ ಯೋಗಿಗಳು ಪರಮಾತ್ಮನ ಪ್ರಾಪ್ತಿಯ ಆನಂದವನ್ನು ಮೊದಲು ಪಡೆದು, ಪರಮಾತ್ಮನು ಆನಂದದ ಭಂಡಾರ ಎಂದು ಹೇಳಿದ್ದಾರೆ. ಆದುದರಿಂದ ಮೊದಲು ಅವರ ಮಾತಿನಲ್ಲಿ ವಿಶ್ವಾಸ ಇಟ್ಟುಕೊಂಡು ಜಪಮಾಡಬೇಕು. ಈ ರೀತಿ ಋಷಿಗಳ ಮಾತನ್ನು ಪೂರ್ಣ ಸತ್ಯ ಎಂದು ನಂಬಿ ಜಪಮಾಡಿದಾಗ ಮನಸ್ಸಿನಲ್ಲಿ ಪರಮಾತ್ಮನ ಕಡೆಗೆ ಒಂದು ತರದ ತರಂಗಗಳು ಏಳಲಿಕ್ಕೆ ಪ್ರಾರಂಭಿಸುತ್ತವೆ. ಈ ಸ್ಥಿತಿಯಲ್ಲಿ ಹೊರಗಿನ ವಿಷಯಗಳು ಮನಸ್ಸನ್ನು ತಮ್ಮ ಕಡೆಗೆ ಆಕರ್ಷಿಸುವುದಿಲ್ಲ. ಆದುದರಿಂದ, ವೇದಗಳು, ಉಪನಿಷತ್ತುಗಳು ಮತ್ತು ದರ್ಶನ ಶಾಸ್ತ್ರಗಳು ಪರಮಾತ್ಮನ ಕುರಿತಾಗಿ ಏನು ಹೇಳುತ್ತವೆಯೋ ಅದರ ಮೇಲೆ ಪೂರ್ಣ ವಿಶ್ವಾಸ ಇಟ್ಟುಕೊಂಡು, ಜಪಮಾಡಿದಾಗ ನಿಜವಾಗಿಯೂ ಸಫಲತೆಯು ಸಿಗುತ್ತದೆ, ಅನ್ಯಥಾ ಇದು ಅಸಾಧ್ಯ.

ಅನೇಕ ಬಾರಿ ಸಾಧಕರು ಮನಸ್ಸು ವಶಕ್ಕೆ ಬರುವುದಿಲ್ಲ ಎಂದು ಹೇಳುವುದನ್ನು ಕೇಳಿದ್ದೇವೆ. ಮನಸ್ಸು ವಶಕ್ಕೆ ಬಾರದೆ ಇರುವುದಕ್ಕೆ ಒಂದು ಮುಖ್ಯ ಕಾರಣ, ಸಾಧಕರಿಗೆ ಪರಮಾತ್ಮನ ನಿಜವಾದ ಸ್ವರೂಪದ ಅರಿವು ಇಲ್ಲದಿರುವುದು. ಇನ್ನು ಕೆಲವರು, ಜಪಮಾಡುವಾಗ ಮನಸ್ಸಿನಲ್ಲಿ ಅರ್ಥವು ಹೊಳೆಯುವುದಿಲ್ಲ, ಮತ್ತು ಅರ್ಥವನ್ನು ಚಿಂತಿಸಿದಾಗ, ಜಪವು ನಿಂತು ಹೋಗುತ್ತದೆ, ಎಂದೂ ಹೇಳುವುದುಂಟು. ಇದಕ್ಕೆ ಕಾರಣವೇನೆಂದರೆ, ಸಾಮಾನ್ಯವಾಗಿ, ಜಪಮಾಡುವವರ ಜ್ಞಾನ ಮತ್ತು ಅಭ್ಯಾಸ ಇವೆರಡೂ ನಿರ್ಬಲವಾಗಿವೆ. ಇವೆರಡೂ ದೃಢವಾದಾಗ, ಅರ್ಥಸಹಿತ ಜಪಮಾಡುವುದಕ್ಕೆ ಏನೂ ಕಷ್ಟವಾಗುವುದಿಲ್ಲ. ಅರ್ಥವನ್ನು ತಿಳಿಯದೆ ಜಪಮಾಡಿದರೆ, ಏನೂ ವಿಶೇಷ ಲಾಭ ಆಗುವುದಿಲ್ಲ. ವ್ಯಾವಹಾರಿಕ ಜೀವನದಲ್ಲಿ ಯಮ-ನಿಯಮಾದಿಗಳ ಪಾಲನೆ ಮಾಡದೆ ಇದ್ದರೆ ಆಗಲೂ ಜಪವು ವ್ಯರ್ಥವಾಗುತ್ತದೆ.

ಕೆಲವರು ಸಹಸ್ರ ಜಪ ಮಾಡುವುದುಂಟು. ಆದರೆ, ಅವರಿಗೆ ಅರ್ಥವು ತಿಳಿದಿರುವುದಿಲ್ಲ. ಇವರು ಯಮ-ನಿಯಮಗಳ ಪಾಲನೆಯನ್ನು ಮಾಡುವುದಿಲ್ಲ. ಈ ರೀತಿಯ ಜಪದಿಂದ, ಜ್ಞಾನ, ಬಲ, ಅಥವಾ ಆನಂದವು ಲಭಿಸುವ ಸಂಭವ ಇರುವುದಿಲ್ಲ.

ಸಾಮಾನ್ಯವಾಗಿ ಎಲ್ಲರಿಗೂ ಮನಸ್ಸನ್ನು ನಿಗ್ರಹಿಸುವುದು ಒಂದು ದೊಡ್ಡ ಸಮಸ್ಯೆಯಾಗಿ ಬರುತ್ತದೆ. ಈ ಸಮಸ್ಯೆಯನ್ನು ಬಗೆಹರಿಸುವುದಕ್ಕೆ ಒಂದು ಸರಿಯಾದ ಉಪಾಯವೇನೆಂದರೆ, ಜಪಮಾಡುವ ವ್ಯಕ್ತಿಯು ಮೊದಲು ತನ್ನ ಶರೀರ, ಇಂದ್ರಿಯಗಳು, ಮನಸ್ಸು ಇವೆಲ್ಲಾ ಜಡವಸ್ತುಗಳು, ನಿಜವಾಗಿ ತಾನೇ ಇವುಗಳನ್ನು ನಡೆಸುತ್ತಿದ್ದೇನೆ, ಎಂದು ತಿಳಿದುಕೊಳ್ಳಬೇಕು. ಎಷ್ಟರ ತನಕ ಮನುಷ್ಯನು ತನ್ನ ಮನಸ್ಸು ಇತ್ಯಾದಿಗಳನ್ನು ಚೇತನ ವಸ್ತುಗಳೆಂದು ಕೊಂಡಿರುತ್ತಾನೋ ಅಷ್ಟರ ತನಕ ಅವನು ತನ್ನ ಮನಸ್ಸನ್ನು ನಿಗ್ರಹಮಾಡುವುದಕ್ಕೆ ಸಮರ್ಥನಾಗುವುದಿಲ್ಲ. ಆದುದರಿಂದ, ಸಾಧಕನು "ನನ್ನ ಮನಸ್ಸು ಜಡವಸ್ತುವಾಗಿದೆ, ನನ್ನ ಪ್ರೇರಣೆ ಇಲ್ಲದೆ, ಅದು ಕೆಟ್ಟ ಅಥವಾ ಒಳ್ಳೆಯ ಕಾರ್ಯವನ್ನು ಮಾಡಲಿಕ್ಕೆ ಸಾಧ್ಯ ಇಲ್ಲ" ಎಂಬ ಮಾತನ್ನು ಪದೇ ಪದೇ ಸ್ಮರಿಸಿಕೊಳ್ಳುವ ಅಭ್ಯಾಸ ಮಾಡಬೇಕು. ಈ ರೀತಿಯ ಅಭ್ಯಾಸದಿಂದಲೂ, ಮನಸ್ಸನ್ನು ಜಯಿಸುವ ಕಾರ್ಯವು ಸುಲಭವಾಗುತ್ತದೆ.

ಈಗ, ಮನಸ್ಸು ಒಂದು ಜಡ ಪದಾರ್ಥ ಎಂಬುದಕ್ಕೆ ಪ್ರಮಾಣಗಳನ್ನು ನೋಡಿರಿ :

**"ಇದೇ ರೀತಿ ಮನಸ್ಸು ಕೂಡ ಒಂದು ಜಡವಸ್ತುವಾಗಿದೆ..........."**
**(ಸತ್ಯಾರ್ಥ ಪ್ರಕಾಶ-ನವಮ ಸಮುಲ್ಲಾಸ)**

**"ಪುರುಷೋಪಕರಣೇ ವಾ ಮನಸ್ಯಸಾತ್ಮನ್ಯಾತ್ಮಖ್ಯಾತಿರಿತಿ"**
**[ಯೋಗದರ್ಶನ 2-5 ಇಲ್ಲಿ ವ್ಯಾಸ ಭಾಷ್ಯ]**

ಅರ್ಥ : ಅಥವಾ ಜೀವದ ಉಪಕರಣವಾದ ಅಚೇತನ (ಜಡ)ವಸ್ತುವಾದ ಮನಸ್ಸನ್ನು ಆತ್ಮ ಎಂದು ತಿಳಿದುಕೊಳ್ಳುವುದು ಅವಿದ್ಯೆಯಾಗಿದೆ.

ಜಪ ಮಾಡುವಾಗ ಸಾಧಕನಿಗೆ ಇನ್ನೊಂದು ತೊಂದರೆಯು ಕಾದಿರುತ್ತದೆ. ಜಪದ ಅಭ್ಯಾಸಮಾಡುತ್ತಿರುವಾಗ ಅವನು ತನ್ನನ್ನು ತಾನೇ ಪರಮಾತ್ಮನ ಮುಂದೆ ಸಮರ್ಪಣೆ ಮಾಡುತ್ತಾನೆ. ಆದರೆ ತನ್ನೊಳಗಿನ ದೋಷದ ದೆಶೆಯಿಂದಾಗಿ ಅವನಿಗೆ ಪರಮಾತ್ಮನ ಭಯವೂ ಆಗುತ್ತದೆ. ಈ ರೀತಿ ಪರಮಾತ್ಮನ ಭಯವಾದಾಗ ಅವನು ದೇವರಿಂದ ದೂರ ಓಡಲಿಕ್ಕೆ ಪ್ರಯತ್ನಮಾಡುತ್ತಾನೆ, ಆದರೆ ಪರಮಾತ್ಮನು ಸರ್ವವ್ಯಾಪಕ, ಸರ್ವಜ್ಞ ಮತ್ತು ಸರ್ವಹಿತೈಷಿ ಎಂಬ ಮಾತು ಸಾಧಕನಿಗೆ ಗೊತ್ತಾದಾಗ ಅವನ ಈ ಸಂಕಟವು ದೂರವಾಗುತ್ತದೆ.

ಜಪ ಪ್ರಾರಂಭ ಮಾಡುವ ಮೊದಲು, ಪರಮಾತ್ಮ, ಜೀವಾತ್ಮ, ಪ್ರಕೃತಿ ಮತ್ತು ವಿಕೃತಿ = ಪ್ರಕೃತಿಯಿಂದ ಉತ್ಪನ್ನವಾದ ವಸ್ತುಗಳು - ಇವುಗಳ ವಾಸ್ತವಿಕ ಸ್ವರೂಪದ ಕುರಿತಾಗಿ ಗಂಭೀರ ಚಿಂತನೆ ಮಾಡುವುದು ಸಾಧಕನ ಒಂದು ಮುಖ್ಯ ಕರ್ತವ್ಯವಾಗಿದೆ. ಈ ಎಲ್ಲಾ ಪದಾರ್ಥಗಳನ್ನು ಅವನು ಮೊದಲು ಸಾಧ್ಯ, ಸಾಧಕ ಮತ್ತು ಸಾಧನ ಎಂದು ಮೂರು ವಿಧವಾಗಿ ವಿಂಗಡಿಸಬೇಕು. ಪರಮಾತ್ಮನು ಸಾಧ್ಯ = ಪ್ರಾಪ್ತಿ ಮಾಡಿಕೊಳ್ಳಬೇಕಾದ ಪದಾರ್ಥ ; ಜೀವಾತ್ಮನು ಸಾಧಕ = ಪ್ರಾಪ್ತಿಮಾಡಿಕೊಳ್ಳುವವನು ಮತ್ತು ಪ್ರಕೃತಿಯು ಸಾಧನ = ಯಾವ ಪದಾರ್ಥದಿಂದ ಈ ಸೃಷ್ಟಿಯ ರಚನೆಯಾಗಿದೆಯೋ ಅದು. ಸಾಧಕನು ಚಿಂತನೆ ಮಾಡುವಾಗ ತನ್ನನ್ನು ತಾನೇ ಪರಮಾತ್ಮನ ಮುಂದೆ ಇಟ್ಟು ಕೊಳ್ಳಲು ಪೂರ್ಣ ಪ್ರಯತ್ನ ಮಾಡಬೇಕು. ಹೀಗೆ ಪರಮಾತ್ಮನ ಮುಂದೆ ತನ್ನನ್ನು ತಾನೇ ಇಟ್ಟುಕೊಂಡಾಗ ಸಾಧಕನ ಮನಸ್ಸಿನಲ್ಲಿ ಒಬ್ಬ ಬುದ್ಧಿಶಾಲಿ, ಧಾರ್ಮಿಕ ಬಾಲಕನು ತನ್ನ ತಂದೆ ತಾಯಿಗಳ ಮುಂದೆ ಹೋದಾಗ ಯಾವ ಭಾವನೆಯನ್ನು ಇಟ್ಟುಕೊಂಡು ಹೋಗುತ್ತಾನೆಯೋ ಅದೇ ಭಾವನೆಯು ಮೂಡಿ ಬರಬೇಕು. ಸಮಸ್ತ ಪದಾರ್ಥಗಳ ಸ್ವಾಮಿಯು ಪರಮಾತ್ಮನೆಂದು ಅವನು ತಿಳಿದುಕೊಳ್ಳಬೇಕು. ಯೋಗಾಭ್ಯಾಸ ಮಾಡುವಾಗ ಸಾಧಕನು ಪರಮಾತ್ಮನ ಸಾಕ್ಷಾತ್ಕಾರವನ್ನು ಬಿಟ್ಟು ಬೇರೆ ಯಾವುದೇ ವಸ್ತುವಿಗೂ ಕೂಡ ಇಷ್ಟಪಡಬಾರದು.

ಈ ರೀತಿ ವಿಧಿಪೂರ್ವಕವಾಗಿ ಜಪಮಾಡಿದರೆ ಮನುಷ್ಯನು ಕೃತಕೃತ್ಯನಾಗುತ್ತಾನೆ. ವಿಧಿಪೂರ್ವಕ ಜಪಮಾಡದೆ ವಿಧಿಗೆ ವಿರುದ್ಧವಾಗಿ ನಡೆದರೆ, ಅವನ ಜೀವನವು ವಿಫಲವಾಗುತ್ತದೆ, ಆದುದರಿಂದ ವಿಧಿನಿಯಮಗಳಿಗನುಸಾರವಾಗಿಯೇ ಜನರೆಲ್ಲಾ ಪರಮಾತ್ಮನ ಜಪವನ್ನು ಮಾಡಬೇಕು. ಯಾವ ವ್ಯಕ್ತಿಯು ಪರಮಾತ್ಮನ ಜಪವನ್ನು ಮಾಡುವುದಿಲ್ಲವೋ, ಆ ವ್ಯಕ್ತಿಯು ಬಹುದೊಡ್ಡ ದೋಷಿಯಾಗಿದ್ದಾನೆ. ಜಪ ಮಾಡದೆ ಇದ್ದರೆ, ಸಮಸ್ತ ದುಃಖಗಳಿಂದ ನಿವೃತ್ತಿ ಮತ್ತು ಪೂರ್ಣಾನಂದದ ಪ್ರಾಪ್ತಿಯು ಸಾಧ್ಯವಿಲ್ಲ.

## ಜಪದ ಫಲ

**ತತಃ ಪ್ರತ್ಯಕ್ಚೇತನಾದಿಗಮೋಽಪ್ಯಂತರಾಯಾಭಾವಶ್ಚ ॥**

[ಯೋಗದರ್ಶನ 1-29]

ಅರ್ಥಾತ್, ವಿಧಿಪೂರ್ವಕವಾಗಿ ಜಪಮಾಡಿದರೆ, ಪರಮಾತ್ಮನ ಸಾಕ್ಷಾತ್ಕಾರ ವಾಗುತ್ತದೆ. ಮತ್ತು ವ್ಯಾದಿ ಇತ್ಯಾದಿ ಒಂಬತ್ತು ಪ್ರಕಾರದ ಅಂತರಾಯ(ವಿಘ್ನ)ಗಳು ದೂರವಾಗುತ್ತವೆ. ಪರಮಾತ್ಮನ ಸಾಕ್ಷಾತ್ಕಾರವಾದಾಗ ಪೂರ್ಣಾನಂದದ ಪ್ರಾಪ್ತಿಯಾಗುತ್ತದೆ. ಮತ್ತು ಸರ್ವ ಕ್ಲೇಶಗಳ ನಿವೃತ್ತಿಯಾಗುತ್ತದೆ. ಸಮಾಧಿಯ ಭಂಗವಾದಾಗ ಪುನಃ ಕ್ಲೇಶಗಳ ವ್ಯಾಪಾರವು ಪ್ರಾರಂಭವಾಗುತ್ತದೆ.

## ಅಂತರಾಯಗಳ ಸ್ವರೂಪ

**ವ್ಯಾಧಿ ಸ್ತ್ಯಾನ ಸಂಶಯ ಪ್ರಮಾದಾಲಸ್ಯಾವಿರತಿ ಭ್ರಾಂತಿದರ್ಶನಾಲಬ್ಧ ಭೂಮಿಕತ್ವಾನವಸ್ಥಿತತ್ವಾನಿ ಚಿತ್ತ-ವಿಕ್ಷೇಪಾಸ್ತೇಽತರಾಯಾಃ ॥**

[ಯೋಗದರ್ಶನ 1-30]

ಯೋಗ ಮಾರ್ಗದಲ್ಲಿ ಬರುವ ಒಂಬತ್ತು ಪ್ರಕಾರದ ಅಂತರಾಯ (ವಿಘ್ನ)ಗಳು ಹೀಗಿವೆ : 1) ವ್ಯಾದಿ = ವಾತ, ಪಿತ್ತ, ಕಫ, ಧಾತು ಅನ್ನರಸ ಮತ್ತು ಇಂದ್ರಿಯಗಳ ವಿಷಮತೆ. 2) ಸ್ತ್ಯಾನ = ಯೋಗ ಸಾಧನೆಯಲ್ಲಿ ಅರುಚಿ. 3) ಸಂಶಯ = ಪರಮಾತ್ಮನು ಇರುವನೇ ಅಥವಾ ಇಲ್ಲವೇ ಎಂಬ ಸಂಶಯ(ದೇವರ ಅಸ್ತಿತ್ವದ ಬಗ್ಗೆ ಸಂದೇಹ) ; 4) ಪ್ರಮಾದ = ಸಮಾಧಿಯ ಸಾಧನೆಯಕಡೆಗೆ ದುರ್ಲಕ್ಷ್ಯ ;5) ಆಲಸ್ಯ = ಶರೀರ ಮತ್ತು ಮನಸ್ಸಿನಲ್ಲಿ ಒಂದು ರೀತಿಯ ಭಾರದ ಅನುಭವವಾಗಿ ಯೋಗಾಭ್ಯಾಸವನ್ನು ನಡುವೆ ಬಿಟ್ಟುಬಿಡುವುದು. 6) ಅವಿರತಿ = ವೈರಾಗ್ಯದ ಅಭಾವ ಮತ್ತು ವಿಷಯ ಭೋಗದಲ್ಲಿ ಆಸಕ್ತಿ ; 7) ಭ್ರಾಂತಿದರ್ಶನ = ಜಡಪದಾರ್ಥಗಳನ್ನು

ಚೇತನವೆಂದೂ, ಚೇತನ ಪದಾರ್ಥಗಳನ್ನು ಜಡವೆಂದೂ ಭಾವಿಸುವುದು ; 8) ಅಲಬ್ಧಭೂಮಿಕತ್ವ = ಸಮಾಧಿಯು ಲಭಿಸದಿರುವುದು ; ಮತ್ತು 9) ಅನವಸ್ಥಿತತ್ವ= ಸಮಾಧಿಯು ಲಭಿಸಿದರೂ ಕೂಡ ಅದು ಸ್ಥಿರವಾಗಿ ನಿಲ್ಲದಿರುವುದು. ಇವು ಯೋಗಮಾರ್ಗದಲ್ಲಿ ಬಾಧಕಗಳಾಗಿವೆ. ವಿಧಿಪೂರ್ವಕವಾಗಿ ಈಶ್ವರ ಪ್ರಣಿಧಾನವನ್ನು ಮಾಡಿದರೆ, ಈ ಬಾಧಕಗಳು ದೂರವಾಗುತ್ತವೆ. ಮನಸ್ಸು ಶಾಂತ ಮತ್ತು ಸ್ಥಿರವಾಗುತ್ತದೆ.

## ಉಪವಿಘ್ನಗಳ ಸ್ವರೂಪ

**ದುಃಖದೌರ್ಮನಸ್ಯಾಂಗಮೇಜಯತ್ವಶ್ವಾಸ ಪ್ರಶ್ವಾಸಾವಿಕ್ಷೇಪಸಹಭುವಃ ॥**

[ಯೋಗದರ್ಶನ1-31]

ಪ್ರಾಣಿಗಳ ಪೀಡೆಗೆ ಹೇತುವೂ, ನಿವಾರಣಯೋಗ್ಯವೂ ಆಗಿರುವುದೇ ದುಃಖವೆನಿಸಿಕೊಂಡಿದೆ. ಈ ದುಃಖವು ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕ ಎಂದು ಮೂರು ವಿಧವಾಗಿದೆ. ಇಚ್ಛೆಯು ಪೂರೈಸದೆ ಹೋದಾಗ ಮನಸ್ಸಿನೊಳಗೆ ಉತ್ಪನ್ನವಾಗುವ ಕ್ಷೋಭೆ ಅಥವಾ ಅಪ್ರಸನ್ನತೆಗೆ ದೌರ್ಮನಸ್ಯ ಎಂದು ಹೇಳುತ್ತಾರೆ ದೇಹದ ಅಂಗಗಳನ್ನು ನಡುಗಿಸುವುದನ್ನು ಅಂಗಮೇಜಯತ್ವ ಎನ್ನುತ್ತಾರೆ. ಶ್ವಾಸ - ಪ್ರಶ್ವಾಸಗಳು ಇಚ್ಛೆಗೆ ವಿರುದ್ಧವಾಗಿ ನಡೆಯುವುದು, ಎಂದರೆ ಅವುಗಳ ಮೇಲೆ ನಿಯಂತ್ರಣ ಇಲ್ಲದಿರುವುದು, ಈ ಉಪವಿಘ್ನಗಳು, ವಿಕ್ಷೇಪಗಳು ಇರುವ ತನಕ ತಲೆದೋರುತ್ತವೆ, ಮತ್ತು ವಿಕ್ಷೇಪಗಳು ಇಲ್ಲದಾಗ ಈ ಉಪವಿಘ್ನಗಳು ಕೂಡ ಇರುವುದಿಲ್ಲ.

## ಯೋಗಮಾರ್ಗದಲ್ಲಿ ಬರುವ ವಿಘ್ನಗಳನ್ನು ದೂರಮಾಡುವ ಉಪಾಯ

**ತತ್‌ಪ್ರತಿಷೇಧಾರ್ಥಮೇಕತತ್ತ್ವಾಭ್ಯಾಸಃ ॥** [ಯೋಗದರ್ಶನ 1-32]

ಅರ್ಥಾತ್, ಯೋಗ ಮಾರ್ಗದಲ್ಲಿ ಬರುವ ವಿಘ್ನೋಪವಿಘ್ನಗಳನ್ನು ದೂರಮಾಡಬೇಕಾದರೆ, ಏಕ ತತ್ತ್ವ, ಎಂದರೆ, ಅತ್ಯಂತ ಶುದ್ಧಸ್ವರೂಪನಾದ ಪರಮಾತ್ಮನ ಉಪಾಸನೆಯನ್ನು ಪದೇ ಪದೇ ಮಾಡುತ್ತಿರಬೇಕು. ಈ ವಿಘ್ನಗಳನ್ನು ದೂರಮಾಡುವುದಕ್ಕೆ ಬೇರೆ ಉಪಾಯವೇ ಇಲ್ಲ.

ಈ ಸೂತ್ರದಲ್ಲಿ ಬರುವ 'ಏಕತತ್ತ್ವ' ಶಬ್ದಕ್ಕೆ ಕೆಲವು ಟೀಕಾಕಾರರು 'ಒಂದು ಜಡತತ್ತ್ವ' ಎಂದು ಅರ್ಥಮಾಡಿಕೊಂಡಿದ್ದಾರೆ. ಮಹರ್ಷಿ ದಯಾನಂದರು ಇದಕ್ಕೆ ಪರಮಾತ್ಮ ಎಂದು ಅರ್ಥ ಗ್ರಹಣ ಮಾಡಿದ್ದಾರೆ. ನಿಜವಾಗಿ ನೋಡಿದರೆ, ಇದೇ

ಸರಿಯಾದ ಅರ್ಥವಾಗಿದೆ. ಯಾಕೆಂದರೆ, ಈ ವಿಘ್ನಗಳನ್ನು ದೂರಮಾಡುವ ಸಾಮರ್ಥ್ಯ ಕೇವಲ ಪರಮಾತ್ಮನಲ್ಲಿ ಮಾತ್ರ ಇದೆ. ಅನ್ಯ ಯಾವುದೇ ಜಡತತ್ತ್ವದಲ್ಲಿ ಈ ಸಾಮರ್ಥ್ಯವು ಇಲ್ಲ. 'ಏಕತತ್ತ್ವ' ಶಬ್ದಕ್ಕೆ 'ಪರಮಾತ್ಮ' ಎಂದು ಅರ್ಥೈಸುವುದೇ ಸರಿ ಎನ್ನುವುದಕ್ಕೆ ಇನ್ನೊಂದು ಕಾಣವೂ ಇದೆ : ಇಲ್ಲಿ ಈಶ್ವರ-ಪ್ರಣಿಧಾನದ ಪ್ರಕರಣವು ನಡೆಯುತ್ತಿದೆ. ಈ ಸೂತ್ರದೊಂದಿಗೆ ಈ ಪ್ರಕರಣದ ಉಪಸಂಹಾರವಾಗುತ್ತದೆ.

30ನೇ ಸೂತ್ರದಲ್ಲಿ ಜಪದ ಮುಖಾಂತರ ಪಗಮಾತ್ಮನ ಸಾಕ್ಷಾತ್ಕಾರವನ್ನು ತಿಳಿಸುವುದು ಮುಖ್ಯವಾಗಿತ್ತು. ಈಗ ಈ ಸೂತ್ರದಲ್ಲಿ ಪರಮಾತ್ಮನ ಸಾಕ್ಷಾತ್ಕಾರದ ಮಾರ್ಗದಲ್ಲಿ ಬರುವ ವಿಘ್ನಗಳನ್ನು ಪರಮಾತ್ಮನ ಉಪಾಸನೆಯ ಮೂಲಕ ದೂರ ಮಾಡಬೇಕೆಂದು ಹೇಳುವುದೇ ಮುಖ್ಯವಾಗಿದೆ. ಆದುದರಿಂದ ಏಕತತ್ತ್ವದ ಅರ್ಥ ಪರಮಾತ್ಮ ಎಂದೇ ಆಗಬೇಕು, ಯಾವುದೇ ಒಂದು ಜಡತತ್ತ್ವವೆಂದಲ್ಲ.

## ಯೋಗಾಭ್ಯಾಸೀ ವ್ಯಕ್ತಿಯ ವ್ಯವಹಾರ

**ಮೈತ್ರೀ ಕರುಣಾ ಮುದಿತೋಪೇಕ್ಷಾಣಾಂ ಸುಖದುಃಖ**
**ಪುಣ್ಯಾಪುಣ್ಯವಿಷಯಾಣಾಂ ಭಾವನಾತಶ್ಚಿತ್ತಪ್ರಸಾದನಮ್ ॥**

[ಯೋಗದರ್ಶನ 1-33]

[ಸಾಧಕನು ಸದಾ ಪ್ರಸನ್ನಚಿತ್ತನಾಗಿರುವುದು ಬಹಳ ಅಗತ್ಯವಾಗಿದೆ. ಯಾವ ರೀತಿಯಲ್ಲಿ ನಿರ್ಮಲ ಶಾಂತ ಜಲಾಶಯದಲ್ಲಿ ಹುಣ್ಣಿಮೆಯ ಚಂದ್ರನ ಪ್ರತಿಬಿಂಬವು ಸ್ಪಷ್ಟವಾಗಿ ಕಣ್ಣಿಗೆ ಗೋಚರಿಸುತ್ತದೆಯೋ, ಅದೇ ರೀತಿಯಲ್ಲಿ ಪ್ರಸನ್ನ ಚಿತ್ತನಾದ ಯೋಗಿಯ ಹೃದಯದಲ್ಲಿ ಪರಮಾತ್ಮನು ಕಾಣುತ್ತಾನೆ— ಅನುವಾದಕರು]

ತನ್ನ ಚಿತ್ತವನ್ನು ಸದಾ ಪ್ರಸನ್ನತೆಯಲ್ಲಿಡಬೇಕಾದರೆ, ಯೋಗಿಯು ಪ್ರಪಂಚದಲ್ಲಿ ಜನರೊಡನೆ ವ್ಯವಹಾರ ಮಾಡುವಾಗ ಈ ರೀತಿ ನಡೆದುಕೊಂಡು ಹೋಗಬೇಕು : ಯಾರು ಸುಖ-ಸಂತೋಷದಿಂದ ಇದ್ದಾರೆಯೋ ಅವರೊಡನೆ ಮಿತ್ರತ್ವದ ಭಾವನೆಯನ್ನೂ, ದೀನ-ದುಃಖಿತರನ್ನು ಕಂಡು ಅವರ ಕಡೆಗೆ ಕರುಣೆ (ದಯೆ)ಯನ್ನೂ, ಪುಣ್ಯಾತ್ಮರನ್ನು ಕಂಡು ಹರ್ಷವನ್ನೂ ಮತ್ತು ಅಪುಣ್ಯಾತ್ಮರನ್ನು ಎಂದರೆ ದುರಾಚಾರಿಗಳು, ಪಾಪಿಗಳು ಇವರನ್ನು ಕಂಡು ಉಪೇಕ್ಷಾ ಭಾವನೆಯನ್ನೂ ತಾಳಬೇಕು. ಎಂದರೆ ಅವರೊಡನೆ ಮಿತ್ರತೆಯನ್ನು ಬೆಳೆಸಬಾರದು. ಅವರೊಡನೆ ದ್ವೇಷವನ್ನೂ ಕಟ್ಟಿಕೊಳ್ಳಬಾರದು. [ಕೆಲವು ಜನರು ತಮ್ಮ ಲೋಕ ಪ್ರಿಯತೆಯನ್ನು ತೋರಿಸಿಕೊಳ್ಳುವುದಕ್ಕಾಗಿ ಸಜ್ಜನರೊಡನೆ ಮತ್ತು ದುರ್ಜನರೊಡನೆಯೂ ಸಮಾನ

ರೂಪದಲ್ಲಿ ಮಿತ್ರತೆಯನ್ನು ಇಟ್ಟುಕೊಳ್ಳುವುದುಂಟು. ಇದು ಪಾಖಂಡಿಗಳ ಲಕ್ಷಣ, ಎಂದು ಮಹರ್ಷಿ ದಯಾನಂದರು ಸತ್ಯಾರ್ಥ ಪ್ರಕಾಶದಲ್ಲಿ ಬರೆದಿದ್ದಾರೆ— ಅನುವಾದಕರು] ಈ ರೀತಿಯ ವ್ಯವಹಾರದಿಂದ ಚಿತ್ತವು ಪ್ರಸನ್ನವಾಗಿರುತ್ತದೆ ಮತ್ತು ಚಿತ್ತವು ಪ್ರಸನ್ನವಾಗಿರುವುದರಿಂದ ಏಕಾಗ್ರತೆಯು ಸುಲಭವಾಗುತ್ತದೆ.

ಈ ಸೂತ್ರದಲ್ಲಿ, ಸುಖಿ ಸಂಪನ್ನರೊಂದಿಗೆ, ಮಿತ್ರತೆಯನ್ನು ಇಟ್ಟುಕೊಳ್ಳಬೇಕೆಂದು ಹೇಳಿದ್ದಾರೆ. ಇದು ಯಾಕೆಂದರೆ, ಕೆಲವರಿಗೆ ತಮ್ಮಿಂದ ಅಧಿಕ ಸುಖಿ ಸಂಪನ್ನರನ್ನು ಕಂಡರೆ, ಸಂತೋಷವಾಗುವುದಿಲ್ಲ. ಅವರ ಮನಸ್ಸಿನಲ್ಲಿ ಈರ್ಷ್ಯೆ ಅಥವಾ ಅಸೂಯೆಯು ಹುಟ್ಟುತ್ತದೆ. ಇದರಿಂದ ಅವರ ಚಿತ್ತವು ಅಪ್ರಸನ್ನವಾಗುತ್ತದೆ. ಅಪ್ರಸನ್ನ ಚಿತ್ತದಲ್ಲಿ ಚಂಚಲತೆಯು ಕಾಣುತ್ತದೆ. [ಇದು ಯೋಗ ಸಾಧನೆಗೆ ಅಡ್ಡಿಯಾಗುತ್ತದೆ.] ಆದುದರಿಂದ, ಸಾಧಕರು ಸುಖಿ-ಸಂಪನ್ನ ವ್ಯಕ್ತಿಗಳನ್ನು ಕಂಡಾಗ ಅವರ ಕಡೆಗೆ ತಮ್ಮ ಮನಸ್ಸಿನಲ್ಲಿ ಮಿತ್ರತ್ವದ ಭಾವನೆಯನ್ನು ಬೆಳೆಸುವ ಅಭ್ಯಾಸವನ್ನು ಮಾಡತಕ್ಕದ್ದು. ಕೆಲವರಿಗೆ ಮಹಾತ್ಮರನ್ನು ಕಂಡರೂ ಕೂಡ-ಈರ್ಷ್ಯೆಯಾಗುತ್ತದೆ. ಇದರಿಂದ ಪಾರಾಗುವುದಕ್ಕೆ, ಹರ್ಷವನ್ನು ತಾಳಬೇಕು. ದುಃಖಿತರನ್ನು ಕಂಡಾಗ ಅವರ ಮೇಲೆ ದಯೆತೋರಿಸಿ, ಕಾರ್ಯರೂಪದಲ್ಲಿ ಅವರ ದುಃಖವನ್ನು ದೂರಮಾಡಲಿಕ್ಕೆ ಪ್ರಯತ್ನ ಮಾಡಬೇಕು. ಇದು ಪರೋಪಕಾರದ ಕೆಲಸ. ಈ ರೀತಿ ಪರೋಪಕಾರದ ಕಾರ್ಯದಲ್ಲಿ ತೊಡಗಿದವರ ಮನಸ್ಸಿನಲ್ಲಿ ಈರ್ಷ್ಯಾದ್ವೇಷಾದಿ ದುರ್ಭಾವನೆಗಳು ಹುಟ್ಟುವುದಿಲ್ಲ. ಇನ್ನು ಅಪುಣ್ಯಾತ್ಮರು ಎಂದರೆ ದುಷ್ಟರು, ದುರಾಚಾರಿಗಳು, ಪಾಪಿಗಳು— ಇವರೊಂದಿಗೆ ಮಿತ್ರತೆಯನ್ನು ಬೆಳೆಸಿದರೂ ಹಾನಿ, ದ್ವೇಷಕಟ್ಟಿಕೊಂಡರೂ ಹಾನಿ. ಆದುದರಿಂದ ಇಂತಹ ಜನರ ಕಡೆಗೆ ಉಪೇಕ್ಷಾ ಭಾವನೆಯನ್ನು ತಾಳುವುದೇ ಉತ್ತಮವಾಗಿದೆ. ಈ ರೀತಿಯಲ್ಲಿ ಸೂತ್ರಕಾರರು ಹೇಳಿದ ಹಾಗೆ ಯೋಗಾಭ್ಯಾಸಿಯ ನಿತ್ಯ ವ್ಯವಹಾರವು ಇರಬೇಕು. ಅನ್ಯಥಾ ಯೋಗಮಾರ್ಗದಲ್ಲಿ ಸಫಲತೆಯು ಸಿಗುವುದಿಲ್ಲ.

## ಪ್ರಾಣಾಯಾಮದಿಂದ ಮನಸ್ಸಿನ ಏಕಾಗ್ರತೆ

**ಪ್ರಚ್ಛರ್ದನ ವಿಧಾರಣಾಭ್ಯಾಂ ವಾ ಪ್ರಾಣಸ್ಯ ॥** [ಯೋಗದರ್ಶನ 1-34]
ಈ ಸೂತ್ರದ ಅರ್ಥವನ್ನು ಮಹರ್ಷಿ ದಯಾನಂದರು, ಋಗ್ವೇದಾದಿ ಭಾಷ್ಯಭೂಮಿಕೆಯ ಉಪಾಸನಾ ವಿಷಯದ ಕೆಳಗೆ, ಈ ರೀತಿ ವಿವರಿಸಿದ್ದಾರೆ—

"ಯಾವ ರೀತಿಯಲ್ಲಿ (ಕೆಲವೊಮ್ಮೆ) ಭೋಜನದ ನಂತರ, ಏನೋ ಕಾರಣದಿಂದ, ವಾಂತಿಯಾಗುತ್ತದೆಯೋ, ಅದೇ ರೀತಿಯಲ್ಲಿ, ಒಳಗಿನ ವಾಯುವನ್ನು

ಹೊರಗೆ ತಳ್ಳಿಬಿಟ್ಟು, ಎಷ್ಟು ಸಾಧ್ಯವಿದೆಯೋ, ಅಷ್ಟು ಹೊತ್ತು, ಅನಾಯಾಸವಾಗಿ, ಅದನ್ನು ಹೊರಗೆ ತಡೆದಿಡಬೇಕು. ಬಳಿಕ ಸಾವಾಕಾಶವಾಗಿ ಅದನ್ನು ಒಳಗೆ ತಂದು ಪುನಃ ಅದೇ ರೀತಿ ಮಾಡಬೇಕು. ಈ ರೀತಿ ಪದೇ ಪದೇ ಅಭ್ಯಾಸ ಮಾಡಿದರೆ, ಪ್ರಾಣವು ಉಪಾಸಕನ ವಶಕ್ಕೆ ಬರುತ್ತದೆ. ಹೀಗೆ ಪ್ರಾಣವು ಸ್ಥಿರವಾಗಿ, ಇದರಿಂದ ಮನಸ್ಸು ಸ್ಥಿರವಾಗುತ್ತದೆ. ಮನಸ್ಸು ಸ್ಥಿರವಾದಾಗ ಆತ್ಮವೂ ಸ್ಥಿರವಾಗುತ್ತದೆ. ಇವು ಮೂರು ಕೂಢ ಸ್ಥಿರವಾದಾಗ, ತನ್ನ ಆತ್ಮದೊಳಗೆ ವ್ಯಾಪಕವಾಗಿರುವ ಆನಂದ ಸ್ವರೂಪನೂ, ಅಂತರ್ಯಾಮಿಯೂ ಆದ ಪರಮೇಶ್ವರನ ಸ್ವರೂಪದಲ್ಲಿ ಮಗ್ನನಾಗಬೇಕು. ಓರ್ವ ವ್ಯಕ್ತಿಯು ಪರ್ದೇ ಪಗೇ ನೀರಿನಲ್ಲಿ(ಜಲಾಶಯದಲ್ಲಿ) ಮುಳುಗಿ ಮೇಲೆ ಬರುವಂತೆ, ತನ್ನ ಆತ್ಮವನ್ನು (ಉಪಾಸಕನು) ಪರಮಾತ್ಮನ ಧ್ಯಾನದಲ್ಲಿ ಪದೇ-ಪದೇ ಮಗ್ನಮಾಡಬೇಕು".

ಈ ಸೂತ್ರದ ಅಭಿಪ್ರಾಯವೇನೆಂದರೆ, ಯೋಗದರ್ಶನದಲ್ಲಿ ಹೇಳಿರುವಂತೆ, ನಾಲ್ಕು ಪ್ರಕಾರದ ಪ್ರಾಣಾಯಾಮ ವಿಧಿ ಪ್ರಕಾರ ಮಾಡಿದರೆ, ಚಿತ್ತದ ಏಕಾಗ್ರತೆಯು ಸಿದ್ಧಿಸುತ್ತದೆ. ಪ್ರಾಣಾಯಾಮದ ಸ್ವರೂಪ, ಅದನ್ನು ಅಭ್ಯಾಸ ಮಾಡುವ ವಿಧಿ ಮತ್ತು ಅದರಿಂದ ಒದಗುವ ಲಾಭ-ಇವುಗಳ ಕುರಿತಾಗಿ ಮುಂದೆ ವಿವರಿಸಲಾಗುವುದು.

ಯೋಗದರ್ಶನದ ಸಮಾಧಿ ಪಾದದಲ್ಲಿ, ಯೋಗ ಶಬ್ದದ ಪರಿಭಾಷೆ,ಇದರ ಭೇದಗಳು, ಯೋಗದಿಂದ ಸಿಗುವ ಲಾಭ, ವೃತ್ತಿಗಳ ಸ್ವರೂಪ, ಅವುಗಳನ್ನು ತಡೆಯುವ ಉಪಾಯ, ಯೋಗ ಮಾರ್ಗದಲ್ಲಿ ಬರುವ ವಿಘ್ನಗಳು ಮತ್ತು ಅವುಗಳನ್ನು ದೂರಮಾಡುವ ಉಪಾಯ ಜಪ ಮಾಡುವ ವಿಧಿ, ಅದರ ಫಲ, ಯೋಗಾಭ್ಯಾಸಿಯ ವ್ಯವಹಾರ, ಇತ್ಯಾದಿ ವಿಷಯಗಳನ್ನು ತಿಳಿಸಲು ಪ್ರಯತ್ನಿಸಲಾಗಿದೆ. ಬುದ್ಧಿಶಾಲಿಗಳಾದ ಯೋಗ ಜಿಜ್ಞಾಸುಗಳು ಇದರಿಂದ ಲಾಭಾನ್ವಿತರಾಗಲೆಂದು ನನ್ನ ಬಯಕೆಯಾಗಿದೆ.

## ಎರಡು

# ಸಾಧನ ಪಾದ

ಈಗ ಯೋಗದರ್ಶನದ 'ಸಾಧನ ಪಾದ'— ಇದರ ಕುರಿತಾಗಿ ವಿಚಾರ ಮಾಡೋಣ. ನಿಜವಾಗಿ ನೋಡಿದರೆ ಈ ಪಾದದಲ್ಲಿ ಅನೇಕ ವಿಷಯಗಳ ವರ್ಣನೆ ಇದೆ. ಆದರೂ ಕೂಡ, ಯೋಗ-ಸಾಧನೆಗಳ ಕುರಿತಾಗಿ ಇಲ್ಲಿ ವಿಶೇಷ ಚರ್ಚೆಇದೆ. ಆದುದರಿಂದೆ ಈ ಪಾದ(ಅಧ್ಯಾಯ)ಕ್ಕೆ ಸಾಧನ ಪಾದ ಎಂಬ ಶೀರ್ಷಕವು ಉಪಯುಕ್ತವಾಗಿದೆ, ಎಂದು ಹೇಳಬಹುದು.

ಲೋಕದಲ್ಲಿ ಪ್ರತಿಯೊಂದು ಪ್ರಾಣಿಯು ಕೂಡ, ಸಮಸ್ತ ದುಃಖಗಳಿಂದ ಬಿಡುಗಡೆ ಹೊಂದಿ, ಪೂರ್ಣ ಮತ್ತು ಶಾಶ್ವತ ಸುಖವು ಸಿಗಬೇಕೆಂದು ಬಯಸುತ್ತದೆ. ಆದರೆ ಸುಖ ಎಂದರೇನು, ಸುಖದ ಸಾಧನ ಏನು, ದುಃಖ ಎಂದರೇನು, ದುಃಖದ ಕಾರಣ ಏನು : ಈ ವಿಷಯಗಳ ಜ್ಞಾನವು ಮನುಷ್ಯನಿಗೆ ಲಭಿಸುವ ತನಕ ಅವನು ದುಃಖಗಳಿಂದ ಬಿಡುಗಡೆಹೊಂದಿ, ನಿಜವಾದ ಸುಖವನ್ನು ಹೊಂದಬೇಕಾದರೆ, ನಾಲ್ಕು ವಿಷಯಗಳನ್ನು ತಿಳಿದುಕೊಳ್ಳುವುದು ಬಹಳ ಅಗತ್ಯ ಎಂದು ಮಹರ್ಷಿ ಪತಂಜಲಿ ಹೇಳಿದ್ದಾರೆ. ಆ ನಾಲ್ಕು ವಿಷಯಗಳು — ೧) ಹೇಯ ೨) ಹೇಯ ಹೇತು ೩) ಹಾನ ಮತ್ತು ೪) ಹಾನೋಪಾಯ, ಎಂದರೆ, ದುಃಖ ಮತ್ತು ದುಃಖದ ಕಾರಣ, ಸುಖ ಮತ್ತು ಸುಖದ ಕಾರಣ. 'ದುಃಖ'ದ ಪರಿಭಾಷೆ :- ಯೇನಾಭಿಹತಾಃ ಪ್ರಾಣಿನಸ್ತದುಪಘಾತಾಯ ಪ್ರಯತಂತೇ ತದ್ದುಃಖಮ್ ।(ಯೋಗದರ್ಶನ 1-31ರಲ್ಲಿ ವ್ಯಾಸಭಾಷ್ಯ)

ಎಂದರೆ, ಕಷ್ಟಕ್ಕೆ ಈಡಾದ ಪ್ರಾಣಿಗಳು, ತಮ್ಮ ಕಷ್ಟಕ್ಕೆ ಯಾವುದು ಕಾರಣವಾಗಿದೆಯೋ ಅದನ್ನು ದೂರಮಾಡಲು ಪ್ರಯತ್ನಿಸುತ್ತಾರೆ. ಈ ರೀತಿ ಪ್ರಾಣಿಗಳ ಕಷ್ಟಕ್ಕೆ ಕಾರಣೀಭೂತವಾಗಿರುವುದನ್ನೇ ದುಃಖವೆನ್ನುತ್ತಾರೆ.

ನ್ಯಾಯದರ್ಶನ (1-1-21)ದಲ್ಲಿ "ಬಾಧನಾ ಲಕ್ಷಣಂ ದುಃಖಮ್" ಎಂದು ಹೇಳಿದ್ದಾರೆ. ಎಂದರೆ, ಬಾಧೆ, ಬಂಧನ, ಕಷ್ಟ, ಪೀಡೆ ಅಥವಾ ಕ್ಲೇಶ, ಇದು ದುಃಖದ ಲಕ್ಷಣವಾಗಿದೆ. ಮಹರ್ಷಿ ಪತಂಜಲಿ, ಅವರು ಪ್ರಪಂಚದಲ್ಲಿ ಐದು ಪ್ರಕಾರದ

ದುಃಖಗಳಿವೆ ಎಂದು ಹೇಳಿದ್ದಾರೆ."**ಅವಿದ್ಯಾಽಸ್ಮಿತಾರಾಗದ್ವೇಷಾಽಭಿನಿವೇಶಾಃ ಪಂಚಕ್ಲೇಶಾಃ ॥** [ಯೋಗದರ್ಶನ 2] ಎಂದರೆ ಅವಿದ್ಯೆ, ಅಸ್ಮಿತಾ, ರಾಗ, ದ್ವೇಷ ಮತ್ತು ಅಭಿನಿವೇಶ, ಇವು ಐದು ಪ್ರಕಾರದ ದುಃಖಗಳಾಗಿವೆ. ಅನಿತ್ಯ ವಸ್ತುವನ್ನು ನಿತ್ಯವೆಂದು ತಿಳಿಯುವುದು ನಿತ್ಯವಾದುದನ್ನು ಅನಿತ್ಯ ಎಂದುಕೊಳ್ಳುವುದು, ಇದೇ ರೀತಿಯಲ್ಲಿ ಅಶುದ್ಧವಸ್ತುವನ್ನು ಶುದ್ಧವೆಂದೂ ಶುದ್ಧವಸ್ತುವನ್ನು ಅಶುದ್ಧವೆಂದೂ, ದುಃಖವನ್ನು ಸುಖವೆಂದೂ, ಸುಖವನ್ನು ದುಃಖವೆಂದೂ, ಜಡವನ್ನು ಚೇತನವೆಂದೂ, ಚೇತನವನ್ನು ಜಡವೆಂದೂ ನಂಬುವುದು ಅವಿದ್ಯೆಯ ಲಕ್ಷಣವಾಗಿದೆ. ಬುದ್ಧಿ, ಇಂದ್ರಿಯಗಳು, ಶರೀರ-ಇವುಗಳು ಜೀವಾತ್ಮನಿಂದ ಭಿನ್ನವಾಗಿವೆ ಎಂಬ ಅರಿವು ಇಲ್ಲದಿರುವುದು ಅಸ್ಮಿತಾ ಎನಿಸಿಕೊಂಡಿದೆ. ಪೂರ್ವಾನುಭವದ ಸುಖ ಮತ್ತು ಅಸುಖದ ಸಾಧನಗಳನ್ನು ಪದೆ ಪದೇ ಪ್ರಾಪ್ತಿ ಮಾಡಿಕೊಳ್ಳಬೇಕೆಂಬ ಇಚ್ಛೆಯನ್ನು ರಾಗ ಎನ್ನುತ್ತಾರೆ. ಪೂರ್ವಾನುಭವದ ದುಃಖ ಮತ್ತು ದುಃಖದ ಕಾರಣಗಳ ಕಡೆಗೆ ತಿರಸ್ಕಾರದ ಭಾವನೆಗೆ ದ್ವೇಷ ಮತ್ತು ಮರಣದ ಭಯಕ್ಕೆ ಅಭಿನಿವೇಶ ಎಂದು ಹೆಸರು.

ಮಹರ್ಷಿ ಪತಂಜಲಿ ಇವರು ಈ ಐದು ಪ್ರಕಾರದ ದುಃಖಗಳಿಗೆ ಹೇಯ (ತ್ಯಾಜ್ಯ) ಎಂದು ಹೇಳಿದ್ದಾರೆ.

**ಹೇಯಂ ದುಃಖಮನಾಗತಮ್ ॥** [ಯೋಗದರ್ಶನ 2-16]

ಅರ್ಥಾತ್, ಒದಗಿ ಬರಬಹುದಾದ ದುಃಖವು ಹೇಯವಾಗಿದೆ. ಇದನ್ನು ತಡೆಗಟ್ಟುವುದು ಉತ್ತಮ. ಅನುಭವಿಸಿದ ದುಃಖವನ್ನು ತಡೆಗಟ್ಟಲು ಸಾಧ್ಯವಿಲ್ಲ. ಸಧ್ಯಕ್ಕೆ ಅದನ್ನು ಅನುಭವಿಸಲಾಗುತ್ತಿರುವ ದುಃಖವು, ದೂರ ಮಾಡಲಿಕ್ಕೆ ಪ್ರಯತ್ನವು ನಡೆಯುತ್ತಿರುವಾಗಲೇ ಅದು ಅನುಭವಿಸಲ್ಪಟ್ಟಿರಲಾಗುತ್ತದೆ. ಆದುದರಿಂದ ಮನುಷ್ಯರು ತಮ್ಮ ಜೀವನದಲ್ಲಿ ಇನ್ನು ಮುಂದಿನ ಕ್ಷಣದಲ್ಲಿ ಬರಬಹುದಾದ ದುಃಖವನ್ನು ಮಾತ್ರ ದೂರ ಮಾಡಬಹುದಾಗಿದೆ. ಇಲ್ಲಿ ಭೂತ, ವರ್ತಮಾನ ಮತ್ತು ಭವಿಷ್ಯತ್ತನ್ನು ಕ್ಷಣದಿಂದಲೇ ಪರಿಗಣಿಸಬೇಕಾಗುತ್ತದೆ. ಇದರ ತಾತ್ಪರ್ಯ, ಸದ್ಯಕ್ಕೆ ಜ್ವರ ಬರುತ್ತದೆ, ಅದಕ್ಕೆ ಯೋಗ್ಯರೀತಿಯಲ್ಲಿ ಔಷದೋಪಚಾರಗಳನ್ನು ಮಾಡಬಾರದೆಂದಲ್ಲ. ಯಾವ ಕ್ಷಣದಲ್ಲಿ ಜ್ವರದ ನಿವಾರಣೆಗೆ ಯೋಗ್ಯ ಉಪಾಯವನ್ನು ಕೈಗೊಳ್ಳಲಾಗುತ್ತದೆಯೋ ಆ ಕ್ಷಣದ ತನಕ ದುಃಖವನ್ನು ಅನುಭವಿಸಿ ಆಯಿತು. ಮುಂದಿನ ಕ್ಷಣಕ್ಕೆ ಆ ದುಃಖದ ನಿವಾರಣೆ ಮಾಡುವ ಉದ್ದೇಶದಿಂದ, ಜ್ವರಕ್ಕೆ ಮದ್ದು ಮಾಡಬೇಕು.

## ದುಃಖಕ್ಕೆ ಕಾರಣ

**ದ್ರಷ್ಟೃ ದೃಶ್ಯಯೋಃ ಸಂಯೋಗೋ ಹೇಯ ಹೇತುಃ ॥**

[ಯೋಗದರ್ಶನ 2-17]

ಅರ್ಥಾತ್, ದ್ರಷ್ಟಾ (ನೋಡುತ್ತಿರುವ ಜೀವಾತ್ಮನು)ಮತ್ತು ಇಂದ್ರಿಯಗಳಿಗೆ ಗೋಚರವಾಗುತ್ತಿರುವ ದೃಶ್ಯ- ಇವುಗಳ ಸಂಯೋಗವೇ ದುಃಖಕ್ಕೆ ಕಾರಣವಾಗಿದೆ.

ಜೀವಾತ್ಮನಿಗೆ ದ್ರಷ್ಟಾ ಎನ್ನುತ್ತಾರೆ. ಪ್ರಕಾಶ, ಕ್ರಿಯೆ, ಸ್ಥಿತಿ ಸ್ವಭಾವವುಳ್ಳ ಪಂಚ ಮಹಾಭೂತಗಳು, ಇಂದ್ರಿಯಗಳು, ಯೋಗ ಮತ್ತು ಅಪವರ್ಗ = ಮೋಕ್ಷಸಾಧಕ ವಸ್ತುಗಳೆಲ್ಲಾ ದೃಶ್ಯವೆನಿಸಿಕೊಂಡಿವೆ. ಎಂದರೆ, ಸತ್ವ, ರಜ, ಮತ್ತು ತಮ ಎಂಬ ತ್ರಿಗುಣಾತ್ಮಕ ಪ್ರಕೃತಿಯಿಂದ ಉತ್ಪನ್ನವಾದ ಸರ್ವಪದಾರ್ಥಗಳೂ ದೃಶ್ಯವಾಗಿವೆ. ಜೀವಾತ್ಮ ಮತ್ತು ಈ ದೃಶ್ಯವಸ್ತುಗಳಿಗೆ ಸ್ವ-ಸ್ವಾಮಿ ಸಂಬಂಧವಿದೆ. ಇವುಗಳ ಪರಸ್ಪರ ಸಂಯೋಗದಿಂದ ದುಃಖವು ಉತ್ಪನ್ನವಾಗುತ್ತದೆ.

ಅಜ್ಞಾನದ ದೆಶೆಯಿಂದಾಗಿ, ಒಬ್ಬ ವ್ಯಕ್ತಿಯು, ತಾನು ಎಷ್ಟು ಹೆಚ್ಚು ವಸ್ತುಗಳನ್ನು ಸಂಗ್ರಹ ಮಾಡಿ ಅವುಗಳ ಮೇಲೆ ಸ್ವಾಮಿತ್ವವನ್ನು ಸ್ಥಾಪಿಸುವೆನೋ, ತನಗೆ ಅಷ್ಟು ಹೆಚ್ಚು ಸುಖವು ಲಭಿಸುವುದು ಎಂದು ಭಾವಿಸಿಕೊಳ್ಳುತ್ತಾನೆ. ಇದರ ಪರಿಣಾಮ, ನಿಜವಾಗಿ ನೋಡಿದರೆ, ತೀರಾ ಇದಕ್ಕೆ ವಿರುದ್ಧವಾಗಿ ಕಂಡುಬರುತ್ತದೆ. ಸಾಂಸಾರಿಕ ವಸ್ತುಗಳ ಒಡೆತನವು ಹೆಚ್ಚುತ್ತಾ ಹೋದಂತೆ, ವ್ಯಕ್ತಿಯ ದುಃಖವೂ ಹೆಚ್ಚುತ್ತಾ ಹೋಗುತ್ತದೆ. ನಿಜವಾದ ಜ್ಞಾನವು ಮನುಷ್ಯನಿಗೆ ಇಲ್ಲದ ಕಾರಣ, ಅವನು ಈ ಪ್ರಾಪಂಚಿಕ ವಸ್ತುಗಳನ್ನು ತನ್ನದಲ್ಲ ದೇವರದ್ದು, ಎಂದುಕೊಂಡರೆ, ತನ್ನ ಸರ್ವನಾಶವಾಗಬಹುದು ಎಂದು ಭಾವಿಸುತ್ತಾನೆ. ಇದು ನಿಜವಾಗಿಯೂ ಒಂದು ತಪ್ಪು ಭಾವನೆಯಾಗಿದೆ. ಯಾಕೆಂದರೆ, ಆಪ್ತ ವಿದ್ವಾಂಸರು ಸ್ವ-ಸ್ವಾಮಿ ಸಂಬಂಧವು ದುಃಖಕ್ಕೆ - ಕಾರಣವಾಗಿದೆ ಎಂದು ಹೇಳಿದ್ದಾರೆ. ಆದುದರಿಂದ, ಸಾಂಸಾರಿಕ ವಸ್ತುಗಳು ಎಲ್ಲಾ ತನ್ನದಲ್ಲ, ದೇವರದ್ದು ಎಂದುಕೊಂಡು ನಡೆಯುವುದರಿಂದ ಏನೂ ಹಾನಿ ಆಗುವ ಹಾಗಿಲ್ಲ. ನಿಜವಾಗಿಯೂ, ಪ್ರಪಂಚದಲ್ಲಿ ನಡೆಯುತ್ತಿರುವ ಅನೇಕ ಜಗಳಗಳಿಗೆ ಮತ್ತು ಜನರ ಪಕ್ಷಪಾತ ಪೂರ್ಣ ವ್ಯವಹಾರಕ್ಕೆ ಕಾರಣ. ಸ್ವ-ಸ್ವಾಮಿ ಸಂಬಂಧ(ಲೋಭ)ವಾಗಿದೆ. ಆದುದರಿಂದ, ಲೋಕದಲ್ಲಿ ಒಂದು ವೇಳೆ ಸ್ವ-ಸ್ವಾಮಿ ಸಂಬಂಧದಿಂದಾಗಿ ಆಗುವ ಹಾನಿಯ ಅರಿವು ಬಹಳ ಅಧಿಕ ಜನರಿಗೆ ಆಗಿಹೋದರೆ, ಮತ್ತೆ ಇಲ್ಲಿ ಲೌಕಿಕ ಹಾಗೂ ಆಧ್ಯಾತ್ಮಿಕ ಸುಖ-ಇವೆರಡೂ ವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ.

**ಪ್ರಶ್ನೆ** :– ಮೇಲೆ ಹೇಳಿದಂತೆ, ಎಲ್ಲಾ ವಸ್ತುಗಳು ಪರಮಾತ್ಮನದ್ದು, ತನ್ನದೇನಿಲ್ಲ, ಎಂದು ಎಲ್ಲರೂ ತಿಳಿದುಕೊಂಡರೆ, ಲೌಕಿಕ ವ್ಯವಹಾರವು ನಡೆಯುವುದು ಹೇಗೆ?

**ಉತ್ತರ**:– ಇಂತಹ ವಿಚಾರವನ್ನು ಇಟ್ಟುಕೊಂಡರೆ, ಯಾವ ಸಮಸ್ಯೆಯೂ ಉತ್ಪನ್ನವಾಗುವುದಿಲ್ಲ ಲೌಕಿಕ ವಸ್ತುಗಳು ಯಾರಿಗೆ ನ್ಯಾಯಪೂರ್ವಕವಾಗಿ ಲಭಿಸುತ್ತವೆಯೋ, ಅವರು ಆ ವಸ್ತುಗಳ ರಕ್ಷಣೆ, ವೃದ್ಧಿ ಮತ್ತು ಸ್ವಸುಖ ಹಾಗೂ ಪರೋಪಕಾರಕ್ಕಾಗಿ ಉಪಯೋಗಿಸಬೇಕು. ಮನುಷ್ಯರು ತಾವು ಯಾವುದೇ ಪ್ರಾಪಂಚಿಕ ವಸ್ತುಗಳ ಮೇಲೆ ತನ್ನದೇ ಅಧಿಕಾರ ಎಂದು ತಿಳಿದುಕೊಳ್ಳಬಾರದು. ಯಾಕೆಂದರೆ, ನಿಜವಾಗಿಯೂ ಪರಮಾತ್ಮನೇ ಎಲ್ಲಾ ವಸ್ತುಗಳ ಮೂಲ ಅಧಿಕಾರಿಯಾಗಿದ್ದಾನೆ. ತಮಗೆ ನ್ಯಾಯಪೂರ್ವಕವಾಗಿ ದೊರೆತ ವಸ್ತುಗಳ ಮೇಲೆ ಜನರಿಗೆ ಕೇವಲ ಯೋಗ್ಯವಾದ ರೀತಿಯಲ್ಲಿ ಅವುಗಳ ಉಪಯೋಗ ಮಾಡುವ ಅಧಿಕಾರ ಇದೆ. ಈ ರೀತಿಯ ವಿಚಾರವನ್ನು ಇಟ್ಟುಕೊಂಡು ಜನರು ವ್ಯವಹಾರ ಮಾಡಿದರೆ, ಯಾರಿಗೂ ಏನೂ ತೊಂದರೆ ಬರುವುದಿಲ್ಲ. ಆರ್ಯ ಸಮಾಜದ ಪ್ರಥಮ ನಿಯಮ : "ಎಲ್ಲಾ ಸತ್ಯವಿದ್ಯೆಗಳು ಮತ್ತು ಆ ವಿದ್ಯೆಗಳಿಂದ ತಿಳಿದುಕೊಳ್ಳಲಾಗುವ ಎಲ್ಲಾ ಪದಾರ್ಥಗಳು - ಇವುಗಳ ಆದಿ ಮೂಲವು ಪರಮಾತ್ಮನಾಗಿದ್ದಾನೆ" — ಇದರಿಂದಲೂ ಮೇಲೆ ಹೇಳಿದ ವಿಚಾರಕ್ಕೆ ಸಮರ್ಥನೆಯು ಸಿಗುತ್ತದೆ. ಸೃಷ್ಟಿಯ ಎಲ್ಲಾ ವಸ್ತುಗಳ ನಿಮಿತ್ತ ಕಾರಣನು ಪರಮಾತ್ಮನೇ ಆಗಿರುವುದರಿಂದ ಅವನೇ ಎಲ್ಲಾ ವಸ್ತುಗಳ ಒಡೆಯನೆಂದು ತಿಳಿದುಕೊಳ್ಳುವುದೇ ಜನರಿಗೆ ಯೋಗ್ಯವಾಗಿದೆ.

**ಸ್ವಸ್ವಾಮಿ-ಸಂಬಂಧಕ್ಕೆ ಕಾರಣ** :– ಜನರಲ್ಲಿ ಸ್ವ-ಸ್ವಾಮಿಭಾವ ಸಂಬಂಧ (ಲೋಭ ಅಥವಾ ವ್ಯಾಮೋಹ)ವು ಬೆಳೆಯುವುದಕ್ಕೆ ಕಾರಣ, ಅವರ ಅವಿದ್ಯೆ ಅಥವಾ ಅಜ್ಞಾನವಾಗಿದೆ.

**ತಸ್ಯ ಹೇತುರವಿದ್ಯಾ ॥** [ಯೋಗದರ್ಶನ 2-24]

ಎಂದರೆ, ಒಬ್ಬ ಮನುಷ್ಯನು ಅವಿದ್ಯಾಗ್ರಸ್ತನಾದಾಗಲೇ ಅವನು ಪ್ರಾಪಂಚಿಕ ವಸ್ತುಗಳೊಡನೆ ಸ್ವ-ಸ್ವಾಮಿ ಸಂಬಂಧವನ್ನು ಬೆಳೆಸಿಕೊಳ್ಳುತ್ತಾನೆ. ಕೆಲವೊಂದು ಬಾರಿ ಈ ಸ್ವ-ಸ್ವಾಮಿ ಸಂಬಂಧವು ಜನ್ಮ-ಜನ್ಮಾಂತರಗಳಿಂದ ಬೆಳೆದುಬಂದು, ಈ ಪೂರ್ವಜನ್ಮದ ಸಂಸ್ಕಾರವು ವಾಸನಾರೂಪದಲ್ಲಿ ಅತ್ಯಂತ ದೃಢವಾಗಿ ಬಿಡುತ್ತದೆ.

ಈ ವಾಸನಾರೂಪೀ ವ್ಯಾಮೋಹವು ವ್ಯಕ್ತಿಯೊಳಗೆ ಅಜ್ಞಾನವನ್ನು ಉತ್ಪನ್ನ ಮಾಡುತ್ತದೆ. ಈ ರೀತಿ ತನ್ನೊಳಗೆ ಅವಿದ್ಯೆ ಮತ್ತು ಅಜ್ಞಾನವನ್ನು ಬೆಳೆಸಿಕೊಂಡ ವ್ಯಕ್ತಿಯು ಸಾಂಸಾರಿಕ ಪದಾರ್ಥಗಳೊಂದಿಗೆ ಸ್ವ-ಸ್ವಾಮಿ ಭಾವನೆಯಿಂದ ವರ್ತಿಸುತ್ತಾನೆ ಮತ್ತು ತನ್ನ ಸ್ವಾಮಿತ್ವವನ್ನು ಸ್ಥಾಪಿಸಿ ಅದನ್ನು ಇಟ್ಟುಕೊಳ್ಳುವುದಕ್ಕಾಗಿ ತುಂಬಾ ಪ್ರಯತ್ನಿಸುತ್ತಾನೆ. ಆದರೆ, ಸತ್ಯ ಸಂಗತಿಯ ಜ್ಞಾನವಾದಾಗ, ಆ ವ್ಯಕ್ತಿಗೆ ಈ ಸ್ವ-ಸ್ವಾಮಿ ಸಂಬಂಧವು ಒಂದು ರೀತಿಯ ಬಂಧನವೆಂದು ಅರಿವಾಗುತ್ತದೆ. ಆದುದರಿಂದ, ಈ ಸ್ವ-ಸ್ವಾಮಿ ಸಂಬಂಧವನ್ನು ಕಡಿದು ಹಾಕುವುದಕ್ಕೋಸ್ಕರ ಅವಿದ್ಯೆಯನ್ನು ದೂರ ಮಾಡುವುದು ಬಹಳ ಅಗತ್ಯವಾಗಿದೆ. ಕೆಟ್ಟ ಸಂಸ್ಕಾರವು ಅವಿದ್ಯೆಗೆ ಕಾರಣವಾಗಿದೆ. ಆದುದರಿಂದ ಕೆಟ್ಟ ಸಂಸ್ಕಾರವನ್ನು ಅಳಿಸದೆ ಅವಿದ್ಯೆಯು ದೂರವಾಗುವುದಿಲ್ಲ. ಇದಕ್ಕೆ ಪ್ರಮಾಣ :

**ಇಂದ್ರಿಯದೋಷಾತ್ಸಂಸ್ಕಾರದೋಷಾಚ್ಚಾವಿದ್ಯಾ ॥**

[ವೈಶೇಷಿಕದರ್ಶನ 9-2-10]

ಅರ್ಥಾತ್, ಇಂದ್ರಿಯ ಹಾಗೂ ಸಂಸ್ಕಾರಗಳ ದೋಷದಿಂದಲೇ ಅವಿದ್ಯೆಯು ಜನ್ಮತಾಳುತ್ತದೆ. ಆದುದರಿಂದ ಈ ಎರಡು ದೋಷಗಳನ್ನು ದೂರ ಮಾಡುವುದು ಸಾಧಕನ ಕರ್ತವ್ಯವಾಗಿದೆ.

ಸಂಕ್ಷೇಪದಲ್ಲಿ ಹೇಳುವುದಾದರೆ, ಇಂದ್ರಿಯ ಮತ್ತು ಸಂಸ್ಕಾರಗಳ ದೋಷನಿವಾರಣೆಯಿಂದ ಅವಿದ್ಯೆಯ ನಿವಾರಣೆಯಾಗುತ್ತದೆ. ಅವಿದ್ಯೆಯ ನಿವಾರಣೆಯಾದಾಗ ಸ್ವ-ಸ್ವಾಮಿ ಸಂಬಂಧರೂಪೀ ಬಂಧನವೂ ಕಡಿದು ಹೋಗುತ್ತದೆ. ಒಂದು ಬಾರಿ ಈ ಬಂಧನವು ಕಡಿದು ಹೋಯಿತೆಂದರೆ, ಮತ್ತು ಸಹಜವಾಗಿಯೇ ಯೋಗಿಗೆ ದುಃಖದ ನಿವೃತ್ತಿಯೂ ಮತ್ತು ಆನಂದದ ಲಾಭವೂ ಆಗುತ್ತದೆ.

ಇದೇ ಮಾತನ್ನು ಮಹರ್ಷಿ ಪತಂಜಲಿ, ಇನ್ನೊಂಧು ರೀತಿಯಲ್ಲಿ ಹೇಳಿದ್ದಾರೆ:

ಅವಿದ್ಯೆಯು ಅಳಿದು ಹೋದಾಗ ಸಾಂಸಾರಿ ವಸ್ತುಗಳೊಡನೆ ಯೋಗಿಯ ಸಂಬಂಧವೂ ಕಡಿದು ಹೋಗುತ್ತದೆ. ಮತ್ತು ಈ ಸಾಂಸಾರಿಕ ಸಂಬಂಧವು ಕಡಿದು ಹೋದಾಗ ಜೀವಾತ್ಮನಿಗೆ ಮೋಕ್ಷವು ಲಭಿಸುತ್ತದೆ.

**ಮೋಕ್ಷಪ್ರಾಪ್ತಿಯ ಉಪಾಯ** :- ಮಹರ್ಷಿ ಪತಂಜಲಿ, ಇವರು ಮೋಕ್ಷ ಪ್ರಾಪ್ತಿಯ ಉಪಾಯವನ್ನು ಈ ರೀತಿಯಲ್ಲಿ ಹೇಳಿದ್ದಾರೆ :

**ವಿವೇಕಖ್ಯಾತಿರವಿಪ್ಲವಾ ಹಾನೋಪಾಯಃ ॥** [ಯೋಗದರ್ಶನ 2-26]

ಅರ್ಥಾತ್, ಪರಮಾತ್ಮ, ಜೀವಾತ್ಮ ಪ್ರಕೃತಿ ಮತ್ತು ಪ್ರಕೃತಿಯಿಂದ ಉತ್ಪನ್ನ ಪದಾರ್ಥಗಳ ದೃಢಜ್ಞಾನ(ವಿವೇಕಖ್ಯಾತಿ)ವೇ ಮೋಕ್ಷದ ಮಾರ್ಗವಾಗಿದೆ. ಈ ದೃಢಜ್ಞಾನವನ್ನು ಹೇಗೆ ಸಂಪಾದಿಸುವುದು? ಈ ಪ್ರಶ್ನೆಗೆ ಉತ್ತರ :

**ಯೋಗಾಂಗಾನುಷ್ಠಾನಾದ ಶುದ್ಧಿಕ್ಷಯೇ ಜ್ಞಾನದೀಪ್ತಿರಾವಿವೇಕಖ್ಯಾತೇಃ ॥**
[ಯೋಗದರ್ಶನ 2-28]

ಎಂದರೆ, ಅಷ್ಟಾಂಗ ಯೋಗದ ಅನುಷ್ಠಾನದಿಂದ (ಅವಿದ್ಯೆ, ಅಸ್ಮಿತಾ, ರಾಗ, ದ್ವೇಷ ಮತ್ತು ಅಭಿನಿವೇಶ ಎಂಬ ಕ್ಲೇಶ ರೂಪೀ) ಅಶುದ್ಧಿ =(ದೋಷ)ಯು ದೂರವಾಗಿ ವಿವೇಕಖ್ಯಾತಿ (ದೃಡಜ್ಞಾನ) ಪರ್ಯಂತ (ಸಾಧಕನಿಗೆ) ಜ್ಞಾನದ ಪ್ರಕಾಶವು ಲಭಿಸುತ್ತದೆ. ಆದುದರಿಂದ, ಅಷ್ಟಾಂಗ ಯೋಗದ ಅನುಷ್ಠಾನವೇ ಮೋಕ್ಷ ಪ್ರಾಪ್ತಿಯ ಉಪಾಯ ಎಂದು ಇಲ್ಲಿ ಸ್ಪಷ್ಟವಾಗುತ್ತದೆ.

**ಅಷ್ಟಾಂಗ ಯೋಗ :**

**ಯಮನಿಯಮಾಸನಪ್ರಾಣಾಯಾಮಪ್ರತ್ಯಾಹಾರಧಾರಣಾಧ್ಯಾನ ಸಮಾಧಯೋಽಷ್ಟಾವಂಗಾನಿ ॥**
[ಯೋಗದರ್ಶನ 2-29]

ಯಮ, ನಿಯಮ, ಆಸನ, ಪ್ರಾಣಾಯಾಮ. ಪ್ರತ್ಯಾಹಾರ, ಧಾರಣಾ, ಧ್ಯಾನ ಮತ್ತು ಸಮಾಧಿ - ಇವು ಯೋಗದ ಎಂಟು ಅಂಗಗಳು. ಇವುಗಳ ಅನುಷ್ಠಾನದಿಂದಲೇ ಪರಮಾತ್ಮನ ಸಾಕ್ಷಾತ್ಕಾರವು ಸಂಭವ, ಅನ್ಯಥಾ ಇದು ಅಸಂಭವ.

ಕೆಲವು ಜನರು ಯೋಗಿ ಯಾಗುವುದಕ್ಕೆ ಯಮ-ನಿಯಮಾದಿಗಳ ಪಾಲನೆ ಮಾಡುವ ಅವಶ್ಯಕತೆ ಇಲ್ಲ ಎಂದು ಹೇಳುತ್ತಾರೆ. ಯಾಕೆಂದರೆ ಇವರ ದೃಷ್ಟಿಯಲ್ಲಿ, ಮಹರ್ಷಿ ಪತಂಜಲಿ ಹೇಳಿದ ಯೋಗ ಸಾಧನೆಯ ಮಾರ್ಗವೇ ಸರಿ. ಬೇರೆ ಯಾವ ಮಾರ್ಗವೂ ಸರಿಯಲ್ಲ, ಎಂದು ಎಣಿಸುವುದು ತಪ್ಪು ಈ ರೀತಿಯಲ್ಲಿ ತರ್ಕ ಮಾಡುವವರ ಮುಂದೆ ನಮ್ಮದು ಒಂದು ಪ್ರಶ್ನೆ : ಯಮ ನಿಯಮಾದಿಗಳಿಂದ ಭಿನ್ನವಾದ ಯಾವುದಾದರೂ ಒಂದು ಯೋಗ ಸಾಧನೆಯ ಮಾರ್ಗವು ಇರುವುದಾದರೆ, ಅದು ಯಮ ನಿಯಮಾದಿಗಳಿಗೆ ಅನುಕೂಲವಾಗಿದೆಯೇ, ಅಥವಾ, ಪ್ರತಿಕೂಲವಾಗಿದೆಯೋ? ಒಂದು ವೇಳೆ ಅದು ಅನುಕೂಲವಾಗಿದ್ದರೆ, ಈ ಭಿನ್ನತೆಯು ಕೇವಲ ಶಾಬ್ದಿಕವಾಗಿದೆ. ಇಲ್ಲಿ ತಾತ್ವಿಕ ಭಿನ್ನತೆ ಇಲ್ಲ, ಎಂದಾಯಿತು. ಅಥವಾ, ಇವರು ಹೇಳುವ ಯೋಗ ಸಾಧನೆಯ ಬೇರೆ ಮಾರ್ಗವು, ಯಮ ನಿಯಮಾದಿಗಳಿಗೆ ವಿರುದ್ಧವಾಗಿದ್ದರೆ ಅದರಲ್ಲಿ ಅಹಿಂಸೆಯ ಬದಲಿಗೆ ಹಿಂಸೆಯನ್ನು, ಸತ್ಯದ ಬದಲಿಗೆ ಅಸತ್ಯವನ್ನು, ಕಳ್ಳತನದ ಮಾರ್ಗವನ್ನು ಬಿಡಬೇಕೆಂದು ಹೇಳುವುದರ ಬದಲು ಕಳ್ಳತನ

  

ಮಾಡಬೇಕೆಂದು ಮತ್ತು ಬ್ರಹ್ಮಚರ್ಯೆಯ ಪಾಲನೆ ಮಾಡುವುದರ ಬದಲು ವ್ಯಭಿಚಾರವನ್ನು ಮಾಡಬೇಕೆಂದು ಇವರು ಹೇಳಬೇಕು. ಈ ರೀತಿ ಯಾರಾದರೂ ನಡೆದರೆ ಅವರಿಗೆ ಯೋಗವು ಸಿದ್ಧಿಸಬಹುದೆ? ಸರ್ವಥಾ ಸಾಧ್ಯವಿಲ್ಲ. ಇಂತಹ ಜನರು ಯೋಗಿಗಳಾಗುವ ಸಂಭವವೇ ಇಲ್ಲ.

ಕೆಲವರು, ಯೋಗದ ಮೇಲೆ ಶ್ರದ್ಧೆ ಮತ್ತು ಆಸಕ್ತಿ ಇರುವ ಸರಳ ಹೃದಯಿಗಳಾದ ಜನರನ್ನು ವಂಚಿಸುವ ದೃಷ್ಟಿಯಿಂದ ಅವರ ಅಭಿರುಚಿಗನುಸಾರವಾಗಿ ಉಪದೇಶಕೊಡುವುದುಂಟು. ಸಾಮಾನ್ಯವಾಗಿ ಜನರ ಅಭಿರುಚಿಯು ಪಂಚ ಜ್ಞಾನೇಂದ್ರಿಯಗಳ ವಿಷಯಗಳ ಸೇವನೆಯಲ್ಲಿ ಇರುತ್ತದೆ. ಆದುದರಿಂದ ಯಾರಾದರೂ ಇದಕ್ಕೆ ಅನುಕೂಲವಾಗಿ ಏನಾದರೂ ಹೇಳಿದರೆ ಅವರಿಗೆ ಸಂತೋಷವಾಗುತ್ತದೆ. ಇಂದ್ರಿಯಗಳ ಸಂಯಮ ಮಾಡಬೇಕೆಂದು ಒಂದು ವೇಳೆ ಯಾರಾದರೂ ಹೇಳಲಿಕ್ಕೆ ಬಂದರೆ, ಅದನ್ನು ಇವರು ಕೇಳುವುದಕ್ಕೆ ಇಷ್ಟ ಪಡುವುದಿಲ್ಲ. ಈ ಕಾರಣದಿಂದಾಗಿ ಸಾವಿರಾರು ಜನರು ಯೋಗದ ಹೆಸರಿನಲ್ಲಿ ತಮ್ಮನ್ನು ತಾವೇ ವಂಚಿಸಿಕೊಳ್ಳುತ್ತಿದ್ದಾರೆ.

ಕೆಲವರು ತಾವು ಯೋಗದ ನವೀನ ಹಾಗೂ ಸರಳತಮ ಪದ್ಧತಿಯನ್ನು ಕಂಡುಹಿಡಿದಿದ್ದೇವೆ, ಎಂದು ಪ್ರಚಾರ ಮಾಡುತ್ತಿದ್ದಾರೆ. ಈ ನವೀನ ಪದ್ಧತಿಯಲ್ಲಿ ಅನ್ನ-ಪಾನಾದಿಗಳ ಬಗ್ಗೆ ಅಥವಾ ಆಚಾರ-ವಿಚಾರಗಳ ಬಗ್ಗೆ ಏನೂ ನಿಯಮ ಇರುವುದಿಲ್ಲ. ಇಲ್ಲಿ ಕಳ್ಳತನ ವ್ಯಭಿಚಾರಾದಿ ದುರಾಚಾರಗಳನ್ನು ಬಿಡುವ ಅವಶ್ಯಕತೆ ಇಲ್ಲ. ಅಸತ್ಯ, ಛಲ, ಕಪಟ ಇತ್ಯಾದಿಗಳಿಗೂ, ಏನೂ ಅಡ್ಡಿ ಇಲ್ಲ. ಜನರು ಏನು ಬೇಕಾದರೂ ಮಾಡಬಹುದು. ಇದರಿಂದ ಇವರು ಯೋಗಿಗಳಾಗುವುದಕ್ಕೆ ಏನೂ ತೊಂದರೆ ಇಲ್ಲ. ಈ ರೀತಿಯಲ್ಲಿ ನಿಜವಾದ ಯೋಗಮಾರ್ಗವನ್ನು ಬಿಟ್ಟು ಈ ನವೀನ ಯೋಗಾಚಾರ್ಯರು ಜನರನ್ನು ದುರ್ಮಾರ್ಗದ ಕಡೆಗೆ ಎಳೆಯುತ್ತಿರುವುದನ್ನು ನಾನು ನೋಡುತ್ತಿರುತ್ತೇನೆ. ಇದರಿಂದ ಯೋಗದ ಹೆಸರು ಕೆಡುತ್ತದೆ ಮತ್ತು ಲೋಕಕ್ಕೆ ಅಪಕಾರವಾಗುತ್ತದೆ. ಆದುದರಿಂದ ಜನರನ್ನು ಈ ವಂಚಕರಾದ ನವೀನ ಯೋಗಮಾರ್ಗಿಗಳ ಬಲೆಯಿಂದ ಬಿಡಿಸಿ ಮಹರ್ಷಿ ಪತಂಜಲಿ ಇವರು ಹೇಳಿಕೊಟ್ಟ (ವೇದಾನುಕೂಲವೂ, ವೈಜ್ಞಾನಿಕವೂ ಆದ) ಯೋಗ ಮಾರ್ಗದಲ್ಲಿ ನಡೆಸಬೇಕಾಗಿದೆ.

**ಯೋಗದ ಪ್ರಥಮ ಅಂಗ ಯಮ :-**

**ಅಹಿಂಸಾಸತ್ಯಾಸ್ತೇಯ ಬ್ರಹ್ಮಚರ್ಯಾಪರಿಗ್ರಹಾ ಯಮಾಃ ।**

[ಯೋಗದರ್ಶನ 2-30]

ಅರ್ಥಾತ್, ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ - ಇವುಗಳನ್ನು (ಯೋಗ ಶಾಸ್ತ್ರದ ಭಾಷೆಯಲ್ಲಿ) ಯಮಗಳೆಂದು ಹೇಳುತ್ತಾರೆ. ಈ ಐದು ತತ್ವಗಳು ಒಟ್ಟು ಸೇರಿ ಯೋಗದ ಪ್ರಥಮ ಅಂಗ ಎನಿಸಿಕೊಂಡಿವೆ.

ಅಹಿಂಸೆ ಎಂದರೆ, ಯಾವ ಸಮಯದಲ್ಲೂ ಯಾವ ಪ್ರಾಣಿಯ ಮೇಲೆಯೂ ವೈರತ್ವದ ಭಾವನೆಯನ್ನು ಇಟ್ಟುಕೊಳ್ಳದಿರುವುದು ಅಹಿಂಸೆಯಾಗಿದೆ, ಆದರೆ, ಅಹಿಂಸಾ ತತ್ವವು ಪೂರ್ಣವಾಗಬೇಕಾದರೆ ಹಿಂಸೆಯನ್ನು ನೋಡಿ ದೂರ ಓಡಿಹೋಗಬಾರದು, ಅಥವಾ ಅದನ್ನು ಉಪೇಕ್ಷಿಸಬಾರದು ; ಹಿಂಸಾವೃತ್ತಿಯನ್ನು ನಿಲ್ಲಿಸುವ ಪ್ರಯತ್ನವೂ ನಡೆಯಬೇಕು. ಇದೇ ನಿಜವಾಗಿ ಅಹಿಂಸೆಯ ಅನುಷ್ಠಾನವಾಗಿದೆ. ಇತರ ಯಮಗಳ ಬಗ್ಗೆಯೂ ಇದೇ ದೃಷ್ಟಿಕೋಣವನ್ನು ನಾವು ಇಟ್ಟುಕೊಳ್ಳಬೇಕು. ಉದಾಹರಣೆಗಾಗಿ, ಒಬ್ಬ ವ್ಯಕ್ತಿಯು ಸುಳ್ಳುಹೇಳುವವನಲ್ಲ ಎಂದು ಕೊಳ್ಳುವ. ಆದರೆ, ಆ ವ್ಯಕ್ತಿಯು ಅಗತ್ಯವಾಗಿ ಸತ್ಯ ಹೇಳಬೇಕಾದ ಸಂದರ್ಭ ಬಂದಾಗ ಸತ್ಯವನ್ನು ಹೇಳುವುದಿಲ್ಲ. ಇಂತಹ ವ್ಯಕ್ತಿಯನ್ನು ಸತ್ಯವಾದಿ ಎಂದು ಹೇಳಲಿಕ್ಕೆ ಸಾಧ್ಯವಿಲ್ಲ (ಅಸತ್ಯವನ್ನು ಸರಿಯಾದ ರೀತಿಯಲ್ಲಿ ಖಂಡಿಸಿದಾಗಲೇ, ಅಥವಾ ಅದನ್ನು ಸೋಲಿಸಿದಾಗಲೇ ಸತ್ಯಕ್ಕೆ ಬೆಲೆ ಬರುತ್ತದೆ).

**ಸತ್ಯದ ಲಕ್ಷಣ :-**

ಸತ್ಯದ ಮಾತನ್ನು ಎಲ್ಲರೂ ಹೇಳುತ್ತಾರೆ. ಆದರೆ, ಬಹುಮಂದಿ ಜನರಿಗೆ ನಿಜವಾಗಿ ಸತ್ಯವೆಂದರೇನು ಎಂಬುದು ಗೊತ್ತಿರುವುದಿಲ್ಲ. ಆದುದರಿಂದ, ಅನೇಕ ಬಾರಿ, ಅರ್ಧ ಸತ್ಯ ಅಥವಾ ವಿಕೃತ ಸತ್ಯವನ್ನೂ ಜನರು ಸತ್ಯವೆಂದು ಪ್ರತಿಪಾದಿಸುವುದುಂಟು. ಇದರಿಂದ ಅನೇಕ ವಿವಾದಗಳು ಉತ್ಪನ್ನವಾಗುತ್ತವೆ. ಅಶಾಂತಿಯು ಹರಡುತ್ತದೆ. ಜನರು ಭ್ರಾಂತರಾಗುತ್ತಾರೆ. ಆದುದರಿಂದ, ಸತ್ಯದ ಲಕ್ಷಣವನ್ನು ತಿಳಿದುಕೊಳ್ಳುವುದು ಬಹಳ ಮಹತ್ವಪೂರ್ಣವಾಗಿದೆ. ಋಷಿಗಳು ಸತ್ಯದ ಲಕ್ಷಣವನ್ನು ಈ ರೀತಿ ಹೇಳಿದ್ದಾರೆ "ಯಥಾದೃಷ್ಟಂ ಯಥಾನುಮಿತಂ ಯಥಾ ಶ್ರುತಂ ತಥಾ ವಾಙ್ಮನಶ್ಚೇತಿ" [ಯೋಗದರ್ಶನ 2-30ರಲ್ಲಿ ವ್ಯಾಸಭಾಷ್ಯ]

ಅರ್ಥಾತ್, ಪ್ರತ್ಯಕ್ಷ ಪ್ರಮಾಣವನ್ನು ಕಂಡಹಾಗೆ, ಅನುಮಾನದಿಂದ ಇತ್ಯರ್ಥ ಮಾಡಿಕೊಂಡಂತೆ ಮತ್ತು ಅದಕ್ಕನುಸಾರವಾಗಿ ಇತರರಿಂದ ಕೇಳಿ ತಿಳಿದುಕೊಂಡ ರೀತಿಯಲ್ಲಿ, ಮನಸ್ಸಿನಲ್ಲಿ ವಿಚಾರ ಮಾಡುವುದು ಮತ್ತು ವಾಣಿಯಲ್ಲಿ ಅಭಿವ್ಯಕ್ತಮಾಡುವುದು ಸತ್ಯದ ಲಕ್ಷಣವಾಗಿದೆ. ಮಹರ್ಷಿ ದಯಾನಂದರು ಸತ್ಯಾರ್ಥ ಪ್ರಕಾಶದ ಭೂಮಿಕೆಯಲ್ಲಿ ಒಂದು ಕಡೆ ಸತ್ಯದ ಪರಿಭಾಷೆ ಮಾಡುತ್ತಾ ಈ ರೀತಿ

ಬರೆದಿದ್ದಾರೆ : "ಒಂದು ವಸ್ತುವು ನಿಜವಾಗಿಯೂ ಹೇಗಿದೆಯೋ (ಅಥವಾ ಅದು ನಿಜವಾಗಿಯೂ ಏನಾಗಿದೆಯೋ) ಅದನ್ನು ಹಾಗೆಯೇ ಹೇಳುವುದು, ಬರೆಯುವುದು ಮತ್ತು ಮನಸ್ಸಿನಲ್ಲಿ ಒಪ್ಪಿಕೊಳ್ಳುವುದು ಸತ್ಯವಾಗಿದೆ". ಇದರಿಂದ ಈ ಕೆಳಗಿನ ವಿಷಯಗಳು ಸ್ಪಷ್ಟವಾಗುತ್ತವೆ. ಒಂದನೆಯದಾಗಿ, ಯಾವ ವಸ್ತುಗಳ ಕುರಿತಾಗಿ ನಾವು ಮಾತಾಡುತ್ತೇವೆಯೋ ಆ ವಸ್ತುಗಳ ನಿಜವಾದ ಸ್ವರೂಪವನ್ನು ತಿಳಿದುಕೊಳ್ಳುವುದು, ಎರಡನೆಯದಾಗಿ, ಮನಸ್ಸಿನಲ್ಲಿ ಅದನ್ನು ಅದೇ ರೀತಿಯಲ್ಲಿ ಒಪ್ಪಿಕೊಳ್ಳುವುದು ಮತ್ತು ಮೂರನೆಯದಾಗಿ, ಅದನ್ನು ಇದ್ದ ಹಾಗೆಯೇ, ಮಧುರ ಹಾಗೂ ಹಿತಕಾರಿಯಾದ ಮಾತಿನಲ್ಲಿ ಎಷ್ಟು ಬೇಕೋ ಅಷ್ಟು ಮಾತ್ರ ಹೇಳುವುದು. ನಾಲ್ಕನೆಯದಾಗಿ, ಒಂದು ವೇಳೆ ಯಾರ ಮುಂದೆಯಾದರೂ ಸತ್ಯ ಹೇಳಿ ಏನೂ ಪ್ರಯೋಜನ ಆಗುವ ಹಾಗೆ ಇಲ್ಲವೆಂದಾದರೆ, ಸುಮ್ಮನೆ ಇರುವುದು, ಮತ್ತು ಐದನೆಯದಾಗಿ, ಹೇಗೆ ಮಾತಿನಲ್ಲೋ ಹಾಗೆಯೇ ಕಾರ್ಯದಲ್ಲಿ ಮಾಡಿ ತೋರಿಸುವುದು ಸತ್ಯದ ವಾಸ್ತವಿಕ ಸ್ವರೂಪವಾಗಿದೆ.

**ಪ್ರಶ್ನೆ** :– ಒಬ್ಬ ವ್ಯಕ್ತಿಯು ಯಾವುದನ್ನು ಸತ್ಯವೆಂದು ಹೆಳುತ್ತಾನೋ, ಅದನ್ನೇ ಇನ್ನೊಬ್ಬವ್ಯಕ್ತಿಯು ಸುಳ್ಳೆಂದು ಹೇಳಬಹುದು. ಇಂತಹ ಸಂದರ್ಭದಲ್ಲಿ ಯಾವುದು ಸತ್ಯ ಮತ್ತು ಯಾವುದು ಸುಳ್ಳು ಎಂದು ನಿರ್ಣಯ ಮಾಡುವುದು ಹೇಗೆ?

**ಉತ್ತರ**:– ಸತ್ಯಾಸತ್ಯದ ನಿರ್ಣಯ ಮಾಡಲಿಕ್ಕೆ ಮಹರ್ಷಿ ದಯಾನಂದರು, ಸತ್ಯಾರ್ಥಪ್ರಕಾಶದ ಮೂರನೇ ಸಮುಲ್ಲಾಸದಲ್ಲಿ ಐದು ಪ್ರಕಾರದ ಪರೀಕ್ಷಣೆಗಳನ್ನು ಹೇಳಿಕೊಟ್ಟಿದ್ದಾರೆ. ಅವು ಹೀಗಿವೆ :-

೧) ಯಾವುದು ಪರಮಾತ್ಮನ ಗುಣ, ಕರ್ಮ, ಸ್ವಭಾವ ಮತ್ತು ವೇದಗಳಿಗೆ ಅನುಕೂಲವಾಗಿದೆಯೋ, ಅದು ಸತ್ಯ ಮತ್ತು ಅದಕ್ಕೆ ವಿರುದ್ಧವಾದುದು ಅಸತ್ಯವಾಗಿದೆ ;

೨) ಏನೆಲ್ಲಾ ಸೃಷ್ಟಿಕ್ರಮಕ್ಕೆ ಸರಿಯಾಗಿದೆಯೋ, ಅದೆಲ್ಲಾ ಸತ್ಯ ಮತ್ತು ಸೃಷ್ಟಿಕ್ರಮಕ್ಕೆ ವಿರುದ್ಧವಾದುದೆಲ್ಲಾ ಅಸತ್ಯವಾಗಿದೆ ;

೩) ಆಪ್ತಪುರುಷರು ಎಂದರೆ, ಧಾರ್ಮಿಕ, ಸತ್ಯವಾದಿ, ನಿಷ್ಕಪಟಿಗಳಾದ ವಿದ್ವಾಂಸರು ಇವರ ಉಪದೇಶಗಳಿಗೆ ಸರಿಯಾದ ಮಾತುಗಳೆಲ್ಲಾ ಗ್ರಾಹ್ಯವಾಗಿವೆ ಮತ್ತು ತದ್ವಿರುದ್ಧವಾದ ಮಾತುಗಳೆಲ್ಲಾ ಅಗ್ರಾಹ್ಯವಾಗಿವೆ;

ಳ) ತನ್ನ ಅಂತರಾತ್ಮನ ಪವಿತ್ರತೆ ಮತ್ತು ವಿದ್ಯೆಗೆ ಅನುಕೂಲವಾಗಿರುವುದು, ಎಂದರೆ ಯಾವ ರೀತಿಯಲ್ಲಿ ತನಗೆ ಸುಖವು ಪ್ರಿಯವಾಗಿಯೂ, ದುಃಖವು ಅಪ್ರಿಯವಾಗಿಯೂ ಕಾಣುತ್ತದೆಯೋ, ಅದೇ ರೀತಿಯಲ್ಲಿ ಇತರರಿಗೂ ಸುಖವು ಪ್ರಿಯವಾಗಿಯೂ, ದುಃಖವು ಅಪ್ರಿಯವಾಗಿಯೂ ಕಾಣಬಹುದು ಎಂಬುದನ್ನು ತಿಳಿದುಕೊಂಡು, ತಾನು ಯಾರಿಗಾದರೂ ಸುಖಕೊಟ್ಟರೆ ಅವರಿಗೆ ಆಗ ಆನಂದವೂ, ಕಷ್ಟಕೊಟ್ಟರೆ ದುಃಖವೂ ಆಗುತ್ತದೆ, ಎಂಬುದನ್ನು ನೆನಪಿನಲ್ಲಿಟ್ಟುಕೊಂಡು ಮನುಷ್ಯನು ಮಾಡುವ ಆಚರಣೆ ; ಮತ್ತು

ೞ) ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಐತಿಹ್ಯ, ಅರ್ಥಾಪತ್ತಿ, ಸಂಭವ ಹಾಗೂ ಅಭಾವ ಎಂಬ ಎಂಟು ರೀತಿಯ ಪ್ರಮಾಣಗಳು.

ಮಹರ್ಷಿ ಮನು, ಇವರ ಮಾತಿನಲ್ಲಿ ಹೇಳುವುದಾದರೆ ಸತ್ಯಾಸತ್ಯ (ಧರ್ಮಾಧರ್ಮ)ದ ನಿರ್ಣಯಕ್ಕೆ ಆಧಾರಗಳು ಹೀಗಿವೆ.

**ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ ।**
**ಏತಚ್ಚತುರ್ವಿದಂ ಪ್ರಾಹುಃ ಸಾಕ್ಷಾತ್ ಧರ್ಮಸ್ಯ ಲಕ್ಷಣಮ್ ॥**

[ಮನುಸ್ಮೃತಿ 2-12]

[ಎಂದರೆ ವೇದವಾಕ್ಯಗಳು, ಅವುಗಳಿಗೆ ಅನುಕೂಲವಾಗಿರುವ ಆಪ್ತೋಪದೇಶಗಳು, ಸತ್ಪುರುಷರ ಆಚರಣೆ ಮತ್ತು ತನ್ನ ಅಂತರಾತ್ಮನಿಗೆ ಸರಿ ಎಂದು ಕಂಡು ಬರುವುದು - ತನ್ನಂತೆಯೇ ಇತರರೂ ಎಂಬ ಭಾವನೆ : ಈ ನಾಲ್ಕು ವಿಷಯಗಳು. ಧರ್ಮದ ಲಕ್ಷಣಗಳು, ಧರ್ಮಾಧರ್ಮದ ಪರೀಕ್ಷಣೆಗೆ ಇದೇ ಆಧಾರಗಳು]

ನ್ಯಾಯ ದರ್ಶನದ ಆಚಾರ್ಯರಾದ ಮಹರ್ಷಿ ಗೌತಮರು ಸತ್ಯಾಸತ್ಯದ ನಿರ್ಣಯಕ್ಕೆ ಈ ಕೆಳಗಿನ ಉಪಾಯಗಳನ್ನು ಹೇಳಿಕೊಟ್ಟಿದ್ದಾರೆ:—

**ಪ್ರಮಾಣ ತರ್ಕಸಾಧನೋಪಾಲಂಭಃ ಸಿದ್ಧಾಂತಾವಿರುದ್ಧಃ**
**ಪಂಚಾವಯವೂಪಪನ್ನಃ ಪಕ್ಷ ಪ್ರತಿಪಕ್ಷ ಪ್ರತಿಗ್ರಹೋವಾದಃ**

[ನ್ಯಾಯದರ್ಶನ 1-2-1]

ಈ ಎಲ್ಲಾ ಉಪಾಯಗಳಿಂದ ಸತ್ಯಾಸತ್ಯದ ನಿರ್ಣಯ ಮಾಡಬಹುದಾಗಿದೆ. ಈ ರೀತಿ ಸತ್ಯಾಸತ್ಯದ ನಿರ್ಣಯ ಮಾಡುವ ಉಪಾಯಗಳನ್ನು ತಿಳಿದುಕೊಳ್ಳುವ ತನಕ ಮನುಷ್ಯರಿಗೆ ಸತ್ಯದ ಸ್ವರೂಪವು ಸರಿಯಾಗಿ ಅರಿವಾಗುವುದಿಲ್ಲ. ಸತ್ಯದ ಸ್ವರೂಪವು

  

ಸರಿಯಾಗಿ ಗೊತ್ತಾಗುವತನಕ ಜನರಿಗೆ ಸತ್ಯಕ್ಕೆ ಅನುಸಾರವಾಗಿ ನಡೆದುಕೊಳ್ಳಲಿಕ್ಕೆ ಬರುವುದಿಲ್ಲ. ಸತ್ಯಕ್ಕನುಸಾರವಾಗಿ ನಡೆದುಕೊಳ್ಳದೆ, ಯೋಗವು ಸಿದ್ಧಿಸುವುದಿಲ್ಲ. ಅನ್ಯ-ಯಮ-ನಿಯಮಾದಿಗಳ ಬಗ್ಗೆಯೂ ಇದೇರೀತಿ ತಿಳಿದುಕೊಳ್ಳಬೇಕು.

ಇಲ್ಲಿ ಒಂದು ಮಾತು ವಿಶೇಷವಾಗಿ ಗಮನ ಕೊಡಲಿಕ್ಕೆ ಯೋಗ್ಯವಾಗಿದೆ. ಅದೇನೆಂದರೆ, ಜನರು ಸುಳ್ಳು ಯಾಕೆ ಹೇಳುತ್ತಾರೆ ಎಂಬ ಪ್ರಶ್ನೆ. ಸುಳ್ಳು ಹೇಳುವುದಕ್ಕೆ ಮುಖ್ಯಕಾರಣವೆಂದರೆ, ಸುಳ್ಳುಹೇಳುವ ವ್ಯಕ್ತಿ ತನಗೆ ಇದರಿಂದ ಲಾಭವಾಗುತ್ತದೆ ಎಂದು ತಿಳಿದುಕೊಳ್ಳುತ್ತಾನೆ. ತನಗೆ ಹಾನಿಯಾಗಬೇಕೆಂದು ಭಾವಿಸಿ ಯಾರೂ ಸುಳ್ಳು ಹೇಳುವುದಿಲ್ಲ. ಆದರೂ ಕೂಡ, ನಿಜವಾಗಿ ನೋಡಿದರೆ, ಸುಳ್ಳು ಹೇಳುವ ವ್ಯಕ್ತಿಗೆ, ಎಂದಿಗೂ ಲಾಭವಾಗುವುದಿಲ್ಲ. ಅವನಿಗೆ ಕೇವಲ ಲಾಭದ ಆಭಾಸವಾಗುತ್ತದೆ.

**"ಸತ್ಯಮೇವ ಜಯತೇ ನಾನೃತಂ"** ಎಂದು ಮುಂಡಕೋಪನಿಷತ್ತಿನಲ್ಲಿ ಹೇಳಿದ ಹಾಗೆ, ಸತ್ಯವೇ ಯಾವಾಗಲೂ ಗೆಲ್ಲುತ್ತದೆ. ಅಸತ್ಯವು ಗೆಲ್ಲವುದಿಲ್ಲ. [ಇದಕ್ಕೋಸ್ಕರ ಸತ್ಯದ ಪಕ್ಷವನ್ನು ವಹಿಸಿ ಅಸತ್ಯಕ್ಕೆ ವಿರುದ್ಧವಾಗಿ ಹೋರಾಡಬೇಕಾಗುತ್ತದೆ] ಯಾವುದಾದರೊಂದು ಕಾರ್ಯದ ಸೋಲು ಅಥವಾ ಗೆಲುವು ಅದರ ಕೊನೆಯ ಪರಿಣಾಮದಿಂದ ಗೊತ್ತಾಗುತ್ತದೆ. ಒಂದು ವೇಳೆ ಕೊನೆಯ ಪರಿಣಾಮವು ದುಃಖವು ಕಡಿಮೆಯಾಗಿ ಸುಖವು ಹೆಚ್ಚಿತು ಎಂದಾದರೆ ಅದೇ ಗೆಲುವು; ಇದರ ಬದಲಿಗೆ ಸುಖವು ಕಡಿಮೆಯಾಗಿ ದುಃಖವು ಹೆಚ್ಚಾಯಿತು ಎಂದಾದರೆ ಅದೇ ಸೋಲು, ಎಂಬುದನ್ನು ಜನರು ತಿಳಿದುಕೊಳ್ಳಬೇಕು. ಜನರು ಸತ್ಯದ (ಧರ್ಮ) ಮಾರ್ಗದಲ್ಲಿ ಸರಿಯಾಗಿ ನಡೆದು ಹೋದರೆ, ಜಗತ್ತಿನಲ್ಲಿ ಸುಖವು ಹೆಚ್ಚುತ್ತಾಹೋಗುತ್ತದೆ ಮತ್ತು ದುಃಖವು ದೂರವಾಗುತ್ತಾ ಹೋಗುತ್ತದೆ. ಇದೇ ಸತ್ಯದ ವಿಜಯ.

ಶಾಸ್ತ್ರ (= ಧರ್ಮಶಾಸ್ತ್ರ ಹಾಗೂ ಈಗಿನ ಕಾಲದ ಕಾಯಿದೆ ಕಾನೂನು)ಗಳಿಗೆ ವಿರುದ್ಧವಾಗಿ ಪರರ ದ್ರವ್ಯಗಳನ್ನು ತಮ್ಮ ಕೈವಶ ಮಾಡಿಕೊಳ್ಳುವುದು ಕಳ್ಳತನವೆನಿಸಿಕೊಂಡಿದೆ. (ಮನಸಾ, ವಾಚಾ ಮತ್ತು ಕರ್ಮಣಾ) ಇದಕ್ಕೆ ಒಳಗಾಗದೆ ಇರುವುದು ಅಸ್ತೇಯವಾಗಿದೆ. ಕರ್ಮಣಾ, ಎಂದರೆ ಕಾರ್ಯದಲ್ಲಿ ಕಳ್ಳತನವನ್ನು ಬಿಡುವುದು ಅಷ್ಟುಕಷ್ಟವಲ್ಲ. ಆದರೆ ಮನಸ್ಸಿನಲ್ಲಿ ಕಳ್ಳತನದ ಭಾವನೆಯೇ ಬಾರದಂತೆ ಮಾಡುವುದು ಬಹಳ ಕಷ್ಟ. (ಯಾಕೆಂದರೆ ಇದು ಅಭಿಲಾಷೆ ಎಂಬ ಸೂಕ್ಷ್ಮರೂಪದಲ್ಲಿ ಬರುತ್ತದೆ) ಆದುದರಿಂದ, ಕೇವಲ ಕಾರ್ಯರೂಪದಲ್ಲಿ ಕಳ್ಳತನ ಬಿಡುವುದು ಅಸ್ತೇಯ ಅಲ್ಲ. ಮನಸ್ಸಿನಲ್ಲಿಯೂ ಕಳ್ಳತನದ ಭಾವನೆ ಮೂಡಿಬರದಂತೆ ಮಾಡುವುದೇ ನಿಜವಾದ ಅಸ್ತೇಯವಾಗಿದೆ.

ಕೆಲವು ಜನರು ತಾವಾಗಿ ಕಳ್ಳತನ ಮಾಡುವುದಿಲ್ಲ. ಆದರೆ ಇತರರು ಕಳ್ಳತನ ಮಾಡುವಾಗ ಅದನ್ನು ನೋಡಿಯೂ ಸುಮ್ಮನಿರುತ್ತಾರೆ. ಅಥವಾ ಸುಪಾತ್ರರಿಗೆ ದಾನವನ್ನೂ ಮಾಡುವುದಿಲ್ಲ. ಇಂತಹ ಜನರನ್ನು ಅಸ್ತೇಯದ ಪಾಲನೆ ಮಾಡುವವರು ಎಂದು ಹೇಳಲಿಕ್ಕೆ ಬರುವುದಿಲ್ಲ.

ಮನಸ್ಸು ಮತ್ತು ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡು ವೀರ್ಯದ ರಕ್ಷಣೆ, ಪರಮಾತ್ಮನ ಉಪಾಸನೆ ಮತ್ತು ವೇದಗಳ ಅಧ್ಯಯನ ಮಾಡುವುದಕ್ಕೆ ಬ್ರಹ್ಮಚರ್ಯೆ ಎಂದು ಹೇಳುತ್ತಾರೆ. ವಸ್ತುಗಳ ಉಪಾರ್ಜನೆ, ರಕ್ಷಣೆ, ಕ್ಷಯ, ಹಿಂಸೆ— ಇವುಗಳಲ್ಲಿ ದೋಷವನ್ನು ಕಂಡು, ಅವಶ್ಯಕತೆಗಿಂತ ಅಧಿಕ ಸಂಗ್ರಹ ಮಾಡುವುದರಲ್ಲಿ ಇಚ್ಛೆ ಇಲ್ಲದಿರುವುದು, ಮತ್ತು ವಸ್ತುಗಳ ಮೇಲೆ ಇದು ತನ್ನದು ಎಂಬ ಅಭಿಮಾನ ಅಥವಾ ತಾನು ಈ ಸಾಂಸಾರಿಕ ಪದಾರ್ಥಗಳ ಸ್ವಾಮಿ ಎಂಬ ಸ್ವತ್ವಾಭಿಮಾನದ ಭಾವನೆ ಮನಸ್ಸಿನಲ್ಲಿ ಮೂಡದಿರುವುದು ಅಪರಿಗ್ರಹವಾಗಿದೆ. ಯಾವ ವಸ್ತುಗಳು ಮತ್ತು ಯಾವ ವಿಚಾರಗಳು ಪರಮಾತ್ಮನ ಸಾಕ್ಷಾತ್ಕಾರದ ಮಾರ್ಗದಲ್ಲಿ ಅಡ್ಡಿತರುತ್ತವೆಯೋ, ಅವುಗಳನ್ನು ಇಟ್ಟುಕೊಳ್ಳುವುದಕ್ಕೆ ಪರಿಗ್ರಹ ಎಂದು ಹೇಳುತ್ತಾರೆ. ಅವುಗಳನ್ನು ಬಿಟ್ಟುಬಿಡುವುದಕ್ಕೆ ಅಪರಿಗ್ರಹವೆನ್ನುತ್ತಾರೆ. ಯೋಗದ ಸಿದ್ಧಿಗೆ ಈ ಯಮಗಳ ಪಾಲನೆ ಮಾಡುವುದು ಅನಿವಾರ್ಯವಾಗಿದೆ. ನಿಜವಾಗಿ ಹೇಳುವುದಾದರೆ, ಇವುಗಳನ್ನು ಯೋಗದ ಅಡಿಗಲ್ಲು ಎಂದು ಹೇಳಬಹುದು. ಯಾವ ರೀತಿಯಲ್ಲಿ ಅಡಿಗಲ್ಲು ಇಲ್ಲದೆ ಭವನವು ನಿಲ್ಲುವುದಿಲ್ಲವೋ ಅದೇ ರೀತಿಯಲ್ಲಿ ಈ ಯಮಗಳ ಪಾಲನೆ ಮಾಡದೆ ಹೋದರೆ, ಯೋಗವು ಸಿದ್ಧಿಸುವುದಿಲ್ಲ.

## ಯಮಗಳ ಪಾಲನೆ ಮಾಡುವ ರೀತಿ

**ಜಾತಿದೇಶಕಾಲ ಸಮಯಾನವ ಚ್ಛಿನ್ನಾಃ ಸಾರ್ವಭೌಮಾಮಹಾವ್ರತಮ್ ॥**

[ಯೋಗದರ್ಶನ 2-31]

ಅರ್ಥಾತ್, ಜಾತಿ, ದೇಶ, ಕಾಲ ಮತ್ತು ಸಮಯಗಳ ಬಂಧನವಿಲ್ಲದೆ, ಎಲ್ಲಾ ಪರಿಸ್ಥಿತಿಗಳಲ್ಲಿಯೂ ಪೂರ್ಣವಾಗಿ ಯಮಗಳ ಪಾಲನೆ ಮಾಡುವುದಕ್ಕೆ, ಮಹಾವ್ರತ ಎಂದು ಹೇಳುತ್ತಾರೆ. ಉದಾಹರಣೆಗಾಗಿ ಹೇಳುವುದಾದರೆ, ಒಬ್ಬ ಬೆಸ್ತರ ಜಾತಿಯಲ್ಲಿ ಹುಟ್ಟಿರುವವನು, "ನಾನು ಕೇವಲ ಮೀನುಗಳನ್ನು ಮಾತ್ರ ಕೊಲ್ಲುತ್ತೇನೆ, ಇತರ ಯಾವ ಪ್ರಾಣಿಗಳನ್ನೂ ಕೊಲ್ಲುವುದಿಲ್ಲ" ಎಂದು ಹೇಳಬಹುದು. ಆದರೆ ಮೀನುಗಳನ್ನು ಕೊಲ್ಲುವುದು ನಿಸ್ಸಂದೇಹವಾಗಿಯೂ ಒಂದು ಹಿಂಸೆಯಾಗಿದೆ. ಇದಕ್ಕೆ ಜಾತಿಯ ಅಪವಾದ ಇಲ್ಲ. ಎಂದರೆ ಬೆಸ್ತರು ಮೀನುಕೊಂದರೆ ಅದು ಹಿಂಸೆಯಲ್ಲ

ಎಂದು ಹೇಳಲಿಕ್ಕೆ ಸಾಧ್ಯವಿಲ್ಲ. ಅಥವಾ ಒಬ್ಬ ವ್ಯಕ್ತಿಯು ಎಲ್ಲಿ ವಿದ್ಯೆ ಮತ್ತು ಧರ್ಮದ ಪ್ರಚಾರವು ನಡೆಯುತ್ತದೆಯೋ, ಅಲ್ಲಿ ತಾನು ಹಿಂಸೆ ಮಾಡುವುದಿಲ್ಲ (ಅನ್ಯತ್ರಮಾಡುತ್ತೇನೆ)ಎಂದು ಹೇಳಬಹುದು. ಆದರೆ, ಹಿಂಸೆಗೆ ದೇಶ, ಎಂದರೆ ಸ್ಥಳದ ಅಪವಾದ ಇಲ್ಲದಿರುವುದರಿಂದ ಮತ್ತು ಹಿಂಸೆಯ ಕಾರ್ಯ, ಅದನ್ನು ಯಾವ ಸ್ಥಳದಲ್ಲಿ ಮಾಡಿದರೂ ಅದು ಹಿಂಸೆಯೇ ಆಗಿರುವುದರಿಂದ ಮತ್ತು ಹಿಂಸಕನು ಎಲ್ಲಾ ಕಡೆಗಳಲ್ಲಿ ಹಿಂಸೆ ಮಾಡುತ್ತಿದ್ದು, ಕೇವಲ ಒಂದು ವಿಶೇಷ ಸ್ಥಳದಲ್ಲಿ ಮಾತ್ರ ಹಿಂಸೆಯ ಕಾರ್ಯವನ್ನು ಮಾಡದೆ ಇದ್ದರೂ ಕೂಡ, ಎಂದರೆ ಒಂದು ವಿಶಿಷ್ಟ ಸ್ಥಳದಲ್ಲಿ ಮಾತ್ರ ಅವನು ಅಹಿಂಸೆಯ ಪಾಲನೆಯನ್ನು ಮಾಡಿದರೂ ಕೂಡ, ಅವನು ಅಹಿಂಸೆಯ ನಿಯಮವನ್ನು ಪಾಲನೆಮಾಡಿದಂತೆ ಆಗುವುದಿಲ್ಲ. ಇದೇ ರೀತಿಯಲ್ಲಿ ಕೆಲವರು ತಾವು ಅಮವಾಸ್ಯೆ (ಹುಣ್ಣಿಮೆ, ಶ್ರೀಕೃಷ್ಣಜನ್ಮಾಷ್ಟಮಿ, ಗಣೇಶ ಚತುರ್ಥಿ) ಮೊದಲಾದ ಹಬ್ಬದ ದಿನಗಳಲ್ಲಿ ಹಿಂಸೆ ಮಾಡುವುದಿಲ್ಲ, ಯಾವ ಪ್ರಾಣಿಯನ್ನೂ ಕೊಲ್ಲುವುದಿಲ್ಲ; (ಅಹಿಂಸೆಯ ಪಾಲನೆ ಮಾಡುತ್ತೇವೆ. ಮಾಂಸಾಹಾರವನ್ನು ಸೇವಿಸುವುದಿಲ್ಲ) ಎಂದು ಹೇಳಿದರೆ ಅವರನ್ನು ಅಹಿಂಸಾವ್ರತದ ಪಾಲನೆ ಮಾಡುವವರು ಎಂದು ಹೇಳಲಿಕ್ಕೆ ಸಾಧ್ಯವಿಲ್ಲ. ಅಥವಾ, ತಾನು ಇಂತಹ ವಿಶೇಷ ಸ್ಥಿತಿಯಲ್ಲಿ ಮಾತ್ರ ಹಿಂಸೆ ಮಾಡುತ್ತೇನೆ, ಬೇರೆ ಯಾವಾಗಲೂ ಖಂಡಿತವಾಗಿಯೂ ಯಾರನ್ನೂ ನೋಯಿಸು ವುದಿಲ್ಲ ಎಂದೂ ಯಾರಾದರೂ ಹೇಳಬಹುದು. ಈ ರೀತಿಯ ಅಹಿಂಸಕರನ್ನು ಅಹಿಂಸಕರೆಂದು ಹೇಳಲಿಕ್ಕೆ ಆಗುವುದಿಲ್ಲ.

ಇದೇ ನಿಯಮವು ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಮೊದಲಾದ ವಿಷಯಗಳಲ್ಲೂ ಕಾರ್ಯಮಾಡುತ್ತದೆ, ಎಂದು ನಾವು ತಿಳಿದುಕೊಳ್ಳಬೇಕು. ಸಂಕ್ಷೇಪದಲ್ಲಿ ಹೇಳುವುದೇನೆಂದರೆ, ಯೋಗದ ಈ 'ಯಮ'ಗಳ ಪಾಲನೆಗೆ ಜಾತಿ, ದೇಶ, ಕಾಲ ಅಥವಾ ಸಮಯದ ಅಪವಾದ (Exception) ಇರುವುದಿಲ್ಲ. ಎಲ್ಲಾ ದೇಶಗಳಲ್ಲಿ, ಎಲ್ಲಾ ಸಮಯದಲ್ಲಿ, ಎಲ್ಲಾ ಪರಿಸ್ಥಿತಿಯಲ್ಲಿ, ಎಲ್ಲರೂ ಈ 'ಯಮ'ಗಳ ಪಾಲನೆ ಮಾಡತಕ್ಕದ್ದು. ಆದುದರಿಂದ ಇವುಗಳ ಪಾಲನೆಯ ವ್ರತವನ್ನು ಮಹಾವ್ರತ ಎಂದು ಹೇಳುತ್ತಾರೆ.

## ಯೋಗದ ದ್ವಿತೀಯ ಅಂಗ ನಿಯಮ

**ಶೌಚ ಸಂತೋಷ ತಪಃ ಸ್ವಾಧ್ಯಾಯೇಶ್ವರ ಪ್ರಣಿಧಾನಾನಿ ನಿಯಮಾಃ ॥**

[ಯೋಗದರ್ಶನ 2-32]

ಶೌಚ, ಸಂತೋಷ, ತಪಸ್ಸು ಸ್ವಾಧ್ಯಾಯ ಮತ್ತು ಈಶ್ವರ ಪ್ರಣಿಧಾನ —

ಇವುಗಳನ್ನು ಯೋಗದರ್ಶನದಲ್ಲಿ 'ನಿಯಮ'ಗಳೆಂದು ಹೇಳುತ್ತಾರೆ. ಈ ಐದು ನಿಯಮಗಳು, ಒಟ್ಟಿನಲ್ಲಿ ಯೋಗದ ಎರಡನೆಯ ಅಂಗವೆನಿಸಿಕೊಂಡಿವೆ. ತನ್ನ ಶರೀರ, ಅನ್ನಪಾನಾದಿಗಳು, ಸ್ಥಾನ (ಪರಿಸರ) ಧನೋಪಾರ್ಜನೆ ಇತ್ಯಾದಿಗಳ ಪವಿತ್ರತೆ ಅಥವಾ ಶುದ್ಧತೆಯ ನಿಯಮವನ್ನು ಶೌಚವೆನ್ನುತ್ತಾರೆ. ಇದು ಬಾಹ್ಯ ಶುದ್ಧಿಯ ವಿಷಯವಾಗಿದೆ. ಅಸತ್ಯ, ಪರರಿಗೆ ಹಾನಿ ಬಯಸುವುದು ಈ ಮೊದಲಾದ ಮಾನಸಿಕ ಮಾಲಿನ್ಯಕ್ಕೆ ಕಾರಣವಾದ ವಿಷಯಗಳು ಅಶುದ್ಧ ಅಥವಾ ಅಪವಿತ್ರವಾಗಿವೆ. ಇವುಗಳಿಂದ ತನ್ನನ್ನು ತಾನೇ ರಕ್ಷಿಸಿಕೊಂಡು ಬರುವುದು ಆಂತರಿಕ ಶುದ್ಧಿಯ ವಿಷಯವಾಗಿದೆ. (ಈ ರೀತಿ ಶೌಚ, ಎಂದರೆ ಶುದ್ಧತೆಯು, ಬಾಹ್ಯ ಮತ್ತು ಆಂತರಿಕವೆಂದು ಎರಡು ವಿಧವಾಗಿದೆ. ಇವೆರಡೂ ಸಮಾನವಾಗಿ ಮುಖ್ಯವಾಗಿವೆ.)

ಸಂತೋಷವೆಂದರೆ, ತೃಪ್ತಿ, ಯಥಾ ಶಕ್ತಿ ಪುರುಷಾರ್ಥ (ಉತ್ತಮ ಕಾರ್ಯಗಳನ್ನು) ಮಾಡಿ, ಅದರಿಂದ ಸಹಜವಾಗಿ ಎಷ್ಟು ಪ್ರತಿ ಫಲವು ದೊರೆಯುತ್ತದೆಯೋ, ಅದಕ್ಕಿಂತ ಹೆಚ್ಚುಬೇಕೆನ್ನುವ ಅಭಿಲಾಶೆ ಅಥವಾ ಲೋಭವು ಮನಸ್ಸಿನಲ್ಲಿ ಮೂಡದಿರುವುದು ಸಂತೋಷದ ಲಕ್ಷಣವಾಗಿದೆ. (ಎಂದರೆ ನನ್ನ ಪಾಲಿಗೆ ಸಲ್ಲದಿರುವುದನ್ನು ಬಯಸುವುದು ಅಥವಾ, ತಾನು ನ್ಯಾಯವಾಗಿ ಯಾವುದನ್ನು ಪಡೆಯುವುದಕ್ಕೆ ಅರ್ಹನಲ್ಲವೋ, ಅದನ್ನು ಪಡೆಯಲಿಕ್ಕೆ ಪ್ರಯತ್ನಿಸುವುದು ಲೋಭದ ಲಕ್ಷಣವಾಗಿದೆ. ಈ ಲೋಭದ ವಿಷಯ ಧನ, ಸಂಪತ್ತು, ಸ್ಥಾನ, ಮಾನ, ಅಧಿಕಾರ ಕೀರ್ತಿ ಮೊದಲಾದ ಬೇರೆ ಬೇರೆ ರೂಪದಲ್ಲಿ ಇರುವುದಕ್ಕೆ ಸಾಧ್ಯವಿದೆ. ಈ ಲೋಭವೇ ಎಲ್ಲಾ ಅನರ್ಥಗಳಿಗೂ ಕಾರಣವಾಗಿದೆ).



ಹಾನಿ, ಲಾಭ, ಮಾನ, ಅಪಮಾನ, ಸುಖ, ದುಃಖ, ಶೀತ, ಉಷ್ಣ ಮೊದಲಾದ ತಡೆಗಳು ಬಂದರೂ ಕೂಡ ತನ್ನ ಮಾರ್ಗದಲ್ಲಿ ವಿಚಲಿತನಾಗದೆ ಮುಂದು ವರೆಯುವುದಕ್ಕೆ ತಪಸ್ಸು ಎಂದು ಹೇಳುತ್ತಾರೆ.

ಮೋಕ್ಷಶಾಸ್ತ್ರಗಳ ಅಧ್ಯಯನ ಮತ್ತು ಪ್ರಣವ ಮಂತ್ರ 'ಓಂ' ಕಾರದ ಜಪ ಮಾಡುವುದನ್ನು ಸ್ವಾಧ್ಯಾಯ ಎಂದು ಹೇಳುತ್ತಾರೆ.

ಪರಮ ಗುರುವಾಗಿರುವ ಪರಮಾತ್ಮನಿಗೆ ಎಲ್ಲಾ ಕರ್ಮಗಳನ್ನೂ ಸಮರ್ಪಿಸುವುದು (ಅವನೇ ನಮ್ಮ ಸ್ವಾಮಿ ಎಂಬ ಭಾವನೆಯಿಂದ ತಮ್ಮ ಕರ್ತವ್ಯ ಕರ್ಮಗಳನ್ನು ಮಾಡುತ್ತಾ ಹೋಗುವುದು) ಮತ್ತು ಆ ಕರ್ಮಗಳ ಯಾವ ರೀತಿಯ ಲೌಕಿಕ ಫಲವನ್ನೂ ಬಯಸದೆ ಇರುವುದು ಈಶ್ವರ ಪ್ರಣಿಧಾನವಾಗಿದೆ. ಯೋಗಾಭ್ಯಾಸವು ಫಲಕಾರಿಯಾಗಬೇಕಾದರೆ, 'ಯಮ'ಗಳಂತೆ, ಈ ನಿಯಮಗಳ ಪಾಲನೆಯೂ ಅತ್ಯಾವಶ್ಯಕವಾಗಿದೆ.

ಯಮ ನಿಯಮಾದಿಗಳ ಪಾಲನೆಯ ಮಾರ್ಗದಲ್ಲಿ ಬರುವ ವಿಘ್ನಗಳು ಮತ್ತು ಆ ವಿಘ್ನಗಳನ್ನು ದೂರಮಾಡುವ ಉಪಾಯಗಳು :

**ವಿತರ್ಕ - ಬಾಧನೇ ಪ್ರತಿಪಕ್ಷ ಭಾವನಮ್ ॥** [ಯೋಗದರ್ಶನ 2-33]

ಅರ್ಥಾತ್, ವಿತರ್ಕಗಳ ಮೂಲಕ (ಯಮ - ನಿಯಮಾದಿಗಳ ಪಾಲನೆಯ ಮಾರ್ಗದಲ್ಲಿ) ಬಾಧಕಗಳು ಬಂದಾಗ ತದ್ವಿರುದ್ಧವಾಗಿ, ಪ್ರತಿಪಕ್ಷ ಭಾವನೆಯನ್ನು ಮನಸ್ಸಿನಲ್ಲಿ ತಾಳಬೇಕು. ವಿತರ್ಕವೆಂದರೆ, ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯೆ ಮತ್ತು ಅಪರಿಗ್ರಹ, ಇವುಗಳಿಗೆ ವಿರುದ್ಧವಾಗಿ ಹಿಂಸೆ, ಅಸತ್ಯ, ಸ್ತೇಯ, ಭೋಗ ಮತ್ತು ಪರಿಗ್ರಹದ ಇಚ್ಛೆಯು ಮನಸ್ಸಿನಲ್ಲಿ ಉತ್ಪನ್ನವಾಗುವುದು, ಮತ್ತು ತದನುಸಾರವಾಗಿ ನಡೆಯುವುದು. ಅಶುಭ ಸಂಸ್ಕಾರ ಮತ್ತು ಕುಸಂಗಗಳ ದೆಸೆಯಿಂದಾಗಿ ಮನುಷ್ಯರಲ್ಲಿ ಅವರು ತಾವು ಯಮ - ನಿಯಮಾದಿಗಳನ್ನು ಪಾಲನೆ ಮಾಡಬೇಕೆಂದು ಎಣಿಸಿದಾಗ, ಅದಕ್ಕೆ ವಿರುದ್ಧವಾಗಿ ಇಂತಹ ವಿತರ್ಕಗಳು ಉತ್ಪನ್ನವಾಗುತ್ತವೆ. ಈ ವಿತರ್ಕಗಳನ್ನು ಜಯಿಸುವ ಉಪಾಯವೇನೆಂದರೆ, ಇವುಗಳ ಬಗ್ಗೆ ಮನಸ್ಸಿನಲ್ಲಿ ವಿರೋಧ ಅಥವಾ ವೈರಭಾವನೆಯನ್ನು ತಾಳುವುದು. ಇದನ್ನೇ ಪ್ರತಿಪಕ್ಷ ಭಾವನೆ ಎನ್ನುತ್ತಾರೆ. ಇದರ ತಾತ್ಪರ್ಯವೇನೆಂದರೆ, ಸಾಧಕನ ಮನಸ್ಸಿನಲ್ಲಿ ಯಮ-ನಿಯಮಾದಿಗಳ ಪಾಲನೆಯನ್ನು ಬಿಟ್ಟುಬಿಡಬೇಕೆಂಬ (ಅಥವಾ ಇದರಲ್ಲಿ ಸ್ವಲ್ಪ ಒಪ್ಪಂದವನ್ನು Compromise ಮಾಡಿಕೊಳ್ಳುವ) ವಿಚಾರವು ಬಂದಾಗ, ಅವನು ಶಾಂತಚಿತ್ತನಾಗಿ, ಈ ರೀತಿಯ ವಿತರ್ಕ ಅಥವಾ ವಿರುದ್ಧ ಆಚರಣೆಯಿಂದ ಆಗಬಹುದಾದ ಅನರ್ಥಗಳ ಬಗ್ಗೆ ಯೋಚಿಸಿಕೊಳ್ಳಬೇಕು. ಮತ್ತು ಇಂತಹ ಅನಿಷ್ಟಕಾರಿಯಾದ ಇಚ್ಛೆಗೆ ಸೋಲದೆ ಅದನ್ನು ವಿರೋಧಿಸುವ ಸಂಕಲ್ಪವನ್ನು ದೃಢಪಡಿಸಬೇಕು.

ಮೇಲೆ ಹೇಳಿದಂತೆ, ಅಶುಭ ಸಂಸ್ಕಾರ ಮತ್ತು ಕುಸಂಗಗಳ ದೆಶೆಯಿಂದ ಮಾತ್ರವಲ್ಲ, ಅವಿದ್ಯೆಯ ಕಾರಣದಿಂದಲೂ ಯೋಗಾಭ್ಯಾಸ ಮಾಡುವ ವ್ಯಕ್ತಿಯು ಯಮ-ನಿಯಮಗಳ ಪಾಲನೆಯಿಂದ ಏನೂ ಲಾಭವಿಲ್ಲ, ಇದನ್ನು ಬಿಟ್ಟರೆ ಲಾಭ ಎಂದು ತಿಳಿದುಕೊಳ್ಳುತ್ತಾನೆ. ಅವಿದ್ಯೆಯ ದೆಶೆಯಿಂದಲೇ ಮನುಷ್ಯನಲ್ಲಿ ಲೋಭ, ಮೋಹ ಮತ್ತು ಕ್ರೋಧಗಳು ಉತ್ಪನ್ನವಾಗುತ್ತವೆ. ಇಂತಹ ಸಂಕಟದ ಸಂದರ್ಭದಲ್ಲಿ ಸಾಧಕನು ಏನು ಮಾಡಬೇಕು ಎಂಬ ಪ್ರಶ್ನೆ ಹುಟ್ಟುತ್ತದೆ. ಇದಕ್ಕೆ ಮೇಲಿನ ಸೂತ್ರದಲ್ಲಿ ಋಷಿಗಳು ಕೊಟ್ಟಿರುವ ಉತ್ತರ "ಪ್ರತಿಪಕ್ಷ ಭಾವನೆ" ಎಂದರೆ ಅಹಿಂಸಾದಿಗಳಿಗೆ ವಿರುದ್ಧವಾಗಿರುವುದರಿಂದ ಹಿಂಸಾದಿಗಳು ವಿತರ್ಕಗಳಾಗಿವೆ. ಹಿಂಸೆಯಲ್ಲಿ, ತಾನಾಗಿಯೇ ಮಾಡುವ ಹಿಂಸೆಗೆ ಮಾತ್ರವಲ್ಲದೆ, ಇತರರಿಂದ ಮಾಡಿಸುವ ಹಿಂಸೆಗೂ ಮಾಡಿಸು

ವವನು ಹೊಣೆಗಾರನಾಗಿರುತ್ತಾನೆ ; ಹಿಂಸಕನಿಗೆ ಸಮರ್ಥನೆ ಮಾಡುವವನಿಗೂ ಹಿಂಸೆಯ ದೋಷವು ಬರುತ್ತದೆ, ಎಂಬುದನ್ನು ತಿಳಿದುಕೊಳ್ಳಬೇಕು. ಈ ರೀತಿ, ಸತ್ಯ ಮೊದಲಾದ ಯಮ - ನಿಯಮಗಳಿಗೆ ವಿರುದ್ಧವಾಗಿರುವ ಆಚಾರ, ವಿಚಾರಗಳೆಲ್ಲಾ ವಿತರ್ಕಗಳಾಗಿವೆ.

ಯಮ - ನಿಯಮಗಳಿಗೆ ವಿರುದ್ಧವಾದ ಆಚರಣೆಯಲ್ಲಿ ತಾರತಮ್ಯವು ಸ್ವಾಭಾವಿಕವಾಗಿದೆ. ಕೆಲವು ಕಡೆಗಳಲ್ಲಿ ಇದು ಬಹಳ ಕಡಿಮೆ ಇರಬಹುದು, ಇನ್ನು ಕೆಲವು ಕಡೆಗಳಲ್ಲಿ ಇದು ಸ್ವಲ್ಪ ಹೆಚ್ಚು ಇರಬಹುದು, ಅಥವಾ ಕೆಲವು ಕಡೆಗಳಲ್ಲಿ ಇದು ಮಧ್ಯಮವಾಗಿಯೂ ಇರಬಹುದು. ಇದಕ್ಕನುಸಾರವಾಗಿಯೇ, ದುಃಖ ಮತ್ತು ಅಜ್ಞಾನರೂಪೀ ಪ್ರತಿಫಲವೂ ಕಂಡು ಬರುತ್ತದೆ. ಅಂತೂ, ವಿತರ್ಕದಿಂದ ಅನರ್ಥವಾಗುವುದು ನಿಶ್ಚಿತ. ಇದನ್ನೆಲ್ಲಾ ವಿಚಾರಿಸಿ, ಸಾಧಕನಾದವನು ತನ್ನ ಯಮ - ನಿಯಮಾದಿಗಳ ಪಾಲನೆಯಲ್ಲಿ ಪ್ರಮಾದವನ್ನು ಮಾಡಬಾರದು. ಮಾತ್ರವಲ್ಲ ಇದಕ್ಕೆ ವಿರುದ್ಧವಾಗಿರುವಂತಹ ವಿಚಾರಗಳನ್ನು ಖಂಡಿಸಲೂ ಹಿಂಜರಿಯಬಾರದು, ಯಾವಾಗಲೂ, ಇದೇ ರೀತಿ ಮಾಡುತ್ತಾ ಹೋದರೆ ಇಂತಹ ವಿರೋಧೀ ವಿಚಾರಗಳು ಮನಸ್ಸಿನಲ್ಲಿ ಬರುವುದು ನಿಂತು ಹೋಗುತ್ತದೆ, ಮತ್ತು ಸಾಧಕನು ವಿಜಯಿಯಾಗುತ್ತಾನೆ.

ಅಶುಭ ವಿಚಾರಗಳನ್ನು ದೂರ ಮಾಡುವುದಕ್ಕೆ ನಿಜವಾಗಿಯೂ ಬಹು ದೊಡ್ಡ ಪ್ರಯಾಸವನ್ನು ಮಾಡಬೇಕಾಗುತ್ತದೆ. ಆದರೂ ಕೂಡ, ಅನೇಕ ಬಾರಿ ಸಾಧಕನು ವಿಫಲನಾಗುತ್ತಾನೆ. ಇದರಿಂದ ಅವನು ನಿರಾಶನಾಗಬಾರದು. ಯಾಕೆಂದರೆ, ನಿರಾಶೆಯಿಂದ ಯಾವಾಗಲೂ ಹಾನಿಯಾಗುತ್ತದೆಯೇ ಹೊರತು, ಏನೂ ಲಾಭವಾಗುವುದಿಲ್ಲ. ಪ್ರಯತ್ನ ಮಾಡುತ್ತಾ ಹೋದರೆ ಯಾವಾಗಲಾದರೂ ಒಂದು ದಿನ ಸಫಲತೆಯು ಕೈಗೆ ಬರುವುದು ನಿಶ್ಚಿತ. ಆದರೂ ಕೂಡ ಸಾಧಕನು ಒಂದು ಮಾತನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಅದೇನೆಂದರೆ, ಜ್ಞಾನ ಮತ್ತು ವೈರಾಗ್ಯವು ಇಲ್ಲದಿದ್ದರೆ, ಯೋಗಮಾರ್ಗದಲ್ಲಿ ಸಫಲತೆಯು ಖಂಡಿತವಾಗಿಯೂ ಸಿಗಲಾರದು. ಮನುಷ್ಯನು ತನ್ನ ಉನ್ನತಿಗೆ ಕೇವಲ ಪ್ರಯತ್ನಮಾಡುತ್ತಾ ಹೋದರೆ ಸಾಲದು, ಅವನು ನಿಜವಾಗಿಯೂ ಉನ್ನತಿಯನ್ನು ಹೊಂದಬೇಕಾದರೆ, ಅವನ ಪ್ರಯತ್ನವು ಜ್ಞಾನಪೂರ್ವಕವಾಗಿರಬೇಕು. ಆದುದರಿಂದ, ಒಟ್ಟಿನಲ್ಲಿ ಹೇಳುವುದಾದರೆ ವಿವೇಕ, ವೈರಾಗ್ಯ ಮತ್ತು ಅಭ್ಯಾಸ, ಇವು ಮೂರು ಬಟ್ಟು ಸೇರಿ, ಯೋಗಸಿದ್ಧಿಯ ಪ್ರಯತ್ನದಲ್ಲಿ ಅತ್ಯಾವಶ್ಯಕ ಸಲಕರಣೆಗಳಾಗಿವೆ, ಎಂದು ನಾವು ತಿಳಿದುಕೊಳ್ಳಬೇಕು.

## ಯಮ-ನಿಯಮಗಳ ಪಾಲನೆಯಿಂದಾಗುವ ಲಾಭಗಳು

ಯಮ-ನಿಯಮಗಳ ಪಾಲನೆಯಿಂದ ಮನುಷ್ಯನಿಗೆ ಅನೇಕ ಲಾಭಗಳಿವೆ. ಉದಾಹರಣೆಗಾಗಿ ಹೇಳುವುದಾದರೆ,

**"ಅಹಿಂಸಾ ಪ್ರತಿಷ್ಠಾಯಾಂ ತತ್ ಸನ್ನಿಧೌವೈರತ್ಯಾಗಃ ॥**

[ಯೋಗದರ್ಶನ 2-35]

ಅರ್ಥಾತ್, ಮಾನವನ ಜೀವನದಲ್ಲಿ ಅಹಿಂಸಾ ಧರ್ಮವು ಸ್ಥಿರವಾದಾಗ, ಅವನ ಮನಸ್ಸಿನಲ್ಲಿ ಶತ್ರುತ್ವದ ಭಾವನೆಯು ಉಳಿಯುವುದಿಲ್ಲ. ಎಂದರೆ, ಅಹಿಂಸಾ ಮನೋಧರ್ಮವು ಅವನ ವ್ಯಕ್ತಿತ್ವದ ಅಂಗವಾಗಿಬಿಡುತ್ತದೆ. (ಅವನು ವಿಶ್ವದ ಸರ್ವ ಪ್ರಾಣಿಗಳನ್ನೂ ಮಿತ್ರತ್ವದ ದೃಷ್ಟಿಯಿಂದ ನೋಡುತ್ತಾನೆ). ಇಷ್ಟು ಮಾತ್ರವಲ್ಲ, ಅವನ ಸಂಪರ್ಕದಿಂದ ಇತರ ಜನರ ಮನಸ್ಸಿನಲ್ಲಿರುವ ವೈರಭಾವವೂ ಮಾಯವಾಗಿ ಬಿಡುತ್ತದೆ.

ಅಹಿಂಸಾ ಭಾವವು ಸಿದ್ಧಿಸಿದಾಗ, ಯೋಗಿಯ ಮೇಲೆ ಎಲ್ಲಾ ಪ್ರಾಣಿಗಳೂ ತಮ್ಮ ವೈರಭಾವವನ್ನು ಬಿಟ್ಟುಬಿಡುತ್ತವೆ, ಯೆಂದು ಕೆಲವರ ಅಭಿಪ್ರಾಯವಾಗಿದೆ. ಇದು ಅಷ್ಟು ಸರಿಯಲ್ಲ. ಯಾಕೆಂದರೆ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಈ ವಿಚಾರದ ಖಂಡನೆಯಾಗುತ್ತದೆ.

**ಪ್ರಶ್ನೆ :–** **"ಸರ್ವಪ್ರಾಣಿನಾಂಭವತಿ"** ಎಂದು ವ್ಯಾಸ ಭಾಷೆಯಲ್ಲಿ ಹೇಳಿದೆಯಲ್ಲ?

**ಉತ್ತರ:–** ಇದರ ಅಭಿಪ್ರಾಯ, ಎಲ್ಲಾ ಪ್ರಾಣಿಗಳೂ ವೈರಭಾವನೆಯನ್ನು ಬಿಟ್ಟುಬಿಡುತ್ತವೆ ಎಂದಲ್ಲ, ಇದರ ಅಭಿಪ್ರಾಯ ಕೇವಲ ಇಷ್ಟೇ ಆಗಿದೆ: ಯಾವ ವ್ಯಕ್ತಿಯು ಅಹಿಂಸಾಧರ್ಮದ ಪಾಲನೆಯನ್ನು ಮಾಡುವವನ ಸಂಗವನ್ನು ಮಾಡುತ್ತಾನೆಯೋ, ಅವನ ಮಾತನ್ನು ಕೇಳುತ್ತಾನೆಯೋ, ಅವನ ವ್ಯವಹಾರವನ್ನು ನೋಡುತ್ತಾನೆಯೋ, ಅವನು ಯಾರಿಗೂ ಕೇಡನ್ನು ಬಯಸುವುದಿಲ್ಲ, ಎಂಬುದನ್ನು ನಿಶ್ಚಿತವಾಗಿ ತಿಳಿದುಕೊಳ್ಳುತಾನೆಯೋ, ಇದರಿಂದ, ಆ ವ್ಯಕ್ತಿಯ ಮೇಲೆಯೂ ಒಳ್ಳೆಯ ಪ್ರಭಾವ, ಅಥವಾ ಉತ್ತಮ ಸಂಸ್ಕಾರವು ಬಿದ್ದು, ಕ್ರಮೇಣ ಆತನಲ್ಲಿದ್ದ ವೈರಭಾವವೂ ಕಡಿಮೆಯಾಗುತ್ತಾ ಹೋಗುತ್ತದೆ. ಯಾರಲ್ಲಿ ಇಂತಹ ವೈರಭಾವವು ಅಧಿಕವಾಗಿ ಬೆಳೆದು ಬಂದಿದೆಯೋ ; ಮತ್ತು ಯಾರ ಅಶುಭ ಸಂಸ್ಕಾರವು ಬಹಳ ಪ್ರಬಲವಾಗಿದೆಯೋ, ಅವರ ವೈರಭಾವನೆಯು ಅಥವಾ ಅಶುಭ ಸಂಸ್ಕಾರವು, ದೂರವಾಗುವುದು

  

ಬಹಳ ನಿಧಾನವಾಗಿ, ಮತ್ತು ಯಾರ ಸಂಸ್ಕಾರವು ಅತ್ಯಂತ ವಿಪರೀತವಾಗಿದೆಯೋ, ಅಥವಾ ಅಜ್ಞಾನ ಹಾಗೂ ಸ್ವಾರ್ಥ ಪೂರ್ಣವಾಗಿದೆಯೋ, ಅವರ ವೈರಭಾವವು, ಅಹಿಂಸಾ ಧರ್ಮದ ಪಾಲನೆಯನ್ನು ಮಾಡುವವರ ಸಂಪರ್ಕಕ್ಕೆ ಬಂದ ಕಾರಣದಿಂದ ದೂರವಾಗುವುದು ಬಹಳ ಕಷ್ಟ ಎಂದು ತಿಳಿದುಕೊಳ್ಳಬೇಕು. ಹೆಚ್ಚು ಯಾಕೆ? ಕೆಲವು ಪ್ರಾಣಿಗಳು(ಮನುಷ್ಯರನ್ನು ಸೇರಿಸಿ) ವೈರತ್ಯಾಗವನ್ನು ಮಾಡುವ ಬದಲು ಯೋಗಿಗಳ ಪ್ರಾಣವನ್ನು ತೆಗೆಯುವುದನ್ನೂ ನಾವು ನೋಡಿರುತ್ತೇವೆ. ಈ ಉದಾಹರಣೆಯೂ ಸಾಕಾಗದಿದ್ದರೆ, ನಾವು ಪರಮಾತ್ಮನನ್ನೂ ವೈರಭಾವದಿಂದ ನೋಡುವ ವ್ಯಕ್ತಿಗಳನ್ನು ಜೀವನದಲ್ಲಿ ಕಾಣಬಹುದು. ದೇವರನ್ನು ಬಿಡದವರು ಮಾನವರನ್ನು ಬಿಡುವರೆ? ಅಂತೂ, ಇದೊಂದು ಮಾತು ನಿಶ್ಚಿತಃ ಸಂಸ್ಕಾರಗಳು ಎಲ್ಲರ ಮೇಲೆಯೂ ಸಮಾನವಾಗಿ ಬೀಳುವುದಿಲ್ಲ. ಓದುಗರು ಈ ವಿಷಯದ ಮೇಲೆ ಹೆಚ್ಚಿನ ವಿವರಣೆಗಳನ್ನು ಮುಂದೆ ಈ ಪುಸ್ತಕದ ಉತ್ತರಾರ್ಧದಲ್ಲಿ ಮೂರನೆಯ ಲೇಖನದಲ್ಲಿ ನೋಡಬಹುದು.

ಅಹಿಂಸಾಧರ್ಮದ ಲಾಭವನ್ನು ನೋಡಿಯಾಯಿತು. ಈಗ ಸತ್ಯಧರ್ಮದ ಫಲವನ್ನು ನೋಡುವ.

**ಸತ್ಯಪ್ರತಿಷ್ಠಾಯಾಂ ಕ್ರಿಯಾ ಫಲಾಶ್ರಯತ್ವಂ ॥** [ಯೋಗದರ್ಶನ 2-36]
ಅರ್ಥಾತ್, ಸತ್ಯಾಚರಣೆಯಿಂದ, ಎಂದರೆ, ನಿಶ್ಚಯ ಪೂರ್ವಕವಾಗಿ ಕೇವಲ ಸತ್ಯವನ್ನೇ ಸ್ವೀಕರಿಸುವುದು, ಸತ್ಯವನ್ನೇ ಹೇಳುವುದು ಮತ್ತು ಸತ್ಯಕ್ಕನುಸಾರವಾಗಿಯೇ ನಡೆಯುವುದು ಇದರಿಂದ, ಮನುಷ್ಯನ ಎಲ್ಲಾ ಉತ್ತಮ ಕಾರ್ಯಗಳು ಖಂಡಿತವಾಗಿ ಸಫಲವಾಗುತ್ತವೆ.

ಸತ್ಯದ ವಿಷಯದಲ್ಲಿಯೂ ಕೆಲವರಿಗೆ ತುಂಬಾ ಭ್ರಾಂತಿ ಇದೆ. ಒಬ್ಬ ಸತ್ಯವಾದಿಯೋಗಿ ಪುರುಷನು ಏನೆಲ್ಲಾ ಹೇಳುತ್ತಾನೆಯೋ ಅದೆಲ್ಲಾ ನಿಜವಾಗುತ್ತದೆ. ಅವನು ಬೆಂಕಿಯು 'ತಣ್ಣಗಾಗಲಿ ಎಂದು ಹೇಳಿದರೆ, ಬೆಂಕಿಯು ತಣ್ಣಗಾಗುತ್ತದೆ; ಸಚೇತನ ವ್ಯಕ್ತಿಯು ಜಡವಸ್ತುವಾಗಲಿ ಎಂದು ಹೇಳಿದರೆ, ಆ ವ್ಯಕ್ತಿಯು ಜಡವಸ್ತುವಾಗಿ ಬಿಡುತ್ತಾನೆ, ಇತ್ಯಾದಿ. ಆದರೆ, ಇವೆಲ್ಲಾ ಅಸಂಭವ, ಯಾಕೆಂದರೆ, ಒಬ್ಬ ಯೋಗಿಯು ಇನ್ನೊಬ್ಬ ಪಾಪಿಯನ್ನು ನೋಡಿ, ಅವನನ್ನು "ನೀನು ಪುಣ್ಯಾತ್ಮನಾಗು" ಎಂದು ಹೇಳಿದ ಕೂಡಲೇ, ಆ ಪಾಪಿಯು ಪುಣ್ಯಾತ್ಮ ನಾಗುತ್ತಾನೆಯೆ? ಇಲ್ಲ.

ಮೊದಲನೆಯದಾಗಿ, ಇಲ್ಲಿ ನಾವು ತಿಳಿದುಕೊಳ್ಳಬೇಕಾದ ವಿಷಯವೇನೆಂದರೆ, ಒಬ್ಬ ನಿಜವಾದ ಯೋಗಿಯು ಯಾವಾಗಲೂ ಸತ್ಯಾಸತ್ಯದ ಪರೀಕ್ಷೆಮಾಡಿ ನ್ಯಾಯವಾದ ಮಾತನ್ನೇ ಹೇಳುತ್ತಾನೆ. ಅಸಂಭವವಾಗಿರುವ ಮಾತುಗಳನ್ನು ಅವನು ಹೇಳುವುದಿಲ್ಲ. ಆದರೂ ಕೂಡ ಯೋಗಿಯ ಮಾತನ್ನು ಕೇಳಿದ ಕೂಡಲೇ ಅದು ಸರಿಯಾದರೂ, ಜನರೆಲ್ಲಾ ಧಾರ್ಮಿಕರಾಗುತ್ತಾರೆ, ಎಂದು ಹೇಳಲಿಕ್ಕೇ ಸಾಧ್ಯವಿಲ್ಲ. ಯಾರಿಗೆ ಉತ್ತಮ ಸಂಸ್ಕಾರವು ಸಿಕ್ಕಿರುತ್ತದೆಯೋ, ಅವರು ಯೋಗಿಯ ಮಾತನ್ನು ಗಮನಕೊಟ್ಟು ಕೇಳುತ್ತಾರೆ, ಮತ್ತು ಅದನ್ನು ನಂಬುತ್ತಾರೆ. ಯಾರ ಬುದ್ಧಿಯು ಸರಿಯಾಗಿದೆಯೋ, ಅವರ ಜೀವನದ ಮೇಲೆ, ಯೋಗಿಯ ಮಾತುಗಳ ಪ್ರಭಾವವು ಬೀಳುತ್ತದೆ. ಆದರೆ, ಎಲ್ಲರ ಮೇಲೆ ಇದು ಸಮಾನವಾಗಿ ಬೀಳುವುದಿಲ್ಲ. ಯೋಗಿಗಳು ಜನರಿಗೆ ತುಂಬಾ ಉಪದೇಶಕೊಟ್ಟಿದ್ದಾರೆ. ಜನರು ಸನ್ಮಾರ್ಗದಲ್ಲಿ ನಡೆಯಲಿ ಎಂದು; ಈ ಉದ್ದೇಶದಿಂದ ತುಂಬಾ ಗ್ರಂಥಗಳನ್ನು ಬರೆದಿದ್ದಾರೆ. ಈ ಉಪದೇಶಗಳನ್ನು ಕೇಳಿದವರೆಲ್ಲಾ, ಈ ಗ್ರಂಥಗಳನ್ನು ಓದಿದವರೆಲ್ಲಾ ಧಾರ್ಮಿಕರಾಗಿದ್ದಾರೆಯೆ? ಇಲ್ಲ (ಇದರಲ್ಲಿ ಯೋಗಿಗಳ ದೋಷವೇನೂ ಇಲ್ಲ, ದೋಷ ಜನರದ್ದು) ಆದುದರಿಂದ, ಯೋಗಿಗಳು ಅಸಂಭವವಾದುದನ್ನು ಸಂಭವವನ್ನಾಗಿ ಮಾಡುತ್ತಾರೆ, ಎಂದು ತಿಳಿದುಕೊಳ್ಳುವುದು ತಪ್ಪು. ಯಾರು ಇಂತಹ ತಪ್ಪು ತಿಳಿವಳಿಕೆಗಳ ಪ್ರಚಾರ ಮಾಡುತ್ತಾರೆಯೋ, ಅವರು ನಿಜವಾಗಿಯೂ ನೋಡಿದರೆ ಯೋಗವಿದ್ಯೆಯ ಮತ್ತು ಯೋಗಿಪುರುಷರ ನಿಂದಕರು, ಎಂದು ತಿಳಿದುಕೊಳ್ಳಬೇಕು.

**ಅಸ್ತೇಯ ಪ್ರತಿಷ್ಠಾಯಾಂ ಸರ್ವರತ್ನೋಪಸ್ಥಾನಮ್ ॥**

[ಯೋಗದರ್ಶನ 2-37]

ಅರ್ಥಾತ್, ಜನರು ಯಾವಾಗ ಮನಸಾ, ವಾಚಾ, ಕರ್ಮಣಾ, ಈ ರೀತಿ ತ್ರಿಕರಣ ಪೂರ್ವಕವಾಗಿ ಕಳ್ಳತನವನ್ನು ಸರ್ವಥಾ ಬಿಟ್ಟುಬಿಡುತ್ತಾರೆಯೋ, ಆಗ ಅವರಿಗೆ ಉತ್ತಮ ಪದಾರ್ಥಗಳು ಪ್ರಾಪ್ತವಾಗುತ್ತವೆ. ಇಲ್ಲಿ ಸತ್ಯವೇನೆಂದರೆ, ಯಾರು ಬುದ್ಧಿವಂತರೋ ಮತ್ತು ಪರಿಶ್ರಮಿಗಳೋ, ಅವರೇ ಕಳ್ಳತನವನ್ನು ಸರ್ವಥಾ ಬಿಡಲಿಕ್ಕೆ ಸಾಧ್ಯ. ಅನ್ಯರಿಗೆ ಇದು ಸಾಧ್ಯವಿಲ್ಲ. (ಎಂದರೆ ಕಳ್ಳತನ ಮಾಡುವವರು ಅಥವಾ ಅಪ್ರಾಮಾಣಿಕ ವ್ಯಕ್ತಿಗಳು ಮೂರ್ಖರು ಮತ್ತು ಆಲಸಿಗಳು ಎಂದು ಸಿದ್ಧವಾಗುತ್ತದೆ). ಪ್ರಾಮಾಣಿಕನೂ, ಪರಿಶ್ರಮಿಯೂ ಆದ ವ್ಯಕ್ತಿಗೆ ಉತ್ತಮ ಪದಾರ್ಥಗಳು ಖಂಡಿತವಾಗಿಯೂ ದೊರೆಯುತ್ತವೆ, ಮಾತ್ರವಲ್ಲ, ಅನ್ಯ ಜನರೂ ಇಂತಹ ವ್ಯಕ್ತಿಗೆ ಉತ್ತಮ ವಸ್ತುಗಳನ್ನು ಕೊಟ್ಟು ಸತ್ಕರಿಸುತ್ತಾರೆ. ಯಾವ ಮನುಷ್ಯನು ಕಳ್ಳತನ ಅಥವಾ ಮೋಸಗಾರಿಕೆಯನ್ನು ಬಿಟ್ಟು ಪರಮಾತ್ಮನ ಆಜ್ಞೆಗೆ ಅನುಸಾರವಾಗಿ

ಪರಿಶ್ರಮವನ್ನು ಮಾಡುತ್ತಾನೆಯೋ, ಅವನಿಗೆ ಪರಮಾತ್ಮನು ಜ್ಞಾನವನ್ನೂ, ಸುಖವನ್ನೂ ಕರುಣಿಸುತ್ತಾನೆ.

ಕೆಲವರಲ್ಲಿ ಒಂದು ನಂಬಿಕೆ ಇದೆ, ಏನೆಂದರೆ, ಕಳ್ಳತನವನ್ನು ಬಿಟ್ಟರೆ, ಯೋಗಿಗಳ ಬಳಿಗೆ, ಚಿನ್ನ, ಬೆಳ್ಳಿ, ಇತ್ಯಾದಿ ದ್ರವ್ಯಗಳು ತಾವಾಗಿಯೇ ಬಂದು ಸೇರಿಕೊಳ್ಳುತ್ತವೆ. ಈ ನಂಬಿಕೆಯು ನಿಜವಲ್ಲ.

**ಬ್ರಹ್ಮಚರ್ಯ ಪ್ರತಿಷ್ಠಾಯಾಂ ವೀರ್ಯಲಾಭಃ ॥** [ಯೋಗದರ್ಶನ 2-38]
ಎಂದರೆ, ಬ್ರಹ್ಮಚರ್ಯೆಯ ಪಾಲನೆಯಿಂದ ಬಲಪ್ರಾಪ್ತಿಯಾಗುತ್ತದೆ. ಬಹು ದೀರ್ಘಕಾಲ ಪರೀಕ್ಷಣೆ ಮಾಡಿ ನೋಡಿದ ನಂತರ, ಯೋಗಿಗಳು ಹೇಳಿರುವ ಮಾತಿದು. ಯಾವ ವ್ಯಕ್ತಿಯು ಬ್ರಹ್ಮಚರ್ಯೆಯ ಪಾಲನೆ ಮಾಡುತ್ತಾನೆಯೋ, ಅವನು ನಿರೋಗಿ, ಬಲಶಾಲಿ, ಮತ್ತು ದೀರ್ಘಾಯುವಾಗುತ್ತಾನೆ. ಯಾರು ತಮ್ಮ ಆಯುಷ್ಯದ ಪ್ರಾರಂಭಿಕ ನಲವತ್ತೆಂಟು ವರ್ಷಗಳ ತನಕ ಬ್ರಹ್ಮಚರ್ಯೆಯನ್ನು ಪಾಲನೆ ಮಾಡುತ್ತಾರೆಯೋ, ಅವರು ನಾಲ್ಕುನೂರು ವರ್ಷಗಳ ತನಕ ಸುಖಪೂರ್ವಕವಾಗಿ ಬಾಳಲು ಸಾಧ್ಯವಿದೆ ಎಂದು ಮಹರ್ಷಿ ದಯಾನಂದರು ಹೇಳಿದ್ದಾರೆ.

**ಅಪರಿಗ್ರಹ ಸ್ಥೈರ್ಯ ಜನ್ಮಕಥಂತಾ ಸಂಭೋಧಃ ॥** [ಯೋಗದರ್ಶನ 2-39]
ಈ ಸೂತ್ರದ ತಾತ್ಪರ್ಯವೇನೆಂದರೆ, ಯಾವಾಗ ಒಬ್ಬ ಮನುಷ್ಯನು ವಿಷಯಾಸಕ್ತಿಯಿಂದ ತನ್ನನ್ನು ತಾನೇ ರಕ್ಷಿಸಿಕೊಂಡು, ಪೂರ್ಣ ಜಿತೇಂದ್ರಿಯನಾಗಿ ಬಾಳುತ್ತಾನೆಯೋ, ಮತ್ತು ಅವನು ತಾನು ಯಾರು, ತಾನು ಎಲ್ಲಿಂದ ಬಂದಿದ್ದೇನೆ, ತನ್ನ ಕರ್ತವ್ಯವೇನು, ಎಂದರೆ, ತಾನು ಯಾವ ಕಾರ್ಯ ಮಾಡಿದರೆ, ತನ್ನ ಕಲ್ಯಾಣವಾಗಬಹುದು— ಇತ್ಯಾದಿ ಪ್ರಶ್ನೆಗಳ ಮೇಲೆ ವಿಚಾರ ಮಾಡುತ್ತಾ ಇರುತ್ತಾನೆಯೋ, ಆಗ ಅವನ ಮನಸ್ಸು ಸ್ಥಿರವಾಗುತ್ತದೆ. ಇದು ಅಪರಿಗ್ರಹದಿಂದಾಗುವ ಲಾಭವಾಗಿದೆ.

ಇವೆಲ್ಲಾ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ ಗಳೆಂಬ ಐದು ಯಮಗಳ ಪಾಲನೆಯಿಂದ ಜನರಿಗೆ ಆಗುವ ಪ್ರಯೋಜನಗಳು. ಇನ್ನು ನಿಯಮಗಳ ಪಾಲನೆಯಿಂದ ಏನು ಲಾಭ, ಎಂಬುದನ್ನು ನೋಡೋಣ.

**ಶೌಚಾತ್ ಸ್ವಾಂಗಜಿಗುಪ್ಸಾ ಪರೈರ ಸಂಸರ್ಗಃ ॥** [ಯೋಗದರ್ಶನ 2-40]
ಶೌಚದ ಪಾಲನೆ ಮಾಡಿದುದರ ಫಲವಾಗಿ ತನ್ನ ಶರೀರದ ಮೇಲೆ ಮನುಷ್ಯನಿಗೆ ಗ್ಲಾನಿ ಉತ್ಪನ್ನವಾಗುತ್ತದೆ, ಮತ್ತು ಅವನಿಗೆ ಅನ್ಯರ ಶರೀರವನ್ನು ಸ್ಪರ್ಶಮಾಡುವುದು

ಒಳ್ಳೆಯದಲ್ಲ ಎಂದೆನಿಸುತ್ತದೆ. ಎಷ್ಟರತನಕ ಒಬ್ಬ ವ್ಯಕ್ತಿಯು ತನ್ನ ಶರೀರವನ್ನು ಚೆನ್ನಾಗಿ ಶುದ್ಧಮಾಡಿ ನೋಡುವುದಿಲ್ಲವೋ, ಅಷ್ಟರ ತನಕ ಆ ವ್ಯಕ್ತಿಯು ತನ್ನ ಶರೀರವನ್ನು ಬಹಳ ಸುಂದರ ಮತ್ತು ಪವಿತ್ರವಾಗಿದೆ ಎಂದುಕೊಳ್ಳುತ್ತಾನೆ. ತನ್ನ ಶರೀರವನ್ನು ಸುಂದರವನ್ನಾಗಿ ಇಟ್ಟುಕೊಳ್ಳುವುದಕ್ಕೋಸ್ಕರ, ಅದರ ಸೇವೆಯಲ್ಲಿ ಬಿದ್ದು, ಪರಮಾತ್ಮನ ಉಪಾಸನೆ, ಸತ್ಪುರುಷರ ಸಂಗ, ಸ್ವಾಧ್ಯಾಯ ಮುಂತಾದ ಉತ್ತಮ ಕಾರ್ಯಗಳನ್ನು ಬಿಟ್ಟುಬಿಡುತ್ತಾನೆ. ಇತರರ ಸುಂದರ ಶರೀರವನ್ನು ಕಂಡಾಗ, ಆತನು ಅದರ ಮೇಲೆ ಮೋಹಿತನಾಗುತ್ತಾನೆ. ಈ ರೀತಿ ಶರೀರದ ಸೌಂದರ್ಯದಲ್ಲಿ ಮೋಹಿತನಾದ ವ್ಯಕ್ತಿ, ತನ್ನ ಕರ್ತವ್ಯವನ್ನು ಮರೆಯುತ್ತಾನೆ. ಆದರೆ, ಪದೇ ಪದೇ ತನ್ನ ಶರೀರವನ್ನು ಆತ ಶುದ್ಧಮಾಡತೊಡಗಿದಾಗ, ಮತ್ತು ಅದನ್ನು ಸರಿಯಾಗಿ ನೋಡಿದಾಗ ಆತನಿಗೆ ಈ ಶರೀರವು ಮಲಮೂತ್ರಗಳ ಒಂದು ದೊಡ್ಡ ಚೀಲವೆಂಬ ತಿಳುವಳಿಕೆ ಬರುತ್ತದೆ. ಇದರ ಪರಿಣಾಮವಾಗಿ ಆತನಿಗೆ ತನ್ನ ಶರೀರದ ಮೇಲಾಗಲೀ, ಅಥವಾ ಇತರರ ಶರೀರದ ಮೇಲಾಗಲೀ, ಆಸಕ್ತಿಯು ಹುಟ್ಟುವುದಿಲ್ಲ. ಈ ರೀತಿ ಶರೀರದ ಮೇಲಿನ ಆಸಕ್ತಿಯು ಕಳೆದು ಹೋದಾಗ ಈಶ್ವರೋಪಾಸನೆ ಮೊದಲಾದ ಶ್ರೇಷ್ಠಕರ್ಮಗಳಲ್ಲಿ ಆತನಿಗೆ ಅಭಿರುಚಿಯು ಉತ್ಪನ್ನವಾಗುತ್ತದೆ.

[ಈ ದಿನಗಳಲ್ಲಿ ಧಾರ್ಮಿಕ ಸಂಸ್ಥೆಗಳಲ್ಲಿ ನಾಯಕರಾಗಿ ಕಾರ್ಯಮಾಡುವ ತಲೆ ಹಣ್ಣಾದ ಮುದುಕರು ಬಿಳಿಕೂದಲಿಗೆ ಕಪ್ಪುಬಣ್ಣ ಹಾಕುತ್ತಾರೆ. ಮುದುಕಿಯರು ತುಟಿಗೆ ಕೆಂಪು ಬಣ್ಣ (Lipstick) ಹಾಕಿಕೊಳ್ಳುತ್ತಾರೆ. ಇವರು ನಿಜವಾಗಿಯೂ ಪಾಖಂಡಿಗಳು ಎಂದು ಹೇಳುವುದಕ್ಕೆ ಬೇರೆ ಪ್ರಮಾಣಗಳು, ಬೇಕಿಲ್ಲ.]

**ಸತ್ವಶುದ್ಧಿಸೌಮನಸ್ಯೈಕಾಗ್ರ್ಯೇಂದ್ರಿಯ ಜಯಾತ್ಮದರ್ಶನಯೋಗ್ಯತ್ವಾನಿಚ ॥**

[ಯೋಗದರ್ಶನ 2-41]

ಎಂದರೆ, ಮೊದಲು ಬುದ್ಧಿಯ ಶುದ್ಧತೆ, ಇದರಿಂದ ಮನಸ್ಸಿನ ಪ್ರಸನ್ನತೆ, ಮನಸ್ಸಿನ ಪ್ರಸನ್ನತೆಯಿಂದ ಮನಸ್ಸಿನ ಏಕಾಗ್ರತೆ, ಮನಸ್ಸಿನ ಏಕಾಗ್ರತೆಯಿಂದ ಇಂದ್ರಿಯಗಳ ಮೇಲೆ ವಿಜಯ, ಇಂದ್ರಿಯಗಳ ಮೇಲೆ ವಿಜಯ ಪ್ರಾಪ್ತಿಯ ನಂತರ, ಮನುಷ್ಯರಲ್ಲಿ ಆತ್ಮನನ್ನು ತಿಳಿದುಕೊಳ್ಳುವ ಯೋಗ್ಯತೆಯು ಬರುತ್ತದೆ.

**ಸಂತೋಷಾದುತ್ತಮಃ ಸುಖಲಾಭಃ ॥** [ಯೋಗದರ್ಶನ 2-42]

ಮನುಷ್ಯನು ಸಂತೋಷದ ನಿಯಮವನ್ನು ಪಾಲನೆ ಮಾಡಿದಾಗ ಅವನಲ್ಲಿ ಇಂದ್ರಿಯಗಳ ವಿಷಯಗಳ ಮೇಲಿನ ತೃಷ್ಣೆಯು ಶಾಂತವಾಗುತ್ತದೆ. ಈ ರೀತಿ ವಿಷಯ ತೃಷ್ಣೆಯು ಶಾಂತವಾದಾಗ, ಅವನಿಗೆ ಮನಃಶಾಂತಿಯು ಸಿಗುತ್ತದೆ. ಈ ಶಾಂತಿಯು ಜಗತ್ತಿನ ಇತರ ಸುಖಗಳಿಗಿಂತಲೂ ಮೇಲಾಗಿದೆ.

**ಕಾಯೇಂದ್ರಿಯ ಸಿದ್ಧಿರಶುದ್ಧಿಕ್ಷಯಾತ್ತಪಸಃ ॥** [ಯೋಗದರ್ಶನ 2-43]

ಎಂದರೆ, ತಪಸ್ಸಿನಿಂದ ಶರೀರ ಮತ್ತು ಇಂದ್ರಿಯಗಳು ಶುದ್ಧ ಮತ್ತು ಪವಿತ್ರವಾಗಿ ಅವುಗಳು ರೋಗರಹಿತವಾಗಿಯೂ, ಸುದೃಢವಾಗಿಯೂ ಬೆಳೆಯುತ್ತವೆ.

**ಸ್ವಾಧ್ಯಾಯಾದಿಷ್ಟದೇವತಾ ಸಂಪ್ರಯೋಗಃ ॥** [ಯೋಗದರ್ಶನ 2-44]

ಸ್ವಾಧ್ಯಾಯದ ನಿಯಮವನ್ನು ಪಾಲನೆ ಮಾಡುವುದರಿಂದ ಇಷ್ಟ-ದೇವತೆ, ಎಂದರೆ ಪರಮಾತ್ಮನೊಡನೆ ಜೀವಾತ್ಮನ ಸಂಬಂಧವು ಬೆಳೆಯುತ್ತದೆ. ಇದರಿಂದ ಜೀವಾತ್ಮನಿಗೆ ಮುಂದೆ ಪರಮಾತ್ಮನಿಂದ ಸಹಾಯತೆಯು ದೊರೆಯುತ್ತದೆ.

ವೇದಗಳನ್ನು ಮತ್ತು ವೇದಾನುಕೂಲವಾದ ಶಾಸ್ತ್ರಗಳನ್ನು ನಿಯಮ ಪೂರ್ವಕವಾಗಿ ಮಾಡುತ್ತಾ ಮತ್ತು ಪ್ರಣವ ಮಂತ್ರ 'ಓಂಕಾರ'ದ ಜಪವನ್ನೂ ಮಾಡುತ್ತಾ ಹೋದರೆ, ಸಾಧಕನಿಗೆ, ಇದರಿಂದ ಪರಮಾತ್ಮನ ದಿವ್ಯಗುಣಗಳ ಪರಿಜ್ಞಾನವು ಲಭಿಸುತ್ತದೆ. ಇದರ ಫಲ ಸ್ವರೂಪವಾಗಿ ಅವನ ಹೃದಯದಲ್ಲಿ ಪರಮಾತ್ಮನ ಮೇಲೆ ಅತಿಶಯ ಪ್ರೇಮವು ಉತ್ಪನ್ನವಾಗುತ್ತದೆ.

**ಸಮಾಧಿಸಿದ್ಧಿರೀಶ್ವರ ಪ್ರಣಿಧಾನಾತ್ ॥** [ಯೋಗದರ್ಶನ 2-45]

ಈಶ್ವರ-ಪ್ರಣಿಧಾನದ ಫಲವಾಗಿ ಸಾಧಕನಿಗೆ ಸಮಾಧಿಯು ಲಭಿಸುತ್ತದೆ. ಸಮಾಧಿಯಿಂದ ಆನಂದ ಮತ್ತು ಜ್ಞಾನದ ಸಿದ್ಧಿಯಾಗುತ್ತದೆ.

## ಆಸನಗಳ ಸ್ವರೂಪ

ಈಗ ಯೋಗಾಭ್ಯಾಸಕ್ಕೆ ಸಹಾಯಕವಾಗುವ ಆಸನಗಳ ಕುರಿತಾಗಿ ಸ್ವಲ್ಪ ತಿಳಿದುಕೊಳ್ಳುವ.

**ಸ್ಥಿರ ಸುಖಮಾಸನಮ್ ॥** [ಯೋಗದರ್ಶನ 2-46]

ಹೆಚ್ಚು ಸಮಯದ ತನಕ ಸುಖವಾಗಿ ಇದ್ದುಕೊಳ್ಳುವುದಕ್ಕೆ ಆಸನ ಎನ್ನುತ್ತಾರೆ. ಇದು ಸಮಾಧಿಯ ಸಿದ್ಧಿಗೆ ಒಂದು ಉತ್ತಮ ಸಾಧನವಾಗಿದೆ. ಆದರೂ, ಒಂದು ಮಾತು, ಎಲ್ಲಾ ಆಸನಗಳೂ ಸಮಾಧಿಗೆ ಅನುಕೂಲವಾಗಿವೆ ಎಂದು ಹೇಳಲಿಕ್ಕೆ ಸಾಧ್ಯವಿಲ್ಲ. ಆದುದರಿಂದ ಎಲ್ಲಾ ರೀತಿಯ ಆಸನಗಳ ಅಭ್ಯಾಸ ಮಾಡುವುದು ಯೋಗಾಭ್ಯಾಸವಲ್ಲ. ಕೆಲವರು 50-60 ಆಸನಗಳನ್ನು ಕಲಿಯುತ್ತಾರೆ ಮತ್ತು ಇದನ್ನೇ ಮಾಡುತ್ತಾ ಬೇರೆಯವರಿಗೆ ಕಲಿಸುತ್ತಾ ಇರುತ್ತಾರೆ. ಇದನ್ನೇ ಯೋಗಾಭ್ಯಾಸ ಎಂದು ಪ್ರಚಾರ ಮಾಡುತ್ತಲೂ ಹೋಗುತ್ತಾರೆ. ಕೆಲವು ಆಸನಗಳು ತುಂಬಾ ಕಠಿಣವಾಗಿವೆ ಅವುಗಳನ್ನು ಅಭ್ಯಾಸ ಮಾಡುವಾಗ ತುಂಬಾ ಕುಣಿದು, ನಲಿದು ದಣಿಯಬೇಕಾಗುತ್ತದೆ.

ಈ ಸ್ಥಿತಿಯಲ್ಲಿ ಒಬ್ಬ ಹೊಸದಾಗಿ ಬಂದ ಯೋಗಾಭ್ಯಾಸಿಯು ತನ್ನ ಚಿತ್ತವೃತ್ತಿಗಳನ್ನು ತಡೆಯಲು ಸಮರ್ಥನಾಗುವುದಿಲ್ಲ. ಆದರೂ ಒಂದು ಮಾತು. ಈ ಆಸನಗಳ ಅಭ್ಯಾಸವು ಒಂದು ರೀತಿಯ ವ್ಯಾಯಾಮವೆಂಬುದನ್ನು ನಾವು ಒಪ್ಪಿಕೊಳ್ಳುತ್ತೇವೆ. ಇದನ್ನು ಬುದ್ಧಿಪೂರ್ವಕವಾಗಿ, ತನ್ನ ಸಾಮರ್ಥ್ಯಕ್ಕನುಸಾರವಾಗಿ ಯಾರಾದರೂ ಅಭ್ಯಾಸಮಾಡಿದರೆ, ಅವರಿಗೆ ಆರೋಗ್ಯಲಾಭವು ಖಂಡಿತವಾಗಿಯೂ ಆಗುತ್ತದೆ. ಆದರೆ, ಆಸನಗಳನ್ನೇ ಯೋಗವೆಂದು ನಂಬುವುದು ಮತ್ತು ಅದರ ಮುಖಾಂತರವೇ ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ಪ್ರಯಾಸಮಾಡುವುದು ಹಾಗೂ ಇತರರಿಂದ ಮಾಡಿಸುವುದು ಬಹಳ ಹಾನಿಕಾರಕವಾಗಿದೆ.

ಆಸನಗಳ ಕುರಿತಾಗಿ ಜನರು ಅಗತ್ಯವಾಗಿ ತಿಳಿದುಕೊಳ್ಳಬೇಕಾದ ಕೆಲವು ಮಾತುಗಳಿವೆ. ಇವುಗಳನ್ನು ತಿಳಿದುಕೊಳ್ಳುವುದರಿಂದ, ತುಂಬಾ ಪ್ರಯೋಜನವಿದೆ. ಋಷಿಗಳು ಹೇಳಿರುವಂತೆ ಸಾಧಕನು ತನ್ನ ಶರೀರದ ಎಲ್ಲಾ ಸಾಮಾನ್ಯ, ವ್ಯಾಪಾರಗಳನ್ನು ನಿಲ್ಲಿಸಿ, ಅನಂತ ಪರಮಾತ್ಮನ ಧ್ಯಾನದಲ್ಲಿ ಮಗ್ನನಾಗಬೇಕು. ಇದರಿಂದ ಅವನಿಗೆ ಆಸನವು ಸುಲಭವಾಗುತ್ತದೆ. ಪ್ರಪಂಚದ ಕಣ-ಕಣಗಳಲ್ಲಿ ವ್ಯಾಪಕನೂ ಸ್ಥಿರನೂ ಆಗಿರುವ ಪರಮಾತ್ಮನ ಧ್ಯಾನ ಮಾಡುವ ವ್ಯಕ್ತಿಯೂ ಆ ಸ್ಥಿರತೆಯು ಸಹಜವಾಗಿ ಬರುತ್ತದೆ.

ಹೆಚ್ಚಾಗಿ, ದೇವರ ಧ್ಯಾನವನ್ನು ಮಾಡುವವರು ಆಸನಹಾಕಿ ಕುಳಿತುಕೊಂಡು ತಮ್ಮ ಕೈಕಾಲುಗಳಿಂದ ಏನಾದರೊಂದು ಕೆಲಸ ಮಾಡುತ್ತಾ ಇರುವುದನ್ನು ನಾವು ನೋಡುತ್ತೇವೆ. ಇದು ಸರಿಯಲ್ಲ. ಆಸನದ ಸಮಯದಲ್ಲಿ ಬೆನ್ನೆಲುಬು ಮತ್ತು ಕುತ್ತಿಗೆಯು ನೆಟ್ಟಗಿರಬೇಕು. ಬಗ್ಗಿಕುಳಿತಾಗ ಆಲಸ್ಯ ಮತ್ತು ನಿದ್ರೆಯು ಬರುತ್ತದೆ. ಹೆಚ್ಚು ಸಮಯ ಬಗ್ಗಿ ಕುಳಿತರೆ ಹೊಟ್ಟೆಯೂ ಹಾಳಾಗುವುದುಂಟು. ತನ್ನ ಎರಡೂ ಬಾಹುಗಳನ್ನು ಮೊಣಕಾಲಿನ ಮೇಲೆ ಇಟ್ಟರೆ, ನೇರವಾಗಿ ಕುಳಿತುಕೊಳ್ಳಲಿಕ್ಕೆ ಅನುಕೂಲವಾಗುತ್ತದೆ. ಒಂದು ವೇಳೆ, ಯಾರಿಗಾದರೂ ದೀರ್ಘಕಾಲ ಒಂದೇ ಆಸನದಲ್ಲಿ ಸ್ಥಿರವಾಗಿರಲು ಸಾಧ್ಯವಾಗದಿದ್ದರೆ, ಅವರು ನಡುವೆ ಆಸನವನ್ನು ಬದಲಾಯಿಸಬೇಕು. ಈ ರೀತಿಯಲ್ಲಿ ಪ್ರಯತ್ನ ಮಾಡಿದರೆ, ಆಸನವು ಸುಲಭವಾಗುತ್ತದೆ. ಸಮಾಧಿಯು ಸಿದ್ಧಿಸಬೇಕಾದರೆ, ಮೂರು ಅಥವಾ ಆರು ತಾಸುಗಳ ಸಮಯ ಅಗತ್ಯ ಬೇಕೆಂದೇನಿಲ್ಲ. ಯಾರೂ ಈ ರೀತಿಯಲ್ಲಿ ಸಮಾಧಿಯು ಸಿದ್ಧಿಸಬೇಕಾದರೆ ಮೂರು ಅಥವಾ ಆರು ತಾಸುಗಳ ಆಸನವು ಸಿದ್ಧಿಸಬೇಕೆನ್ನುತ್ತಾರೆಯೋ ಅವರು ತಪ್ಪು ಹೇಳುತ್ತಿದ್ದಾರೆ. ಯಾಕೆಂದರೆ ಇದು ಪ್ರಮಾಣಗಳಿಗೆ ವಿರುದ್ಧವಾಗಿದೆ. ಸತ್ಯಾರ್ಥ ಪ್ರಕಾಶದ 9ನೇ ಸಮುಲ್ಲಾಸದಲ್ಲಿ

ಮಹರ್ಷಿ ದಯಾನಂದರು, ಹೇಳಿದ್ದಾರೆ. ಏನೆಂದರೆ : ಮುಮುಕ್ಷುವಿಗೆ ನಿತ್ಯ ಕಡಿಮೆ ಎಂದರೆ ಎರಡು ತಾಸುಗಳ ಕಾಲ ಧ್ಯಾನಮಾಡುವ ಆವಶ್ಯಕತೆ ಇದೆ. ಈ ಎರಡು ತಾಸುಗಳ ಕಾಲವನ್ನು ಎರಡು ಹೊತ್ತುಗಳಲ್ಲಿ ವಿಭಾಗಿಸಿದರೆ, ಮತ್ತೆ ಸಿಗುವುದು ಒಂದು ಹೊತ್ತಿಗೆ ಕೇವಲ ಒಂದು ತಾಸು. ಇದರಿಂದ ಮೋಕ್ಷ-ಪ್ರಾಪ್ತಿಗೆ, ಪ್ರತಿನಿತ್ಯ ಎರಡು ಗಂಟೆಗಳ ಸಮಯ ಧ್ಯಾನವು ಸಾಕಾಗುತ್ತದೆ. ಆದರೆ, ಯಾರಿಗೆ ಇದಕ್ಕಿಂತ ಹೆಚ್ಚು ಸಮಯ ಆಸನಗಳ ಅಭ್ಯಾಸ ಮಾಡಬೇಕೆಂಬ ಇಚ್ಛೆ ಇದ್ದರೆ, ಅವರು ಹಾಗೆ ಮಾಡುವುದಕ್ಕೆ ಏನೂ ತೊಂದರೆ ಇಲ್ಲ. ಅಂತೂ, ಆರು ಗಂಟೆಗಿಂತ ಕಡಿಮೆ ಸಮಯದಲ್ಲಿ ಸಮಾಧಿಯು ಸಿದ್ಧಿಸುವುದಿಲ್ಲ ಎಂಬ ಮಾತು ಮಾತ್ರ ಸರಿಯಲ್ಲ. ಸಾಧಕನಿಗೆ, ಒಂದು ಬಾರಿ, ಆಸನವು ಸಿದ್ಧಿಸಿತು ಎಂದಾದರೆ, ಮತ್ತೆ ಅವನಿಗೆ ಶೀತ, ಉಷ್ಣ, ಹಸಿವೆ, ಬಾಯಾರಿಕೆ, ಇವೆಲ್ಲಾ ಅವನನ್ನು ಹೆಚ್ಚು ಬಾಧಿಸುವುದಿಲ್ಲ. ಚಿತ್ತದ ಏಕಾಗ್ರತೆಯು ಅವನಿಗೆ ಸುಲಭವಾಗಿ ಲಭಿಸುತ್ತದೆ.

## ಪ್ರಾಣಾಯಾಮದ ಸ್ವರೂಪ, ರೀತಿ ಮತ್ತು ಪ್ರಯೋಜನ

**ತಸ್ಮಿನ್ಸತಿ ಶ್ವಾಸಪ್ರಶ್ವಾಸಯೋರ್ಗತಿವಿಚ್ಛೇದಃ ಪ್ರಾಣಾಯಾಮಃ ॥**
[ಯೋಗದರ್ಶನ 2-49]

ಅರ್ಥಾತ್, ಆಸನವು ಸಿದ್ಧಿಸಿದಾಗ ಶ್ವಾಸದಗತಿಯನ್ನು ಯಥಾ ಶಕ್ತಿ ತಡೆಯುವುದಕ್ಕೆ ಪ್ರಾಣಾಯಾಮ ಎಂದು ಹೇಳುತ್ತಾರೆ. ಹೊರಗಿನಿಂದ ವಾಯುವನ್ನು ಒಳಗೆ ತೆಗೆದುಕೊಳ್ಳುವುದಕ್ಕೆ ಶ್ವಾಸ ಎಂದೂ, ಒಳಗಿನ ವಾಯುವನ್ನು ಹೊರಗೆ ಬಿಡುವುದಕ್ಕೆ ಪ್ರಶ್ವಾಸವೆಂದೂ ಹೇಳುತ್ತಾರೆ. ಪ್ರಾಣಾಯಾಮವೆಂದರೆ, ಇವೆರಡರ ಚಲನೆಯನ್ನು ಯಥಾಶಕ್ತಿ ನಿಲ್ಲಿಸುವುದು.

**ಬಾಹ್ಯಾಭ್ಯಂತರ ಸ್ತಂಭವೃತ್ತಿ ದೇಶ ಕಾಲ ಸಂಖ್ಯಾಭಿಃ**
**ಪರಿದೃಷ್ಟೋ ದೀರ್ಘ ಸೂಕ್ಷ್ಮಃ ॥** [ಯೋಗದರ್ಶನ 2-50]

ಎಂದರೆ, ಬಾಹ್ಯ, ಆಭ್ಯಂತರ, ಸ್ತಂಭವೃತ್ತಿ, ದೇಶ, ಕಾಲ ಮತ್ತು ಸಂಖ್ಯೆ ಇವುಗಳನ್ನು ಗಮನದಲ್ಲಿಟ್ಟುಕೊಂಡು ಪ್ರಾಣಾಯಾಮವನ್ನು ಮಾಡಿದರೆ ಪ್ರಾಣವು ದೀರ್ಘ ಮತ್ತು ಸೂಕ್ಷ್ಮವಾಗುತ್ತದೆ. ಪ್ರಾಣವನ್ನು ಹೊರಗೆ ಬಿಡುವಾಗ ಮತ್ತು ಒಳಗೆ ತಡೆಯುವಾಗ ಅದು ಯಾವ ಸ್ಥಾನದಲ್ಲಿ ಇರುತ್ತದೆಯೋ, ಅದು ದೇಶವಾಗಿದೆ. ಪ್ರಾಣವನ್ನು ಹೊರಗೆ ಅಥವಾ ಒಳಗೆ ತಡೆಯುವುದಕ್ಕೆ ಎಷ್ಟು ಸಮಯವು ತಾಗುತ್ತದೆಯೋ ಅದು ಕಾಲವಾಗಿದೆ. ಒಂದು ಸರ್ತಿ ಪ್ರಾಣಾಯಾಮ ಮಾಡುವಾಗ ಎಷ್ಟು ಬಾರಿ ಶ್ವಾಸ-ಪ್ರಶ್ವಾಸಗಳ ಆವೃತ್ತಿಯಾಗುತ್ತದೆಯೋ ಅದಕ್ಕೆ ಸಂಖ್ಯೆ ಎನ್ನುತ್ತಾರೆ.

ಉದಾಹರಣೆಗೆ ಹೇಳುವುದಾದರೆ, ಒಂದು ಪ್ರಾಣಾಯಾಮಕ್ಕೆ ಹತ್ತು ಶ್ವಾಸ-ಪ್ರಶ್ವಾಸಗಳಷ್ಟು ಸಮಯ ತಾಗುತ್ತದೆ. ಇದೇ ರೀತಿ ಎಷ್ಟು ಪ್ರಾಣಾಯಾಮ ಮಾಡಬೇಕೋ ಅದನ್ನು ಲೆಕ್ಕ ಮಾಡಬೇಕು. ಒಬ್ಬ ವ್ಯಕ್ತಿಗೆ ಎಷ್ಟು ಸಾಮರ್ಥ್ಯವಿದೆಯೋ ಅಷ್ಟೇ ಪ್ರಾಣಾಯಾಮ ಮಾಡಬೇಕು.

ಉಸಿರನ್ನು ಹೊರಗೆ ಬಿಟ್ಟು, ಯಥಾಶಕ್ತಿ ಅದನ್ನು ಹೊರಗೆ ನಿಲ್ಲಿಸುವುದಕ್ಕೆ ಬಾಹ್ಯ ಪ್ರಾಣಾಯಾಮ ಎಂದು ಹೇಳುತ್ತಾರೆ. ಉಸಿರನ್ನು ಒಳಗೆ ತೆಗೆದುಕೊಂಡು ಅದನ್ನು ತನ್ನ ಶಕ್ತಿಗನುಸಾರ ಒಳಗಡೆ ಹೆಚ್ಚುಕಾಲ ತಡೆದಿಡುವುದಕ್ಕೆ ಅಭ್ಯಂತರ ಪ್ರಾಣಾಯಾಮ ಎಂದು ಹೆಸರು. ಉಸಿರನ್ನು ಹೊರಗೂ ಅಲ್ಲ, ಒಳಗೂ ಅಲ್ಲ, ಅದು ಎಲ್ಲಿದೆಯೋ ಅಲ್ಲಿಯೇ ಅದನ್ನು ತಡೆದಿಡುವುದಕ್ಕೆ ಸ್ತಂಭವೃತ್ತಿ ಪ್ರಾಣಾಯಾಮವೆನ್ನುತ್ತಾರೆ.

## ಪ್ರಾಣಾಯಾಮ ಮಾಡುವ ವಿಧಿ

ಶೌಚಾದಿಗಳಿಂದ ನಿವೃತ್ತರಾಗಿ ಪ್ರಾಣಾಯಾಮವನ್ನು ಮಾಡಬೇಕು. ಮೊದಲು ಒಂದು ಕಡೆ ಸುಖಾಸನದಲ್ಲಿ, ಕುಳಿತು ಮೂಗಿನಿಂದ ಉಸಿರನ್ನು ಹೊರಗೆ ತಳ್ಳಬೇಕು, ಮತ್ತು ಮೂಲೇಂದ್ರಿಯವನ್ನು ಒಳಗಿನಿಂದಲೇ ಮೇಲೆ ಎಳೆಯಬೇಕು. ಈ ಕ್ರಿಯೆಯೊಂದಿಗೆ, ಮನಸ್ಸಿನಲ್ಲಿ 'ಓಂ' ಅಥವಾ ಪ್ರಾಣಾಯಾಮ ಮಂತ್ರ ಅಥವಾ ಗಾಯತ್ರೀ ಮಂತ್ರವನ್ನು ಅರ್ಥ ಸಹಿತವಾಗಿ ಜಪಿಸಬೇಕು. ಭಯ ಅಥವಾ ಕಷ್ಟದ ಅನುಭವವಾದಾಗ ಉಸಿರನ್ನು ನಿಧಾನವಾಗಿ ಒಳಗೆ ತೆಗೆದುಕೊಳ್ಳಬೇಕು. ಪ್ರಾಣವು ಪೂರ್ತಿಯಾದಾಗ ಪುನಃ ಉಸಿರನ್ನು ಹೊರಗೆ ತಳ್ಳಬೇಕು. ಈಗ ಇದು ಎರಡನೆಯ ಪ್ರಾಣಾಯಾಮದ ಪ್ರಾರಂಭವಾಗಿದೆ. ಅಭ್ಯಂತರ ಪ್ರಾಣಾಯಾಮದಲ್ಲಿ, ಮೊದಲು ಒಂದು ಸರ್ತಿ ಪ್ರಾಣವನ್ನು ಹೊರಗೆ ಬಿಟ್ಟು ಪುನಃ ಒಳಗೆ ಎಳೆದುಕೊಳ್ಳಬೇಕು. ಕಷ್ಟದ ಅನುಭವವಾಗುವ ತನಕ ಪ್ರಾಣವನ್ನು ಒಳಗಡೆ ತಡೆದಿಟ್ಟುಕೊಂಡು ಜಪಮಾಡುತ್ತಿರಬೇಕು. ಮತ್ತು ಇನ್ನು ತಡೆಯಲು ಅಸಾಧ್ಯವಾದಾಗ, ಅದನ್ನು ಹೊರಗೆ ಬಿಡಬೇಕು. ಇದು ಎರಡನೆಯ ಪ್ರಾಣಾಯಾಮವಾಯಿತು. ಇಲ್ಲಿ ಒಂದು ಮಾತು ಸಾಧಕನಿಗೆ ಜ್ಞಾಪಕದಲ್ಲಿರಬೇಕು. ಅದೇನೆಂದರೆ : ಮಹರ್ಷಿ ದಯಾನಂದರು ಹೇಳಿದಂತೆ ಮೂಲೇಂದ್ರಿಯವನ್ನು ಕೇವಲ ಬಾಹ್ಯ ಪ್ರಾಣಾಯಾಮದಲ್ಲಿ ಮಾತ್ರ ಮೇಲೆ ಎಳೆಯಬೇಕು. ಇತರ ಪ್ರಾಣಾಯಾಮಗಳಲ್ಲಿ ಈ ವಿಧಾನವು ಇಲ್ಲ.

ಪ್ರಾಣಾಯಾಮವು ಶರೀರದೊಳಗೆ ಚಲಿಸುತ್ತಿರವಾಗ, ಅಥವಾ ಶರೀರದೊಳಗಿನಿಂದ ಹೊರಗೆ ಹೋಗುವಾಗ, ಅಥವಾ ಪ್ರಾಣವು ಒಳಗೆ ಹೋದಮೇಲೆ ಇಲ್ಲವೇ

ಹೊರಗೆ ಹೋದಮೇಲೆ, ಅದನ್ನು ಇದ್ದಲ್ಲಿಯೇ ನಿಲ್ಲಿಸಿ ಬಿಡಬೇಕು. ಮತ್ತು ಎಷ್ಟು ಹೊತ್ತು ಸಾಧ್ಯವಿದೆಯೋ ಅಷ್ಟು ಹೊತ್ತು ತಡೆದಿಡಬೇಕು. ನಂತರ, ಪ್ರಾಣ ಸಂಚಾರದ ತಡೆಯನ್ನು ಬಿಡಬೇಕು. ಇದು ಪ್ರಾಣಾಯಾಮದ ಮೂರನೆಯ ರೀತಿ, ಸ್ತಂಭವೃತ್ತಿ.

ಪ್ರಾಣಾಯಾಮ ಮಾಡುವ ವ್ಯಕ್ತಿಯು ಯಮ-ನಿಯಮಗಳ ಪಾಲನೆಯನ್ನು ಅಗತ್ಯವಾಗಿ ಮಾಡಬೇಕು. ಮಾತ್ರವಲ್ಲ, ತನ್ನ ಶಕ್ತಿ, ಭೋಜನ, ಋತು, ಅನುಭೂತಿ ಇತ್ಯಾದಿಗಳನ್ನು ಗಮನದಲ್ಲಿಟ್ಟುಕೊಂಡೇ ಪ್ರಾಣಾಯಾಮವನ್ನು ಮಾಡಬೇಕು. ಪ್ರಾಣಾಯಾಮದ ವಿಷಯದಲ್ಲಿ ಹೆಚ್ಚು ತಿಳಿದವರು ಮತ್ತು ವಿಶ್ವಾಸಕ್ಕೆ ಯೋಗ್ಯರಾದ ವಿದ್ವಾಂಸರಿಂದ ಪ್ರಾಣಾಯಾಮವನ್ನು ಕಲಿತರೆ ಉತ್ತಮ. ಪ್ರಾಣಾಯಾಮವನ್ನು ಮಾಡುತ್ತಾ ಮಾಡುತ್ತಾ ಬಾಯಿಯು ಒಣಗಬಹುದು. ಮತ್ತೆ ತಲೆಯು ಭಾರವಾಗ ಬಹುದು. ಆಗ ಪ್ರಾಣಾಯಾಮವನ್ನು ನಿಲ್ಲಿಸಬೇಕು. ವಿಶೇಷ ರುಗ್ಣಾವಸ್ಥೆಯಲ್ಲಿ ಪ್ರಾಣಾಯಾಮವನ್ನು ಮಾಡಬಾರದು. ಕೆಲವರು ಮೂಗನ್ನು ಕೈಯಿಂದ ಹಿಡಿದು ಪ್ರಾಣಾಯಾಮ ಮಾಡುತ್ತಾರೆ. ಆದರೆ ಮಹರ್ಷಿ ದಯಾನಂದರು ಸಂಸ್ಕಾರ ವಿಧಿಯಲ್ಲಿ ಗೃಹಾಶ್ರಮ ಪ್ರಕರಣದಲ್ಲಿ ಬರೆದಿರುವ ಪ್ರಕಾರ ಹೇಳುವುದಾದರೆ, ಇದು ಸರಿಯಲ್ಲ.

**ಬಾಹ್ಯಾಭ್ಯಂತರ ವಿಷಯಾಕ್ಷೇಪೀ ಚತುರ್ಥಃ ॥** [ಯೋಗದರ್ಶನ 2-51]

ಅರ್ಥ :- ಹೊರಗಿನಿಂದ ತಡೆಯಲ್ಪಡುವ ಬಾಹ್ಯಪ್ರಾಣಾಯಾಮ ಮತ್ತು ಒಳಗಿನಿಂದ ತಡೆಯಲ್ಪಡುವ ಆಭ್ಯಂತರ ಪ್ರಾಣಾಯಾಮ, ಇವೆರಡೂ ರೀತಿಯ ಪ್ರಾಣಾಯಾಮಗಳ ಅತಿಕ್ರಮಕ್ಕೆ ಬಾಹ್ಯಾಭ್ಯಂತರ ವಿಷಯಾಕ್ಷೇಪೀ ಪ್ರಾಣಾಯಾಮ ಎನ್ನುತ್ತಾರೆ. ಈ ಪ್ರಾಣಾಯಾಮವನ್ನು ಮಾಡುವ ವಿಧಿ ಹೀಗಿದೆ :

ಮೊದಲು ಪ್ರಾಣವನ್ನು ಹೊರಗೆ ತಳ್ಳಿಬಿಡಬೇಕು, ಮತ್ತು ಅದನ್ನು ಅಲ್ಲಿಯೇ ತಡೆದಿಡಬೇಕು. ಈ ಪ್ರಾಣವನ್ನು ಒಳಗಡೆ ತೆಗೆದುಕೊಳ್ಳಬೇಕೆಂದು ತೋರಿದಾಗ ಅದನ್ನು ಒಳಗಡೆ ಬರಲು ಬಿಡಬಾರದು. ಇದರ ಬದಲಿಗೆ, ಒಳಗೆ ಶೇಷ ಇರುವ ಪ್ರಾಣವನ್ನೂ ಹೊರಗೆ ತಳ್ಳಬೇಕು. ಈ ರೀತಿ ಒಂದೆರಡು ಸಲ, ಅಥವಾ ಸಾಮರ್ಥ್ಯವಿದ್ದಷ್ಟು ಬಾರಿ ಒಳಗಿನ ಪ್ರಾಣವನ್ನು ಹೊರಗೆ ತಳ್ಳಬೇಕು. ಆ ಮೇಲೆ ಪ್ರಾಣವನ್ನು ನಿಧಾನವಾಗಿ ಒಳಗೆ ಎಳೆದುಕೊಂಡು ಪುನಃ ಅದನ್ನು ಅಲ್ಲಿಯೇ ನಿಲ್ಲಿಸಿಡಬೇಕು. ಮತ್ತೆ ಈ ಪ್ರಾಣವನ್ನು ಹೊರಗೆ ಬಿಡಬೇಕೆಂದು ತೋರಿದಾಗ ಹಾಗೆ ಮಾಡದೆ, ಅದರ ಬದಲು ಹೊರಗಿನಿಂದ ಇನ್ನೂ ಸ್ವಲ್ಪ ಉಸಿರನ್ನು ಒಳಗಡೆ ಎಳೆಯಬೇಕು. ಈ ರೀತಿ ಎಷ್ಟು ಬಾರಿ ಮಾಡಲಿಕ್ಕೆ ಸಾಧ್ಯ ಇದೆಯೋ ಅಷ್ಟು

ಬಾರಿ ಮಾಡಬೇಕು. (ಮತ್ತು ನಿಯಮ ಪೂರ್ವಕವಾಗಿ ನಿತ್ಯವೂ ಮಾಡಬೇಕು) ಆದರೆ, ಶಕ್ತಿಮೀರಿ ಪ್ರಾಣಾಯಾಮವನ್ನು ಮಾಡಬಾರದು. ಭಯ ಅಥವಾ ಕಷ್ಟವಾದಾಗ ಉಸಿರನ್ನು ಬಿಡಬೇಕು. ಇಲ್ಲಿ ಹಠಮಾಡಿದರೆ, ಮೂರ್ಛೆಬರಬಹುದು. ಇದು ಒಳ್ಳೆಯದಲ್ಲ, ಯಾಕೆಂದರೆ ಇದರಿಂದ ಬುದ್ಧಿ ಮತ್ತು ಶರೀರ ಇವೆರಡಕ್ಕೂ ಹಾನಿಯಾಗುತ್ತದೆ. ಇದು ಬಾಹ್ಯಾಭ್ಯಂತರ ವಿಷಯಾಕ್ಷೇಪೀ ಪ್ರಾಣಾಯಾಮದ ವಿಷಯವಾಯಿತು.

ಬಾಹ್ಯಾಭ್ಯಂತರಾದಿ ಪ್ರಾಣಾಯಾಮದ ಅಭ್ಯಾಸವು ಪರಿಪಕ್ವವಾದ ನಂತರವೇ, ಬಾಹ್ಯಾಭ್ಯಂತರ ವಿಷಯಾಕ್ಷೇಪೀ ಪ್ರಾಣಾಯಾಮವನ್ನು ಪ್ರಾರಂಭ ಮಾಡಬೇಕು.

## ಪ್ರಾಣಾಯಾಮದಿಂದ ಪ್ರಯೋಜನ

**ತತಃ ಕ್ಷೀಯತೇ ಪ್ರಕಾಶಾವರಣಮ್ ॥** [ಯೋಗದರ್ಶನ 2-25]

ವಿಧಿ ಪೂರ್ವಕವಾಗಿ ಪ್ರಾಣಾಯಾಮವನ್ನು ಮಾಡಿದರೆ, ಜ್ಞಾನದ ಆವರಣವು ಕ್ಷೀಣವಾಗುತ್ತದೆ. ಪ್ರಾಣಾಯಮದಿಂದ ಶರೀರ ಮತ್ತು ಮನಸ್ಸಿನ ದೋಷಗಳು ದೂರವಾಗುತ್ತವೆ. ಶರೀರ ಮತ್ತು ಮನಸ್ಸಿನ ಶುದ್ಧತೆಯಿಂದ ಜ್ಞಾನದ ವಿಕಾಸಕ್ಕೆ ಸಹಾಯಕವಾಗುತ್ತದೆ. ಹೇಗೆ ಶರೀರವು ರೋಗಗ್ರಸ್ತವಾಗಿ ಕ್ಷೀಣವಾದಾಗ, ಆ ರೋಗಿಯ ಬುದ್ಧಿಯೂ ಕ್ಷೀಣವಾಗುತ್ತದೆಯೋ, ಹಾಗೆಯೇ ಆರೋಗ್ಯವಂತನ ಬುದ್ಧಿಯೂ ಬಲವಾಗಿರುತ್ತದೆ.

ಪ್ರಾಣಾಯಾಮದಿಂದ ಮನಸ್ಸು ಮತ್ತು ಇಂದ್ರಿಯಗಳು ವಶಕ್ಕೆ ಬರುತ್ತವೆ. ಇವುಗಳು ವಶಕ್ಕೆ ಬಂದಾಗ ಅಶುಭ ಸಂಸ್ಕಾರಗಳನ್ನು ದೂರಮಾಡಲು ಸುಲಭವಾಗುತ್ತದೆ. ಅಶುಭ ಸಂಸ್ಕಾರಗಳು ದೂರವಾದಾಗ ಶುಭ ಸಂಸ್ಕಾರಗಳು ಪ್ರಬಲವಾಗುತ್ತವೆ. ಇವು ಪ್ರಬಲವಾದಾಗ ಜ್ಞಾನದ ವೃದ್ಧಿಯೂ ಆಗುತ್ತದೆ. ಅದು ಹೇಗೆಂದರೆ, ಅಶುಭ ಸಂಸ್ಕಾರಗಳಿಂದ ಅವಿದ್ಯೆಯು ಬೆಳೆಯುತ್ತದೆ. ಅವಿದ್ಯೆಯ ಬೆಳವಣಿಗೆಗೆ ಕಾರಣವಾಗಿರುವ ಅಶುಭ ಸಂಸ್ಕಾರವು ಅಳಿದು ಹೋದಾಗ, ಸಹಜವಾಗಿ ಅವಿದ್ಯೆಯೂ ಅಳಿದುಹೋಗುತ್ತದೆ.

ಎರಡನೆಯದಾಗಿ, ಪರಮಾತ್ಮನ ಉಪಾಸನೆಯಿಂದಲೂ ಅವಿದ್ಯೆಯು ನಾಶವಾಗುತ್ತದೆ. ಪರಮಾತ್ಮನ ಉಪಾಸನೆಗೆ ಮನಸ್ಸನ್ನು ವಶದಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ. ಮನಸ್ಸನ್ನು ವಶದಲ್ಲಿಟ್ಟುಕೊಳ್ಳಲು ಪ್ರಾಣಾಯಾಮ ಮಾಡಬೇಕಾಗುತ್ತದೆ. ಈ

ರೀತಿ ಪ್ರಾಣಾಯಾಮದಿಂದ ಪರಮಾತ್ಮನ ಉಪಾಸನೆ ಮತ್ತು ಪರಮಾತ್ಮನ ಉಪಾಸನೆಯಿಂದ ಜ್ಞಾನ ವೃದ್ಧಿಯಾಗುತ್ತದೆ. ಜ್ಞಾನದ ವೃದ್ಧಿಯಾದಂತೆ ಅಜ್ಞಾನದ ನಾಶವಾಗುತ್ತದೆ. ಋಗ್ವೇದಾದಿ ಭಾಷ್ಯಭೂಮಿಕೆಯ ಉಪಾಸನಾ ವಿಷಯದಲ್ಲಿ ಮಹರ್ಷಿದಯಾನಂದರು ಬರೆದಿದ್ದಾರೆ : "ಈ ರೀತಿ ಪ್ರಾಣಾಯಾಮ ಪೂರ್ವಕವಾಗಿ ನಿತ್ಯವೂ ಪರಮಾತ್ಮನ ಉಪಾಸನೆಯನ್ನು ಮಾಡುತ್ತಾ ಹೋದರೆ, ಆತ್ಮಜ್ಞಾನವನ್ನು ಆವರಿಸಿಕೊಂಡಿರುವ ಅಜ್ಞಾನವು ನಿತ್ಯ ಸ್ವಲ್ಪ ಸ್ವಲ್ಪವಾಗಿ ಕಡಿಮೆಯಾಗುತ್ತಾ ಹೋಗುತ್ತದೆ ಮತ್ತು ಜ್ಞಾನದ ಪ್ರಕಾಶವು ಮೆಲ್ಲ ಮೆಲ್ಲನೆ ಹೆಚ್ಚುತ್ತಾ ಹೋಗುತ್ತದೆ". ಸತ್ಯಾರ್ಥ ಪ್ರಕಾಶದ ಮೂರನೆಯ ಸಮುಲ್ಲಾಸದಲ್ಲಿಯೂ, ಇವರು ಹೀಗೆಂದು ಹೇಳಿದ್ದಾರೆ. "ಈ ರೀತಿ ಪ್ರಾಣವು ತನ್ನ ವಶಕ್ಕೆ ಬಂದಾಗ ಮನಸ್ಸು ಮತ್ತು ಇಂದ್ರಿಯಗಳೂ ಸ್ವಾಧೀನಕ್ಕೆ ಬರುತ್ತವೆ. ಇದರಿಂದ ಬಲ ಮತ್ತು ಪುರುಷಾರ್ಥವು ಹೆಚ್ಚಾಗಿ ಬುದ್ಧಿಯು ತೀವ್ರ ಮತ್ತು ಸೂಕ್ಷ್ಮವಾಗುತ್ತದೆ, ಮತ್ತು ಅತ್ಯಂತ ಕಠಿಣ ಮತ್ತು ಸೂಕ್ಷ್ಮ ವಿಷಯಗಳನ್ನೂ ಬಹುಬೇಗನೆ ಗ್ರಹಣ ಮಾಡಿಕೊಳ್ಳಲು ಸಮರ್ಥವಾಗುತ್ತದೆ. ಇದರಿಂದ ಮನುಷ್ಯನ ಶರೀರದಲ್ಲಿ ವೀರ್ಯದ ವೃದ್ಧಿಯಾಗಿ, ಸ್ಥಿರತೆ, ಬಲ, ಪರಾಕ್ರಮ, ಜಿತೇಂದ್ರಿಯತೆ, ಇತ್ಯಾದಿಗಳು ಸಿದ್ಧಿಸಿ, ಎಲ್ಲಾ ಶಾಸ್ತ್ರಗಳನ್ನೂ ಸ್ವಲ್ಪ ಸಮಯದಲ್ಲಿಯೇ ಅವನು ಅರಿತುಕೊಳ್ಳುತ್ತಾನೆ. ಸ್ತ್ರೀಯರೂ ಇದೇ ರೀತಿ ಯೋಗಾಭ್ಯಾಸ ಮಾಡಬೇಕು".

**ಧಾರಣಾಸು ಚ ಯೋಗ್ಯತಾ ಮನ ಸಃ ॥** [ಯೋಗದರ್ಶನ 2-53]

ಧಾರಣೆಯಲ್ಲಿ ಮನಸ್ಸಿನ ಯೋಗ್ಯತೆಯು ಹೆಚ್ಚುತ್ತದೆ. ಎಂದರೆ, ಪ್ರಾಣಾಯಾಮದಿಂದ ಮನಸ್ಸಿನ ಧಾರಣಾಶಕ್ತಿಯು ಬೆಳೆಯುತ್ತದೆ. ಮನಸ್ಸನ್ನು ಯಾವುದಾದರೊಂದು ವಿಷಯದಲ್ಲಿ ಕೇಂದ್ರಿಕರಿಸಬೇಕೆಂದಾಗ ನಮ್ಮ ಇಚ್ಛೆಯಂತೆ ಅದು ಸುಲಭವಾಗಿ ಆಗಿಹೋಗುತ್ತದೆ. ಹೀಗೆ, ವಿಧಿ ಪ್ರಕಾರವಾಗಿ ಪ್ರಾಣಾಯಾಮವನ್ನು ಮಾಡುವುದರಿಂದ ತುಂಬಾ ಪ್ರಯೋಜನಗಳಿವೆ. ಆದರೆ, ತಮ್ಮ ಶಕ್ತಿಗೆ ಮೀರಿ ಪ್ರಾಣಾಯಾಮ ಮಾಡಿದರೆ, ಅದರಿಂದ ಲಾಭಕ್ಕಿಂತ ಹೆಚ್ಚು ಹಾನಿಯಾಗುತ್ತದೆ. ಮಹರ್ಷಿ ದಯಾನಂದರು "**ಸಂಸ್ಕಾರ ವಿಧಿ**"ಯ ಗೃಹಾಶ್ರಮ ಪ್ರಕರಣದಲ್ಲಿ ಕಡಿಮೆ ಎಂದರೆ ಮೂರು ಬಾರಿ ಹೆಚ್ಚೆಂದರೆ ಇಪ್ಪತ್ತೊಂದು ಬಾರಿ ಪ್ರಾಣಾಯಾಮ ಮಾಡಬೇಕೆಂದು ಹೇಳಿದ್ದಾರೆ. ಆದರೆ "**ಹಠಯೋಗಪ್ರದೀಪಿಕಾ**"ದಲ್ಲಿ ದಿನಂಪ್ರತಿ ಮುನ್ನೂರ ಇಪ್ಪತ್ತುಬಾರಿ ಪ್ರಾಣಾಯಾಮ ಮಾಡಬೇಕೆಂದು ಹೇಳುತ್ತಾರೆ. ಇದು ಸರಿಯಲ್ಲ. ಯಾಕೆಂದರೆ ಈ ರೀತಿ ತುಂಬಾ ಹೆಚ್ಚುಬಾರಿ ಪ್ರಾಣಾಯಾಮ

ಮಾಡಿದರೆ ಒರಟುತನ ಹೆಚ್ಚಾಗುತ್ತದೆ. ಮತ್ತು ಬುದ್ಧಿಯ ಹ್ರಾಸವಾಗುತ್ತದೆ, ಮಾತ್ರವಲ್ಲ ಮೂರ್ಛೆ ಬರಲಿಕ್ಕೆ ಪ್ರಾರಂಭವಾಗುತ್ತದೆ. ಕೆಲವರು ಕೇವಲ ಪ್ರಾಣಾಯಾಮದಿಂದ ಎಲ್ಲಾ ಸಿದ್ಧಿಗಳೂ ಒದಗುತ್ತವೆ ಎಂದು ನಂಬುತ್ತಾರೆ. ಇವರ ವಿಚಾರಕ್ಕನುಸಾರವಾಗಿ ಹೇಳುವುದಾದರೆ, ಮನುಷ್ಯನಿಗೆ ಜ್ಞಾನ, ಶುಭಕರ್ಮ ಮತ್ತು ಯಮ - ನಿಯಮಾದಿಗಳ ಪಾಲನೆ, ಇವು ಯಾವುದೂ ಅಗತ್ಯವಿಲ್ಲ. ಈ ರೀತಿ, ವಿಪರೀತ ಪ್ರಾಣಾಯಾಮದಿಂದ ಸಾವಿರಾರು ಮಂದಿ ಸಾಧಕರ ಆರೋಗ್ಯ ಮತ್ತು ಬುದ್ಧಿಯು ಕೆಟ್ಟಿರುವುದನ್ನು ನಾವು ನೋಡಿದ್ದೇವೆ. ಆದುದರಿಂದ ಪ್ರಾಣಾಯಾಮವನ್ನು ಯಾವಾಗಲೂ ವಿಧಿ ಪೂರ್ವಕವಾಗಿಯೇ, ತನ್ನ ಸಾಮರ್ಥ್ಯಕ್ಕನುಸಾರವಾಗಿ, ಅನುಭವೀ ವ್ಯಕ್ತಿಗಳ ಮಾರ್ಗದರ್ಶನ ಪಡೆದು ಮಾಡಬೇಕು.

## ಪ್ರತ್ಯಾಹಾರ

**ಸ್ವವಿಷಯಾಸಂಪ್ರಯೋಗೇ ಚಿತ್ತಸ್ವರೂಪಾನಕಾರ**
**ಇವೇಂದ್ರಿಯಾಣಾಂ ಪ್ರತ್ಯಾಹಾರಃ ॥** [ಯೋಗದರ್ಶನ 2-54]

ಅರ್ಥಾತ್, ಇಂದ್ರಿಯಗಳಿಗೂ, ಇಂದ್ರಿಯಗಳ ಸ್ವವಿಷಯಗಳಿಗೂ, ಇರುವ ಸಂಬಂಧವು ನಿಂತು ಹೋದಾಗ, ಚಿತ್ತವು ನಮಗನುಕೂಲವಾಗಿ ಕೆಲಸಮಾಡುತ್ತದೆ. ಇದಕ್ಕೆ ಪ್ರತ್ಯಾಹಾರ ಎಂದು ಹೇಳುತ್ತಾರೆ. ಎಂದರೆ, ಸಾಧಕನು ತನ್ನ ಮನಸ್ಸನ್ನು ಪ್ರಣವ ಮಂತ್ರ ಓಂಕಾರ ಅಥವಾ ಪರಮಾತ್ಮನ ಇತರ ನಾಮಗಳ ಜಪಮಾಡಲಿಕ್ಕೆ ತೊಡಗಿದಾಗ, ಇಂದ್ರಿಯಗಳು ಬಾಹ್ಯ ವಿಷಯಗಳ ಕಡೆಗೆ ಆಕರ್ಷಕವಾಗದೆ, ಮನಸ್ಸನ್ನು ಅನುಸರಿಸಿಕೊಂಡು ಹೋಗುತ್ತವೆ.

ದೃಷ್ಟಾಂತಕ್ಕಾಗಿ ಹೇಳುವುದಾದರೆ, ಜೇನು ನೊಣಗಳಲ್ಲಿ ಒಂದು ರಾಣಿ ನೊಣವು ಇದೆ. ಈ ರಾಣಿ ನೊಣವು ಯಾವ ಶಾಖೆಯಲ್ಲಿ ಕುಳಿತುಕೊಳ್ಳುತ್ತದೆಯೋ, ಅದೇಶಾಖೆಯಲ್ಲಿ ಇತರ ಎಲ್ಲಾ ನೊಣಗಳೂ ಬಂದು ಸೇರಿಕೊಳ್ಳುತ್ತವೆ. ರಾಣಿ ನೊಣವು ಆ ಶಾಖೆಯನ್ನು ಬಿಟ್ಟು ಬೇರೆ ಕಡೆಗೆ ಹೋಗುವಾಗ, ಇತರ ನೊಣಗಳೂ, ಅದರ ಹಿಂದೆಯೇ ಎದ್ದು ಹೋಗುತ್ತವೆ. ಇದೇ ರೀತಿಯಲ್ಲಿ ಮನುಷ್ಯನ ಇಂದ್ರಿಯಗಳು ಚಿತ್ತದ ಅನುಸರಣೆ ಮಾಡುವುದಕ್ಕೆ ಪ್ರತ್ಯಾಹಾರವೆಂದು ಹೆಸರು. ಪ್ರತ್ಯಾಹಾರ ಶಬ್ದದ ಅರ್ಥ ಚಿತ್ತದ ಮೇಲೆ ಅಧಿಕಾರ. ಚಿತ್ತವನ್ನು ವಶೀಕರಿಸುವುದಕ್ಕೆ ಅನೇಕ ಉಪಾಯಗಳಿವೆ. ಪ್ರಾರಂಭದಲ್ಲಿಯೇ, ಚಿತ್ತವು ಒಂದು ಜಡವಸ್ತುವಾಗಿದೆ, ಎಂಬುದನ್ನು ನಾವು ನೋಡಿದ್ದೇವೆ. ಚಿತ್ತವನ್ನು ಜಡವಸ್ತುವೆಂದು ತಿಳಿದುಕೊಂಡು

  

ಮನುಷ್ಯನು ಅದನ್ನು ತನ್ನ ವಶಕ್ಕೆ ತರಲು ಪ್ರಯತ್ನಿಸಿದಾಗ ಮಾತ್ರ, ಅವನಿಗೆ ಆ ಪ್ರಯತ್ನದಲ್ಲಿ ಸಫಲತೆಯು ಸಿಗುತ್ತದೆ, ಅನ್ಯಥಾ ಇಲ್ಲ. ಬಹುಮಂದಿ ಸಾಧಕರು ಈ ವಿಷಯದ ಮೇಲೆ ಪ್ರವಚನಗಳನ್ನು ಕೇಳುತ್ತಾರೆ, ಅಧ್ಯಯನ ಕೂಡ ಮಾಡುತ್ತಾರೆ. ಆದರೆ, ಧ್ಯಾನಾವಸ್ಥೆಯಲ್ಲಿ ಅವರು ಚಿತ್ತವನ್ನು ಚೇತನವೆಂದೇ ತಿಳಿದುಕೊಂಡು ಮುಂದುವರಿಯುತ್ತಾರೆ. ಯಾವುದಾದರೂ ಒಂದು ವಿಷಯಧ ಮೇಲೆ ಚಿತ್ತವನ್ನು ಕೇಂದ್ರೀಕರಿಸಬೇಕೆಂದರೆ, ಅವರಿಗೆ ಅದು ಸಾಧ್ಯವಿಲ್ಲ. ಚಿತ್ತವನ್ನು ಚೇತನ ವಸ್ತುವೆಂದು ನಂಬಿಕೊಂಡು ಹೋಗುವವರು, ಭಂಗಿಕುಡಿದು ಉನ್ಮತ್ತನಾದ ವಿಮಾನ ಚಾಲಕನಂತೆ ದುರವಸ್ಥೆಗೆ ಒಳಗಾಗುತ್ತಾನೆ. ಯಾವ ರೀತಿಯಲ್ಲಿ ಉನ್ಮತ್ತನಾದ ವಿಮಾನ ಚಾಲಕನು, ಈ ಯಾನವು ತಾನಾಗಿಯೇ ದುರ್ಘಟನೆಯ ಸ್ಥಾನದಕಡೆಗೆ ಹೋಗುತ್ತದೆ, ತಾನೇನು ಮಾಡಲು ಸಾಧ್ಯ, ಎಂದುಕೊಳ್ಳುವಂತೆ, ಅಜ್ಞಾನದ ದೆಸೆಯಿಂದಾಗಿ ಮನುಷ್ಯನು, ತನ್ನ ಚಿತ್ತವು ತನ್ನನ್ನು ಎಲ್ಲೆಲ್ಲೋ ಅಲೆದಾಡಿಸುತ್ತಿದೆ, ತಾನೇನು ಮಾಡಲಿ ಎಂದು ಹೇಳುತ್ತಾನೆ. ಸಂಧ್ಯಾವಂದನೆ, ಜಪ ಇತ್ಯಾದಿ ಮಾಡುವವರ ಸ್ಥಿತಿಯು ಹೆಚ್ಚು ಕಡಿಮೆ ಹೀಗೆಯೇ ಇದೆ. ಯೋಗಾಭ್ಯಾಸಿಯು ಪರಮಾತ್ಮನನ್ನು ವಿಶ್ವದ ಎಲ್ಲಾ ಪದಾರ್ಥಗಳ ಸ್ವಾಮಿ ಎಂದುಕೊಂಡು, ತನ್ನನ್ನು ತಾನೇ ಅವನಿಗೆ ಸಮರ್ಪಣೆ ಮಾಡಿದಾಗ ಆತನ ಮನಸ್ಸು ಎಂದರೆ ಚಿತ್ತವು ಸುಲಭವಾಗಿ ಆತನ ವಶಕ್ಕೆ ಬರುತ್ತದೆ.

ಸಾಧಕನು ಯಾವಾಗ ಪ್ರಪಂಚದ ಎಲ್ಲಾ ಸುಖಗಳಲ್ಲಿ ದುಃಖವು ಮಿಶ್ರಿತವಾಗಿರುವುದನ್ನು ನೋಡುತ್ತಾನೆಯೋ, ಆಗ ಅವನು ಪ್ರಾಪಂಚಿಕ ಸುಖದ ಕಡೆಗೆ, ಆಕರ್ಷಿತನಾಗುವುದಿಲ್ಲ. ಆದುದರಿಂದ, ಯೋಗಾಭ್ಯಾಸಿಯು ಯಾವಾಗಲೂ ಪ್ರಾಪಂಚಿಕ ಸುಖದಲ್ಲಿ ದುಃಖವೂ ಸೇರಿಕೊಂಡಿದೆ ಎಂಬುದನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಧ್ಯಾನಾವಸ್ಥೆಯಲ್ಲಿ ಕುಳಿತಾಗ ಸಾಮಾನ್ಯವಾಗಿ ಮನುಷ್ಯನಿಗೆ ತಾನು ಆ ಹಿಂದೆ ನೋಡಿದ ಪದಾರ್ಥಗಳ ಸ್ಮರಣೆಯು ಬರುತ್ತದೆ. ಈ ಸ್ಮರಣೆಯನ್ನು ದೂರ ಮಾಡುವುದಕ್ಕೋಸ್ಕರ ಅವನು ಈ ಪ್ರಪಂಚದ ವಸ್ತುಗಳೆಲ್ಲಾ ಉತ್ಪತ್ತಿ ಮತ್ತು ನಾಶದ ಸ್ವಭಾವವುಳ್ಳವುಗಳೆಂದು ತಿಳಿದುಕೊಳ್ಳಬೇಕು.

ಈ ಪ್ರಪಂಚದ ಉತ್ಪತ್ತಿಯಾಗುವ ಮೊದಲು ಈಗ ಕಣ್ಣಿಗೆ ಕಾಣುತ್ತಿರುವ ಈ ಪದಾರ್ಥಗಳೆಲ್ಲಾ ಇರಲಿಲ್ಲ. ಮತ್ತು ಕಾಲಾಂತರದಲ್ಲಿ ಇವೆಲ್ಲಾ ನಶಿಸಿ ಹೋಗುತ್ತವೆ. ಈ ರೀತಿ ಪ್ರಳಯಾವಸ್ಥೆಯ ಸ್ವರೂಪವನ್ನು ಮನಸ್ಸಿಗೆ ತಂದಾಗ, ಧ್ಯಾನಾವಸ್ಥೆಯಲ್ಲಿ ಸಾಂಸಾರಿಕ ವಸ್ತುಗಳ, ರೂಪಾದಿಗುಣಗಳು ಯೋಗಾಭ್ಯಾಸಿಯನ್ನು ಬಾಧಿಸುವುದಿಲ್ಲ. ಈ ರೀತಿಯ ಉಪಾಯಗಳನ್ನು ಪುನಃ ಪುನಃ ಪ್ರಯೋಗ ಮಾಡಿದರೆ

ಮನಸ್ಸು ಖಂಡಿತವಾಗಿಯೂ ವಶಕ್ಕೆ ಬರುತ್ತದೆ. ಹೀಗೆ ತನ್ನ ಮನಸ್ಸು ವಶಕ್ಕೆ ಬಂದಾಗ ಒಬ್ಬ ಮನುಷ್ಯನಿಗೆ ಯಾವ ರೀತಿಯಲ್ಲಿ ಸ್ವತಂತ್ರತೆಯ ಆನಂದದ ಅನುಭೂತಿಯಾಗುತ್ತದೆಯೋ, ಅದು ಲೋಕದಲ್ಲಿ ಬೇರೆ ಯಾವ ಸ್ಥಿತಿಯಲ್ಲಿಯೂ ಆಗಲಿಕ್ಕೆ ಸಾಧ್ಯವಿಲ್ಲ.

**ತತಃ ಪರಮಾವಶ್ಯತೇಂದ್ರಿಯಾಣಾಂ ॥** [ಯೋಗದರ್ಶನ 2-55]

ಅರ್ಥಾತ್, ಪ್ರತ್ಯಾಹಾರವು ಸಿದ್ಧಿಸಿದಾಗ ಇಂದ್ರಿಯಗಳು ಸಂಪೂರ್ಣವಾಗಿ ವಶಕ್ಕೆ ಬರುತ್ತವೆ. ಈ ಸ್ಥಿತಿಯಲ್ಲಿ ಇಂದ್ರಿಯಗಳು ಚಿತ್ತವನ್ನು ವಿಷಯಗಳ ಕಡೆಗೆ ಆಕರ್ಷಿಸುವುದಿಲ್ಲ.

ಯೋಗದರ್ಶನದ ಈ ದ್ವಿತೀಯ ಪಾದದಲ್ಲಿ ಅವಿದ್ಯೆಯ ಸ್ವರೂಪ, ಹೇಯ ಹೇಯ ಹೇತು, ಹಾನ, ಹಾನೋಪಾಯ, ಯೋಗದ ಐದು ಅಂಗಗಳು ಮತ್ತು ಅವುಗಳ ಪ್ರಯೋಜನ ಇತ್ಯಾದಿ ವಿಷಯಗಳನ್ನು ಸಂಕ್ಷಿಪ್ತವಾಗಿ ತಿಳಿಸಲು ಪ್ರಯತ್ನಿಸಲಾಗಿದೆ. ಜಿಜ್ಞಾಸು ಸಜ್ಜನರು ಇದರ ಅಧ್ಯಯನದಿಂದ ತಾವೂ ಲಾಭಾನ್ವಿತರಾಗುತ್ತಾರೆ, ಮತ್ತು ಇತರ ಜನರಿಗೂ ಯೋಗ-ಮಾರ್ಗದಲ್ಲಿ ನಡೆಯಲಿಕ್ಕೆ ಪ್ರೇರಣೆಯನ್ನು ಕೊಡಲಿಕ್ಕೆ ಸಮರ್ಥರಾಗುತ್ತಾರೆ, ಎಂದು ನಮ್ಮ ನಂಬಿಗೆ.

ಇನ್ನೀಗ ನಾವು ಯೋಗದರ್ಶನದ ಮೂರನೆಯ ಪಾದದ ವಿಷಯದ ಕುರಿತು ಚರ್ಚೆ ಪ್ರಾರಂಭಮಾಡುತ್ತೇವೆ. ಈ ಮೂರನೆಯ ಪಾದದ ಹೆಸರು ವಿಭೂತಿಪಾದ ಎಂದು. ಇದರಲ್ಲಿ ಮುಖ್ಯವಾಗಿ ವಿಭೂತಿಗಳ ವರ್ಣನೆ ಇದೆ, ಮತ್ತು ಮೂರು ಅಂತರಂಗ ಯೋಗದ ಅಂಗಗಳ ವರ್ಣನೆಯೂ, ಇಲ್ಲಿದೆ, ಮಾತ್ರವಲ್ಲ, ಇನ್ನೂ ಅನೇಕ ವಿಷಯಗಳು ಇಲ್ಲಿ ಬರುತ್ತವೆ.

## ಧಾರಣಾ

**ದೇಶ ಬಂಧಶ್ಚಿತ್ತಸ್ಯ ಧಾರಣಾ ॥** [ಯೋಗದರ್ಶನ 3-1]

ಚಿತ್ತವನ್ನು ಯಾವುದಾದರೊಂದು ಸ್ಥಾನದಲ್ಲಿ ಸ್ಥಿರಗೊಳಿಸಿ, ತನ್ನ ಅಭೀಷ್ಟ ವಿಷಯದ ಧ್ಯಾನಮಾಡುವುದಕ್ಕೆ '**ಧಾರಣಾ**' ಎಂದು ಹೇಳುತ್ತಾರೆ. ಎಂದರೆ, ತಲೆ, ಹೃದಯ, ಅಥವಾ ತನ್ನ ಶರೀರದ ಯಾವುದಾದರೊಂದು ಸ್ಥಾನದಲ್ಲಿ ಮನಸ್ಸನ್ನು ಸ್ಥಿರಗೊಳಿಸಿ, ಓಂಕಾರ ಅಥವಾ ಗಾಯತ್ರೀ ಮಂತ್ರದ ಅರ್ಥಸಹಿತ ಜಪಮಾಡುವುದೇ ಧಾರಣೆ ಯಾಗಿದೆ. ಯಾವುದಾದರೊಂದು ಸ್ಥಾನದಲ್ಲಿ ಮನಸ್ಸನ್ನು ಸ್ಥಿರ ಗೊಳಿಸುವುದಷ್ಟೇ

ಇದು ಧಾರಣೆಯಲ್ಲ. ಋಗ್ವೇದಾದಿ ಭಾಷ್ಯಭೂಮಿಕೆಯಲ್ಲಿ, ಉಪಾಸನಾ ವಿಷಯದಲ್ಲಿ ಚರ್ಚೆ ಮಾಡುತ್ತಾ, ಮಹರ್ಷಿ ದಯಾನಂದರು, "ಉಪಾಸನಾ ಯೋಗದ ಪೂರ್ವೋಕ್ತ ಐದು ಅಂಗಗಳೂ ಸಿದ್ಧಿಸಿದಾಗ, ಅದರ ಆರನೆಯ ಅಂಗವಾದ ಧಾರಣಾ, ಇದು ಕೂಡ ಸಹಜವಾಗಿಯೇ ಸಿದ್ಧಿಸುತ್ತದೆ. ಮನಸ್ಸನ್ನು ಚಂಚಲತೆಯಿಂದ ಬಿಡಿಸಿ ಮತ್ತೆ ಅದನ್ನು ನಾಭಿ, ಹೃದಯ, ಮಸ್ತಕ, ನಾಸಿಕಾ, ಮತ್ತು ನಾಲಿಗೆಯ ಅಗ್ರಭಾಗ, ಈ ಮೊದಲಾದ ಸ್ಥಾನಗಳಲ್ಲಿ ಯಾವುದಾದರೊಂದು ಕಡೆಯಲ್ಲಿ ಸ್ಥಿರಗೊಳಿಸಿ, ಓಂಕಾರದ ಜಪ ಮತ್ತು ಅದರ ಅರ್ಥ, ಪರಮೇಶ್ವರನ ಕುರಿತಾಗಿ ವಿಚಾರ ಮಾಡಬೇಕು, ಎಂದು ಹೇಳಿದ್ದಾರೆ.

## ಧ್ಯಾನ ಶಬ್ದದ ಪರಿಭಾಷೆ

**ತತ್ರ ಪ್ರತ್ಯಯೈಕತಾನತಾ ಧ್ಯಾನಮ್ ॥** [ಯೋಗದರ್ಶನ 3-2]

ಈ ಸೂತ್ರದ ವಾಖ್ಯೆ, ಮಹರ್ಷಿ ದಯಾನಂದರ ಶಬ್ದಗಳಲ್ಲಿ ಹೀಗಿದೆ : "ಧಾರಣಾ ನಂತರ ಅದೇ ಸ್ಥಾನದಲ್ಲಿ ಧ್ಯಾನಕ್ಕೆ ಮತ್ತು ಆಶ್ರಯ ಪಡೆಯಲು ಯೋಗ್ಯನಾದ ಅಂತರ್ಯಾಮಿ, ವ್ಯಾಪಕ ಪರಮೇಶ್ವರನ ಪ್ರಕಾಶ ಮತ್ತು ಆನಂದದಲ್ಲಿ ಪೂರ್ಣ ವಿಚಾರ ಮಗ್ನರಾಗಿ, ಪ್ರೇಮ ಮತ್ತು ಭಕ್ತಿಪೂರ್ವಕವಾಗಿ, ಸಮುದ್ರವನ್ನು ನದಿಗಳು ಸೇರುವಂತೆ, ಅವನನ್ನು ಸೇರಿಕೊಳ್ಳಬೇಕು. ಆ ಸಮಯದಲ್ಲಿ ಪರಮಾತ್ಮನನ್ನು ಬಿಟ್ಟು ಬೇರೆ ಯಾವ ಪದಾರ್ಥವನ್ನೂ ಸ್ಮರಣೆ ಮಾಡಬಾರದು, ಕೇವಲ ಆ ಅಂತರ್ಯಾಮಿಯ ಸ್ವರೂಪ ಮತ್ತು ಜ್ಞಾನದಲ್ಲಿ ಮಗ್ನನಾಗಬೇಕು. ಇದನ್ನೇ ಧ್ಯಾನವೆಂದು ಹೇಳುತ್ತಾರೆ. ಈ ಏಳು ಅಂಗಗಳ ಫಲವು ಸಮಾಧಿಯಾಗಿದೆ". (ಋಗ್ವೇದಾದಿ ಭಾಷ್ಯ ಭೂಮಿಕೆಯಲ್ಲಿ - ಉಪಾಸನಾ ವಿಷಯ)

ಈ ಧ್ಯಾನದ ಸ್ಥಿತಿ ಹೇಗಿದೆ ಎಂದರೆ, ಒಬ್ಬ ಸತ್ಯವಾದಿ ವ್ಯಕ್ತಿಯು ಇನ್ನೊಬ್ಬ ವ್ಯಕ್ತಿಗೆ ಹೇಳುತ್ತಾನೆ : "ಈ ಆಳವಾದ ನೀರಿನಲ್ಲಿ ಒಂದು ಅಮೂಲ್ಯವಾದ ವಸ್ತುವು ಮುಳುಗಿ ಹೋಗಿದೆ. ನೀನು ದಯಮಾಡಿ ಈ ನೀರಿನಲ್ಲಿ ಮುಳುಗಿ ಅದನ್ನು ಮೇಲೆ ತಂದುಕೊಡುವೆಯಾ? ಇದಕ್ಕೆ ಉತ್ತರವಾಗಿ ಎರಡನೆಯ ವ್ಯಕ್ತಿಯು ಹೇಳುತ್ತಾನೆ. "ನಾನು ಆ ವಸ್ತುವನ್ನು ಹಿಂದೆ ಎಂದೂ ಕಂಡಿಲ್ಲವಲ್ಲ?" ಸತ್ಯವಾದಿಯು ಪುನಃ ಹೇಳುತ್ತಾನೆ, ಆ ವಸ್ತುವಿನ ಆಕಾರ ಹೀಗಿದೆ, ಅದು ಇಷ್ಟು ಉದ್ದ, ಇಷ್ಟು ಅಗಲ ಇದೆ ; ಎಂದು. ಆಗ ಆ ಎರಡನೆಯ ವ್ಯಕ್ತಿ ನೀರಿನಲ್ಲಿ ಮುಳುಗಿ ಆ ವಸ್ತುವನ್ನು ಹುಡುಕುತ್ತಾನೆ. ಈ ರೀತಿ ಮಾಡುವಾಗ ಅವನ ಮನಸ್ಸಿನಲ್ಲಿ ಆ ವಸ್ತುವಿನ ಆಕಾರ - ಪ್ರಕಾರಾದಿಗಳ ಹೊರತು ಬೇರೆ ಯಾವ ವಿಷಯದ ಯೋಚನೆಯೂ ಬರುವುದಿಲ್ಲ.

ಧ್ಯಾನದ ಸ್ಥಿತಿಯೂ ಇದೇ ಆಗಿದೆ. ವೇದಗಳು ಮತ್ತು ವೇದಾನುಕೂಲ ಶಾಸ್ತ್ರಗಳು ಪರಮಾತ್ಮನ ವಾಸ್ತವಿಕ ಸ್ವರೂಪದ ವರ್ಣನೆಯನ್ನು ಇದೇ ರೀತಿ ಮಾಡುತ್ತಿವೆ. ಪರಮಾತ್ಮನ ಆ ವಾಸ್ತವಿಕ ಸ್ವರೂಪವನ್ನೇ ಮನಸ್ಸಿನಲ್ಲಿ ಇಟ್ಟುಕೊಂಡು ಅವನ ಧ್ಯಾನಮಾಡಬೇಕು. ಮತ್ತು ಅವನನ್ನು ಹುಡುಕುವಾಗ ಮನಸ್ಸಿನಲ್ಲಿ ಅವನ ಸ್ವರೂಪವನ್ನು ಬಿಟ್ಟು ಬೇರೆ ಯಾವ ವಸ್ತುವನ್ನು ಮನಸ್ಸಿಗೆ ತರಬಾರದು ; ಪರಮಾತ್ಮ, ಸರ್ವರಕ್ಷನಾಗಿದ್ದಾನೆ, ಅವನು ಸರ್ವವ್ಯಾಪಕನು, ಸರ್ವಜ್ಞನು, ಆನಂದ ಸ್ವರೂಪನು, ಸರ್ವಶಕ್ತಿಶಾಲಿ ಇತ್ಯಾದಿ, ಅವನ ಸ್ವರೂಪದ ವರ್ಣನೆಗಳು.(ಅನ್ಯಥಾ ವಿಚಾರಿಸಬಾರದು) ಇದೇ ಪರಮಾತ್ಮನ ಧ್ಯಾನಮಾಡುವ ರೀತಿಯಾಗಿದೆ.

ಕೆಲವರು ಯಾವುದಾದರೊಂದು ವಸ್ತುವಿಗೆ ರೂಪ, ಆಕಾರ, ಉದ್ದ, ಅಗಲ, ಇತ್ಯಾದಿ ಇಲ್ಲದಿದ್ದರೆ, ಅದರ ಧ್ಯಾನಮಾಡಲಿಕ್ಕೆ ಸಾಧ್ಯವಿಲ್ಲವೆಂದು ಹೇಳುತ್ತಾರೆ. ನಿಜವಾಗಿ ನೋಡಿದರೆ ಇದು ಸರಿಯಲ್ಲ. ಯಾಕೆಂದರೆ, ಸುಖಕ್ಕೆ ಯಾವರೂಪವೂ ಇಲ್ಲ, ಬಣ್ಣವೂ ಇಲ್ಲ, ಆಕಾರವೂ ಇಲ್ಲ, ಆದರೂ ಕೂಡ ಲಕ್ಷಗಟ್ಟಳೆ ಜನರು ನಿತ್ಯವೂ ರಾತ್ರಿ-ಹಗಲೂ ಸುಖದ ಧ್ಯಾನ ಮಾಡುತ್ತಾರೆ. ದುಃಖವೂ ಹೀಗೇನೆ. ಅದಕ್ಕೆ ಕೈಕಾಲು ಇಲ್ಲ. ಆದರೂ ಕೂಡ ಜನರು ಅದರ ಚಿಂತನೆ ಮಾಡುತ್ತಾರೆ. ದುಃಖವು ತಮ್ಮ ಬಳಿಗೆ ಎಂದಿಗೂ ಬರದೇ ಇರಲಿ ಎಂದು ಅವರು ಬಯಸುತ್ತಾರೆ. ಶಬ್ದದ ಧ್ಯಾನವನ್ನು ನಾವು ಮಾಡುತ್ತೇವೆ. ಅದರ ಧ್ಯಾನದಿಂದ ನಮಗೆ ಅದು ದೊರಕುತ್ತದೆ, ಮತ್ತು ಅದರಿಂದ ನಾವು ಅನೇಕ ಪ್ರಯೋಜನಗಳನ್ನು ಪಡೆಯುತ್ತೇವೆ. ಇದರಿಂದಲೂ ಸಿದ್ಧವಾಗುತ್ತದೆ, ಏನೆಂದರೆ, ಕೇವಲ ರೂಪ ಅಥವಾ ಆಕೃತಿ ಇರುವ ವಸ್ತುಗಳ ಧ್ಯಾನವನ್ನು ನಾವು ಮಾಡಬಹುದು. ರೂಪ ಅಥವಾ ಆಕಾರ ಇಲ್ಲದ ವಸ್ತುಗಳ ಧ್ಯಾನ ಮಾಡಲಿಕ್ಕೆ ಸಾಧ್ಯವಿಲ್ಲ ಎಂಬ ವಾದ ಸುಳ್ಳು ಎಂದು.

ಪರಮಾತ್ಮನಲ್ಲಿ ಜ್ಞಾನ, ಬಲ, ಆನಂದಾದಿ ಗುಣಗಳಿವೆ. ಈ ಗುಣಗಳ ಚಿಂತನೆಯ ಮೂಲಕವೇ ಅವನ ಧ್ಯಾನವನ್ನು ಮಾಡಲಾಗುತ್ತದೆ. ಈ ರೀತಿಯ ಧ್ಯಾನದಿಂದಲೇ ಸಮಾಧಿ ಮತ್ತು ಸಮಾಧಿಯಿಂದ ಪರಮಾತ್ಮನ ಸಾಕ್ಷಾತ್ಕಾರವಾಗುತ್ತದೆ. ಒಂದು ವಸ್ತುವಿನಲ್ಲಿ ಯಾವ ಗುಣಗಳಿವೆಯೋ ಆ ಗುಣಗಳ ಮೂಲಕವೇ ಆ ವಸ್ತುವನ್ನು ಧ್ಯಾನಿಸಲಾಗುತ್ತದೆ. ಬೇರೆ ಯಾವ ರೀತಿಯಿಂದಲೂ ಅಲ್ಲ.

ಪರಮಾತ್ಮನಿಗೆ ರೂಪ, ಆಕಾರ, ಕೈ, ಕಾಲು ಇತ್ಯಾದಿ ಯಾವುದೂ ಇಲ್ಲದಿರುವಾಗ ಅವನ ರೂಪ, ಕೈ, ಕಾಲು ಇತ್ಯಾದಿಗಳ ಕಲ್ಪನೆಮಾಡಿ ಅವುಗಳ ಧ್ಯಾನ ಮಾಡುವುದು ನಿರರ್ಥಕವಾಗಿದೆ. ಯಾಕೆಂದರೆ, ಇಂತಹ ಧ್ಯಾನದಿಂದ

ಮನುಷ್ಯನಿಗೆ ಪರಮಾತ್ಮನ ಪ್ರಾಪ್ತಿಯು ಎಂದಿಗೂ ಆಗಲಿಕ್ಕೆ ಸಾಧ್ಯವಿಲ್ಲ. ಪರಮಾತ್ಮನಲ್ಲಿ ಇಂತಹ ಗುಣಗಳು ಇಲ್ಲವೇ ಇಲ್ಲ. ಪರಮಾತ್ಮನಲ್ಲಿ ಯಾವ ಗುಣಗಳು ಇಲ್ಲವೋ ಆ ಗುಣಗಳ ಕಲ್ಪನೆಮಾಡಿ, ಈ ರೀತಿ ಕಪೋಲ ಕಲ್ಪಿತ ವಸ್ತುಗಳ ಧ್ಯಾನಮಾಡುವುದು ನಿಜವಾದ ಧ್ಯಾನವೇ ಅಲ್ಲ. ಲಕ್ಷಗಟ್ಟಳೆ ಜನರು ಪರಮಾತ್ಮನ ಪ್ರಾಪ್ತಿಯಾಗಬೇಕೆಂದು ಬಯಸುತ್ತಾರೆ. ಆದರೆ, ಅವರು ನಿಜವಾಗಿಯೂ ಪರಮಾತ್ಮನ ಧ್ಯಾನವನ್ನು ಮಾಡುವುದನ್ನು ಬಿಟ್ಟು ಪರಮಾತ್ಮನ ಹೆಸರಿನಲ್ಲಿ ಅನ್ಯವಸ್ತುಗಳ ಧ್ಯಾನ ಮಾಡುತ್ತಿರುತ್ತಾರೆ. ಈ ರೀತಿಯ ದೋಷಯುಕ್ತವಾದ ಧ್ಯಾನದಿಂದ ಮಾನವ ಸಮಾಜಕ್ಕೆ ತುಂಬಾ ಹಾನಿಯಾಗುತ್ತದೆ. ಒಂದು ವೇಳೆ ಪ್ರಪಂಚದಲ್ಲಿರುವ ದೇವರ ಭಕ್ತರೆಲ್ಲಾ ನಿಜವಾಗಿಯೂ ಸರಿಯಾದ ರೀತಿಯಲ್ಲಿ ದೇವರ ಧ್ಯಾನವನ್ನು ಮಾಡುತ್ತಿದ್ದರೆ, ಅವರೆಲ್ಲಾ ಬುದ್ಧಿವಂತರೂ, ಬಲಶಾಲಿಗಳೂ ಮತ್ತು ಸದಾಚಾರಿಗಳೂ ಆಗಿ ಸಂಪೂರ್ಣ ಆನಂದದಿಂದ ಇರುತ್ತಿದ್ದರು, ಮಾತ್ರವಲ್ಲ, ಪ್ರಪಂಚದಲ್ಲಿ ಈಗ ಇರುವ ದೇವರನ್ನು ನಂಬಿದ ಜನರಲ್ಲಿ ನಡೆಯುತ್ತಿರುವ ಪರಸ್ಪರ ಜಗಳಗಳೆಲ್ಲಾ ಯಾವುದೂ ಆಗುತ್ತಿರಲಿಲ್ಲ. ಆದುದರಿಂದ ಪರಮಾತ್ಮನ ಸತ್ಯಸ್ವರೂಪವನ್ನು ತಿಳಿದುಕೊಂಡು ಜನರೆಲ್ಲಾ ಅವನ ನಿಜವಾದ ಧ್ಯಾನವನ್ನು ಮಾಡುವಂತೆ ನಾವು ಪ್ರಯತ್ನಿಸಬೇಕು. ಇದರಿಂದಲೇ ಎಲ್ಲರಿಗೂ ಕ್ಷೇಮವಾಗಲಿಕ್ಕೆ ಸಾಧ್ಯವಿದೆ. ಅನ್ಯಥಾ ಇಲ್ಲ.

ಈಗ ಒಂದು ಪ್ರಶ್ನೆಯು ಉತ್ಪನ್ನವಾಗುತ್ತದೆ : ಅದೇನೆಂದರೆ "**ಧ್ಯಾನಂ ನಿರ್ವಿಷಯಂ ಮನಃ**" ಎಂದು ಸಾಂಖ್ಯದರ್ಶನ (6-25)ರಲ್ಲಿ ಹೇಳಿದೆ. ಇದರ ಅರ್ಥ ಮನಸ್ಸು ಸಂಪೂರ್ಣವಾಗಿ ಯಾವ ವಿಷಯದ ಕುರಿತಾಗಿಯೂ ಯೋಚಿಸದಿರುವುದೇ ಧ್ಯಾನ ಎಂಬಂತೆ ತೋರುತ್ತದೆ. ಆದರೆ ಇದು ಈ ಸೂತ್ರದ ನಿಜವಾದ ಅರ್ಥ ಅಲ್ಲ. ಈ ಸೂತ್ರದ ನಿಜವಾದ ಅರ್ಥ "**ಧ್ಯಾನಮೇಕ ವಿಷಯಂ ಮನಃ**" ಎಂದರೆ, ಮನಸ್ಸನ್ನು ದೀರ್ಘಕಾಲ ಯಾವುದಾದರೊಂದು ಸ್ಥಾನದಲ್ಲಿ ಸ್ಥಿರಪಡಿಸಿ, ಪರಮಾತ್ಮನನ್ನು ಹುಡುಕುತ್ತಾ ಹೋಗುವಾಗ ಅನ್ಯವಿಷಯಗಳು ಮನಸ್ಸಿಗೆ ಬರುವುದಿಲ್ಲ. ಇಂತಹ ಸ್ಥಿತಿಗೆ ಧ್ಯಾನವೆಂದು ಹೇಳುತ್ತಾರೆ. ಜೀವರು ನಿಜವಾಗಿಯೂ ಪರಮಾತ್ಮನನ್ನು ಹುಡುಕುವಾಗ, ಬೇರೆ ವಿಷಯಗಳನ್ನು ಅವರು ಮನಸ್ಸಿನಲ್ಲಿ ಬರಲಿಕ್ಕೆ ಬಿಡುವುದಿಲ್ಲ. ಇದೇ ದೇವರ ಧ್ಯಾನ, ಹೊರತು, ಮನಸ್ಸಿನಲ್ಲಿ ಯಾವ ವಿಷಯವೂ ಇಲ್ಲದಿರುವ ಸ್ಥಿತಿಯು ಧ್ಯಾನವಲ್ಲ. ಆದುದರಿಂದ ಯಾವಾಗ ಸಫಲತೆಗೆ, ಧ್ಯಾನದ ಸ್ವರೂಪವನ್ನು ಚೆನ್ನಾಗಿ ತಿಳಿದುಕೊಳ್ಳಬೇಕಾದುದು ಬಹಳ ಅಗತ್ಯ. ಈ ರೀತಿ ತಿಳಿದುಕೊಂಡ ಮೇಲೆ ತದನುಸಾರವಾಗಿ ಪ್ರಯತ್ನಿಸಿದರೆ ಯೋಗವು ಸಿದ್ಧಿಸುತ್ತದೆ.

## ಸಮಾಧಿ ಪಾದ

**ತದೇವಾರ್ಥ ಮಾತ್ರನಿರ್ಭಾಸಂ ಸ್ವರೂಪಶೂನ್ಯಮಿವ ಸಮಾಧಿಃ ॥**

[ಯೋಗದರ್ಶನ 3-3]

ಈ ಸೂತ್ರದ ಅರ್ಥವನ್ನು ಮಹರ್ಷಿ ದಯಾನಂದರು ಹೀಗೆಂದು ವಿವರಿಸಿದ್ದಾರೆ: "ಯಾವ ರೀತಿಯಲ್ಲಿ ಉರಿಯುತ್ತಿರುವ ಬೆಂಕಿಯ ಮಧ್ಯದಲ್ಲಿ ಇಟ್ಟಿರುವ ಒಂದು ಕಬ್ಬಿಣದ ಶಲಾಕೆಯು (ತನ್ನ ಕಪ್ಪು ಸ್ವರೂಪವನ್ನು ತತ್ಕಾಲ ಕಳೆದುಕೊಂಡಂತೆ ಆಗಿ) ಕೆಂಪಾಗಿ ಬೆಂಕಿಯಂತೆ ರೂಪತಾಳಿ ಹೊಳೆಯುತ್ತದೆಯೋ, ಅದೇ ರೀತಿಯಲ್ಲಿ ಒಬ್ಬ ಸಾಧಕನು ಪರಮಾತ್ಮನ ಧ್ಯಾನದಲ್ಲಿ ಮಗ್ನನಾದಾಗ ಅವನು ತನ್ನನ್ನು ತಾನೇ, ಎಂದರೆ, ತನ್ನ ಶರೀರವನ್ನು ಮರೆತು ಬಿಡುವಂತಹ ಸ್ಥಿತಿಗೆ ಬಂದು, ಅವನ ಆತ್ಮವು ಪರಮಾತ್ಮನ ಜ್ಞಾನದಲ್ಲಿ ಮುಳುಗಿ, ಪ್ರಕಾಶಮಯವಾಗಿ, ಆನಂದದಿಂದ ತುಂಬುವುದಕ್ಕೆ '**ಸಮಾಧಿ**' ಎಂದು ಹೇಳುತ್ತಾರೆ." (ಋಗ್ವೇದಾದಿ ಭಾಷ್ಯಭೂಮಿಕೆಯಲ್ಲಿ ಉಪಾಸನಾ ವಿಷಯ) ಇದರ ತಾತ್ಪರ್ಯವೇನೆಂದರೆ, ಧ್ಯಾನವೇ ಎಲ್ಲಾ ವಸ್ತುಗಳನ್ನೂ ಪ್ರಕಾಶಿಸುತ್ತದೆ, ಮತ್ತು ಆಗ ವಸ್ತುಗಳ ತಮ್ಮ ಸ್ವರೂಪವು (ತತ್ಕಾಲಕ್ಕೆ) ಮರೆಯಾದಂತೆ ಕಾಣುತ್ತದೆ. ಈ ಸ್ಥಿತಿಗೆ'ಸಮಾಧಿ'ಎನ್ನುತ್ತಾರೆ.

**ಪ್ರಶ್ನೆ** :– ಸ್ವರೂಪಶೂನ್ಯವೆಂದರೆ, ಸಮಾಧಿಯ ಸ್ಥಿತಿಯಲ್ಲಿ ಸಾಧಕನು ಶೂನ್ಯತೆಯನ್ನು ಹೊಂದುವುದು, ಎಂದರೆ ಆಗ ಅವನಿಗೆ ಯಾವ ವಸ್ತುವಿನ ಜ್ಞಾನವೂ ಇರುವುದಿಲ್ಲ, ಎಂದು ಕೆಲವರ ಅಭಿಪ್ರಾಯ?

**ಉತ್ತರ**:– ಈ ಅಭಿಪ್ರಾಯವು ಸರಿಯಲ್ಲ. ಯಾಕೆಂದರೆ, ಸಮಾಧಿಯ ಸ್ಥಿತಿಯಲ್ಲಿ ವಸ್ತುಗಳು ಪ್ರಕಾಶಿಸುತ್ತವೆ ಎಂದು ಸೂತ್ರಕಾರರು ಹೇಳಿರುವಾಗ, ಮನುಷ್ಯನು, ಆಗ ಜ್ಞಾನಶೂನ್ಯನಾಗುತ್ತಾನೆ ಎಂದು ಹೇಳುವುದು ಹೇಗೆ ಸಾಧ್ಯ? ಒಂದು ವೇಳೆ, ಈ ಪ್ರಶ್ನೆಯಲ್ಲಿ ಹೇಳಿರುವಂತೆ ಸಮಾಧಿಯಲ್ಲಿ ಜ್ಞಾನದ ಅಭಾವವು ಉತ್ಪನ್ನವಾಗುತ್ತದೆ ಎಂದಾದರೆ, ವಸ್ತುಗಳ ಸಾಕ್ಷಾತ್ಕಾರವು ಹೇಗೆ ಸಂಭವ? ಸಾಕ್ಷಾತ್ಕಾರವು ಸಂಭವವಾದರೆ, ಸಮಾಧಿಸ್ಥನಾದ ವ್ಯಕ್ತಿಯು ಜ್ಞಾನಶೂನ್ಯನಾಗಲು ಸಾಧ್ಯವಿಲ್ಲ. ಒಂದು ವೇಳೆ ಜ್ಞಾನದ ಅಭಾವದ ಸ್ಥಿತಿಯನ್ನು ಸಮಾಧಿಯೆಂದು ಯಾರಾದರೂ ಹೇಳುವುದಾದರೆ, ಮದಕಾರಿ ದ್ರವ್ಯಗಳ ಸೇವನೆಯಿಂದ ಕೆಲವರಿಗೆ ಮೂರ್ಛೆ ಬರುವುದುಂಟು. ಇದನ್ನೂ ನಾವು ಸಮಾಧಿ ಎಂದು ಹೇಳಬೇಕೆ? ಆದುದರಿಂದ ಈ ಅಭಿಪ್ರಾಯವು ತಪ್ಪು.

## ವಿಭೂತಿ ಪಾದ

**ಯೋಗದ ವಿಭೂತಿಗಳು :-** ಯೋಗದರ್ಶನದ ತೃತೀಯ ಅಧ್ಯಾಯಕ್ಕೆ ವಿಭೂತಿಪಾದವೆಂದು ಹೆಸರು. ವಿಭೂತಿ ಎಂದರೆ ಯೋಗಾಭ್ಯಾಸದಿಂದ ಪ್ರಾಪ್ತವಾಗುವ ಜ್ಞಾನ, ಬಲ, ಸುಖ ಇತ್ಯಾದಿಗಳು. ಈ ಪಾದದಲ್ಲಿ ಅನೇಕ ಪ್ರಕಾರದ ವಿಭೂತಿಗಳ ವರ್ಣನೆ ಇದೆ. ಸಂಯಮದಿಂದ ಸಿದ್ಧವಾಗುವ ವಿಭೂತಿಗಳ ವಿಶೇಷ ವರ್ಣನೆ ಇದೆ. ಯಾವುದಾದರೊಂದು ವಿಷಯದ ಮೇಲೆ ಧಾರಣೆ, ಧ್ಯಾನ ಮತ್ತು ಸಮಾಧಿ, ಇವುಗಳ ಕೇಂದ್ರೀಕರಣಕ್ಕೆ ಸಂಯಮವೆನ್ನುತ್ತಾರೆ. ಇದೊಂದು ಪಾರಿಭಾಷಿಕ ಶಬ್ದವಾಗಿದೆ. ಧಾರಣೆ, ಧ್ಯಾನ ಮತ್ತು ಸಮಾಧಿ, ಇವು ಮೂರನ್ನು ಬೇರೆ ಬೇರೆಯಾಗಿ ಹೆಸರೆತ್ತದೆ, ಇವುಗಳ ಬದಲಿಗೆ ಸಂಯಮವೆಂಬ ಈ ಪಾರಿಭಾಷಿಕ ಶಬ್ದವನ್ನು ಯೋಗದರ್ಶನದಲ್ಲಿ ಪ್ರಯೋಗಿಸಲಾಗಿದೆ.

ವಿಭೂತಿಗಳ ಕುರಿತಾಗಿ ಒಂದು ಪ್ರಶ್ನೆಯು ಉತ್ಪನ್ನವಾಗುತ್ತದೆ. ಅದೇನೆಂದರೆ, ವಿಭೂತಿಗಳನ್ನು ಪ್ರಾಪ್ತಿಮಾಡಿಕೊಳ್ಳದೆ, ಯೋಗಿಯಾಗಲು ಸಾಧ್ಯವಿದೆಯೆ? ಎಂಬುದಾಗಿ. ಇದಕ್ಕೆ ಉತ್ತರ : "ಈ ವಿಭೂತಿಗಳನ್ನು ಪ್ರಾಪ್ತಿಮಾಡಿಕೊಳ್ಳದೆಯೂ ಒಬ್ಬ ವ್ಯಕ್ತಿಯು ಯೋಗಿಯಾಗಲಿಕ್ಕೆ ಸಾಧ್ಯವಿದೆ." ಸೂತ್ರಕಾರರು "**ತೇ ಸಮಾಧಾವುಪಸರ್ಗಾವ್ಯುತ್ಥಾನೇ ಸಿದ್ಧಯಃ**" [ಯೊ. ದ. 3-37] ಎಂದು ಹೇಳಿದ್ದಾರೆ. ಅರ್ಥಾತ್, ಈ ಪ್ರಾತಿಭ, ಶ್ರಾವಣ, ವೇದನ, ಆದರ್ಶ, ಆಸ್ವಾದ, ವಾರ್ತಾ ಇತ್ಯಾದಿ ಸಿದ್ಧಿಗಳು ಸಮಾಧಿಯಲ್ಲಿ ವಿಘ್ನಗಳಾಗಿವೆ. ಸಾಂಸಾರಿಕ ಸ್ಥಿತಿಯಲ್ಲಿ ಮಾತ್ರ ಈ ಸಿದ್ಧಿಗಳಿಗೆ, ಮಹತ್ವವಿದೆ.

**ತದ್ವೈರಾಗ್ಯಾದಪಿ ದೋಷಬೀಜಕ್ಷಯೋ ಕೈವಲ್ಯಮ್ ॥**

[ಯೋಗದರ್ಶನ 3-50]

ಈ ಸಿದ್ಧಿಗಳ ಬಗ್ಗೆ ವೈರಾಗ್ಯ ತಾಳಿದಾಗ, ದೋಷಗಳು ಬೀಜಸಹಿತವಾಗಿ ನಶಿಸಿ, ಮೋಕ್ಷದ ಪ್ರಾಪ್ತಿಯಾಗುತ್ತದೆ. (ಇದರಿಂದ ವಿಭೂತಿಗಳ ಸಿದ್ಧಿಯು ಮೋಕ್ಷಮಾರ್ಗಕ್ಕೆ ತೊಂದರೆಯನ್ನು ಕೊಡುತ್ತದೆ ಎಂದೂ, ವಿಭೂತಿಗಳ ಪ್ರದರ್ಶನ ಮಾಡುವವರು, ಶುದ್ಧ ಸಾಂಸಾರಿಕ ವ್ಯಕ್ತಿಗಳೆಂದೂ ಸ್ಪಷ್ಟವಾಗುತ್ತದೆ).

**ಸತ್ವ ಪುರುಷಯೋಃ ಶುದ್ಧಿಸಾಮ್ಯೇ ಕೈವಲ್ಯಮಿತಿ ॥**

[ಯೋಗದರ್ಶನ 3-55]

ಮಹರ್ಷಿದಯಾನಂದರು, ಋಗ್ವೇದಾದಿ ಭಾಷ್ಯಭೂಮಿಕೆಯಲ್ಲಿ, ಮುಕ್ತಿಯ ವಿಷಯ ಕುರಿತು ಚರ್ಚೆ ಮಾಡುತ್ತಾ, ಈ ಸೂತ್ರದ ಅರ್ಥವನ್ನು ಈ ರೀತಿ

ವಿವರಿಸಿದ್ದಾರೆ :"ಸತ್ವ ಎಂದರೆ, ಬುದ್ಧಿ, ಮತ್ತು ಪುರುಷ, ಎಂದರೆ 'ಜೀವ, ಇವೆರಡೂ ಶುದ್ಧವಾದಾಗ ಮಾತ್ರ ಮುಕ್ತಿಯು ದೊರೆಯುತ್ತದೆ, ಅನ್ಯಥಾ ಇಲ್ಲ". ಈ ಸೂತ್ರದ ವ್ಯಾಸಭಾಷೆಯಲ್ಲಿ ಹೀಗೆಂದು ಹೇಳಿದ್ದಾರೆ. "**ಏತಸ್ಯಾಮವಸ್ಥಾಯಾಂ ಕೈವಲ್ಯಂ ಭವತೀಶ್ವರಸ್ಯಾನೀಶ್ವರಸ್ಯ ವಾ ವಿವೇಕ ಜ್ಞಾನ ಭಾಗಿನ ಇತರಸ್ಯವಾ ॥**" ಅರ್ಥಾತ್, (ಬುದ್ಧಿ ಮತ್ತು ಜೀವದ ಶುದ್ಧಿಯ) ಈ ಸ್ಥಿತಿಯಲ್ಲಿ, ವ್ಯಕ್ತಿಯು ಐಶ್ವರ್ಯವಂತನೇ ಇರಲಿ ಅಥವಾ ದರಿದ್ರನೇ ಇರಲಿ, ವಿವೇಕ ಮತ್ತು ಜ್ಞಾನವು ಅವನಿಗೆ ಲಭಿಸಿರಲಿ ಅಥವಾ ಲಭಿಸದಿರಲಿ, ಮೋಕ್ಷವು ಪ್ರಾಪ್ತವಾಗುತ್ತದೆ. ಇದರಿಂದಲೂ, ಸಂಯಮದಿಂದ ಪ್ರಾಪ್ತವಾಗುವ ಸಿದ್ಧಿಗಳು ಮುಮುಕ್ಷುವಿಗೆ ಅನಾವಶ್ಯಕವಾಗಿವೆ. ಅನೇಕ ಮಂದಿ ಸಾಧಕರು ಇಂತಹ ಸಿದ್ಧಿಗಳನ್ನು ಕಂಡು ಮೋಕ್ಷ ಪ್ರಾಪ್ತಿಯ ಪ್ರಯತ್ನವನ್ನೇ ಬಿಟ್ಟು ಬಿಡುತ್ತಾರೆ. ಮೋಕ್ಷ ಪ್ರಾಪ್ತಿಗೆ ಈ ಎಲ್ಲಾ ಸಿದ್ಧಿಗಳು ಆವಶ್ಯಕವೆಂದು ಅವರ ತಿಳುವಳಿಕೆ. ಯಾರಿಗೆ ಈ ಸಿದ್ಧಿಗಳನ್ನು ಪ್ರಾಪ್ತಿಮಾಡಿಕೊಳ್ಳಲಿಕ್ಕೆ ಆಗುವುದಿಲ್ಲವೋ, ಅವರು ಇವು ಅವಶ್ಯಕವಲ್ಲವೆಂದು ಹೇಳುತ್ತಾರೆ, ಎಂದು ಇವರು ತರ್ಕಮಾಡುತ್ತಾರೆ. ಇದು ಇವರ ತಪ್ಪುಕಲ್ಪನೆ. ಮೋಕ್ಷದ ಪ್ರಾಪ್ತಿಗೆ ಸಿದ್ಧಿಗಳ ಅವಶ್ಯಕತೆ ಇಲ್ಲ. ಮೋಕ್ಷಪ್ರಾಪ್ತಿಗೆ ಶುದ್ಧ ಜ್ಞಾನ, ಶುದ್ಧ ಕರ್ಮ, ಮತ್ತು ಶುದ್ಧ ಉಪಾಸನೆಯು ಬೇಕು. ಇವಿಲ್ಲದೆ ಯಾವ ವ್ಯಕ್ತಿಯೂ ಕೂಡ ಯೋಗಿಯಾಗಿ ಮುಕ್ತಿಯನ್ನು ಪಡೆಯಲಿಕ್ಕೆ ಸಾಧ್ಯವಿಲ್ಲ.

## ಕೈವಲ್ಯ ಪಾದ

ಈ ಅಧ್ಯಾಯದಲ್ಲಿ ಮುಖ್ಯವಾಗಿ ಕೈವಲ್ಯದ ವರ್ಣನೆ ಇದೆ. ಆದುದರಿಂದ ಇದಕ್ಕೆ ಕೈವಲ್ಯಪಾದ–ವೆಂದು ಹೆಸರು. ಈ ಪಾದದಲ್ಲಿ ಇನ್ನೂ ಅನೇಕ ವಿಷಯಗಳ ಚರ್ಚೆ ಇದೆ. ಚಿತ್ತವನ್ನು ಕೈವಲ್ಯಪ್ರಾಪ್ತಿಗೆ ಯೋಗ್ಯವನ್ನಾಗಿ ಹೇಗೆ ಮಾಡುವುದು, ನಾಲ್ಕು ಪ್ರಕಾರದ ಕರ್ಮಗಳು ಯಾವುವು ಮತ್ತು ಅವುಗಳ ಸ್ವರೂಪವೇನು, ಈ ರೀತಿ ಅನೇಕ ವಿಷಯಗಳ ಮೇಲೆ ಇಲ್ಲಿ ಬೆಳಕನ್ನು ಹಾಕಲಾಗಿದೆ.

### ಚಿತ್ತವನ್ನು ಕೈವಲ್ಯಕ್ಕೆ ಯೋಗ್ಯವನ್ನಾಗಿ ಹೇಗೆ ಮಾಡುವುದು

**ತತ್ರ ಧ್ಯಾನ ಜಮನಾಶಯಮ್ ॥** [ಯೋಗದರ್ಶನ 4-6]

ಅರ್ಥಾತ್, ಭಿನ್ನ ಭಿನ್ನ ಸ್ಥಿತಿಯನ್ನು ಹೊಂದುವ ಸ್ವಭಾವವುಳ್ಳ ಚಿತ್ತವನ್ನು ಧ್ಯಾನದ ಮೂಲಕ ಸುಸಂಸ್ಕೃತವನ್ನಾಗಿ ಮಾಡಿದಾಗ ಅದು ಅನಾಶಯ = ವಾಸನಾರಹಿತವಾಗಿ

ಮುಕ್ತಿಯ ಸಾಧನವಾಗಿ ಪರಿಣಮಿಸುತ್ತದೆ. ಈ ಸೂತ್ರದಲ್ಲಿ 'ಧ್ಯಾನಜಂ' ಎಂಬ ಶಬ್ದವು ಬಂದಿದೆ. ಇದರ ಅರ್ಥ ಧ್ಯಾನದ ಮೂಲಕ ಉತ್ಪನ್ನವಾಗುವ ಹೊಸ ಚಿತ್ತವೆಂದಾಗುವುದಿಲ್ಲ. ಧ್ಯಾನಜಂ ಎಂದರೆ ಧ್ಯಾನದ ಮೂಲಕ ಸುಸಂಸ್ಕೃತವನ್ನಾಗಿ ಮಾಡಿದ ಚಿತ್ತವೆಂದು ಅರ್ಥ. ಧ್ಯಾನದ ಮೂಲಕ ಚಿತ್ತದ ಅಶುಭ ಸಂಸ್ಕಾರಗಳನ್ನು ದೂರಮಾಡಲಾಗುತ್ತದೆ, ಮತ್ತು ಮೋಕ್ಷಪ್ರಾಪ್ತಿಯ ಸಾಮರ್ಥ್ಯವನ್ನು ಅದರಲ್ಲಿ ತುಂಬಿಸಲಾಗುತ್ತದೆ.

ನಿಷ್ಕಾಮ ಕರ್ಮವು ಕೂಡ ಮೋಕ್ಷದ ಸಾಧನವಾಗಿದೆ. ಆದುದರಿಂದ ಸೂತ್ರಕಾರರು ಹೇಳುತ್ತಾರೆ !

**ಕರ್ಮಾ ಶುಕ್ಲಾಕೃಷ್ಣಾಂ ಯೋಗಿನ ಸ್ತ್ರಿವಿಧಮಿತರೇಷಾಂ ॥**

[ಯೋಗದರ್ಶನ 4-7]

ಈ ಸೂತ್ರದ ಅರ್ಥವೇನೆಂದರೆ, ಕರ್ಮದಲ್ಲಿ ನಾಲ್ಕು ವಿಧಗಳಿವೆ : ಕೃಷ್ಣ = ಪಾಪಕರ್ಮ, ಶುಕ್ಲ = ಪುಣ್ಯಕರ್ಮ, ಶುಕ್ಲಕೃಷ್ಣ = ಪುಣ್ಯ ಪಾಪ ಮಿಶ್ರಿತ ಕರ್ಮ ಮತ್ತು ಅಶುಕ್ಲಾಕೃಷ್ಣ ಕರ್ಮ = ನಿಷ್ಕಾಮ ಕರ್ಮ. ಉದಾಹರಣೆಗಾಗಿ, ವೇದಗಳನ್ನು ಕಲಿತು ವಿದ್ವಾಂಸನಾಗುವುದು ಮತ್ತು ಇತರರಿಗೂ ವಿದ್ಯೆಯನ್ನು ಕಲಿಸುವುದು. ಇದು ಶುಕ್ಲ ಕರ್ಮವಾಗಿದೆ. ಇದರಿಂದ ಯಾರಿಗೂ ಏನೂ ವಿಶೇಷ ಹಾನಿ ಆಗುವುದಿಲ್ಲ. ಒಬ್ಬ ವ್ಯಕ್ತಿಯು ಯಾರೋ ಒಬ್ಬ ಮಹಾಪುರುಷನಿಗೆ ಬೈಯ್ಯುತ್ತಾನೆ, ಎಂದು ಕೊಳ್ಳಿರಿ, ಇದು ಕೃಷ್ಣಕರ್ಮವಾಗಿದೆ. ಇನ್ನೊಬ್ಬ ವ್ಯಕ್ತಿಯು ಒಂದು ವಿಶಿಷ್ಟ ಪ್ರಕಾರದ ಕರ್ಮವನ್ನು ಮಾಡುತ್ತಿದ್ದಾನೆ, ಎಂದು ಕೊಳ್ಳಿರಿ. ಆ ಕರ್ಮದಿಂದ ತುಂಬಾಹಾನಿಯೂ ಆಗುತ್ತದೆ, ಲಾಭವೂ ಆಗುತ್ತದೆ. ಉದಾಹರಣೆಗಾಗಿ ಕೃಷಿಯನ್ನು ಮಾಡುವಾಗ ಅನೇಕ ಪ್ರಾಣಿಗಳಿಗೆ ಹಿಂಸೆಯಾಗುತ್ತದೆ. ಆದರೆ, ಆ ಕರ್ಮದಿಂದ ಉತ್ಪನ್ನವಾಗುವ ಅನ್ನದಿಂದ ವಿದ್ಯೆ, ಧರ್ಮ ಇತ್ಯಾದಿಗಳ ಪ್ರಚಾರಕ್ಕೆ ತುಂಬಾ ಸಹಾಯವಾಗುತ್ತದೆ. ಆದುದರಿಂದ ಇಂತಹ ಕರ್ಮವನ್ನು ಕೃಷ್ಣಶುಕ್ಲ ಕರ್ಮವೆಂದು ಹೇಳುತ್ತಾರೆ. ಲೌಕಿಕ ಕಾಮನೆಗಳನ್ನು ಬಿಟ್ಟು ಕೇವಲ ಪರಮಾತ್ಮನ ಪ್ರಾಪ್ತಿಗಾಗಿ ಮಾಡಲ್ಪಡುವ ಕರ್ಮಕ್ಕೆ ಅಶುಕ್ಲಾಕೃಷ್ಣ ಕರ್ಮವೆನ್ನುತ್ತಾರೆ. ಇದೇ ನಿಷ್ಕಾಮ ಕರ್ಮ. ನಿಷ್ಕಾಮ ಕರ್ಮದಿಂದಲೇ ಮನುಷ್ಯನು ಮೋಕ್ಷಕ್ಕೆ ಅಧಿಕಾರಿಯಾಗುತ್ತಾನೆ. ಆದುದರಿಂದ ಯೋಗಿಗಳ ಕರ್ಮವು ಅಶುಕ್ಲಾಕೃಷ್ಣ ವಾಗಿರುತ್ತದೆ, ಎಂದು ಸೂತ್ರಕಾರರು ಹೇಳಿದ್ದಾರೆ.

ಮಹರ್ಷಿ ದಯಾನಂದರೂ, ಸತ್ಯಾರ್ಥ ಪ್ರಕಾಶದ 9ನೇ ಸಮುಲ್ಲಾಸದಲ್ಲಿ, "ಪವಿತ್ರ ಕರ್ಮ, ಪವಿತ್ರೋಪಾಸನೆ, ಮತ್ತು ಪವಿತ್ರ ಜ್ಞಾನದಿಂದಲೇ ಮುಕ್ತಿಯು ಲಭಿಸುತ್ತದೆ", ಎಂದು ಹೇಳಿದ್ದಾರೆ. ಇದರಿಂದ ಒಂದು ಮಾತು ಸ್ಪಷ್ಟವಾಗುತ್ತದೆ. ಅದೇನೆಂದರೆ, ಕೇವಲ ಜ್ಞಾನದಿಂದ ಅಥವಾ ಕೇವಲ ಕರ್ಮದಿಂದ ಅಥವಾ ಕೇವಲ ಉಪಾಸನೆಯಿಂದ ಮನುಷ್ಯನಿಗೆ ಮುಕ್ತಿಯು ಲಭಿಸುವುದಿಲ್ಲ. ಜ್ಞಾನ, ಕರ್ಮ ಮತ್ತು ಉಪಾಸನೆ, ಈ ಮೂರು ಮಾರ್ಗಗಳು ಶುದ್ಧವಾದಾಗ, ಮತ್ತು ಒಟ್ಟಾದಾಗ ಮನುಷ್ಯನಿಗೆ ಮೋಕ್ಷವು ದೊರೆಯಬಹುದೇ ಹೊರತು, ಬೇರೆ ಯಾವ ಉಪಾಯವೂ ಇದಕ್ಕೆ ಇಲ್ಲ. ಅಶುಭ ವಾಸನೆ (ಸಂಸ್ಕಾರ)ಗಳು ಪ್ರವಾಹದಿಂದ ಅನಾದಿಯಾಗಿವೆ. ಇವುಗಳು ಜೀವರನ್ನು ಅಂಟಿಕೊಂಡಿರುವ ತನಕ ಮೋಕ್ಷದ ಸಿದ್ಧಿಯು ಅಸಂಭವ. ಈ ಅಶುಭ ವಾಸನೆಗಳಿಗೆ ಅವಿದ್ಯಾದಿ ದೋಷಗಳೇ ಕಾರಣವಾಗಿವೆ, ಎಂದು ಮಹರ್ಷಿ ಪತಂಜಲಿ ಹೇಳಿದ್ದಾರೆ. ಈ ದೋಷ ರೂಪೀ ಕಾರಣವನ್ನು ನಿವಾರಿಸಿದರೆ ವಾಸನೆಗಳೂ ದೂರವಾಗುತ್ತವೆ. ವಾಸನೆಗಳ ನಿವಾರಣೆಯಾದಾಗ ಮೋಕ್ಷವು ಸಿಗುತ್ತದೆ.

## ಮೋಕ್ಷದ ಸ್ವರೂಪ

**ಪುರುಷಾರ್ಥ ಶೂನ್ಯಾನಾಂ ಗುಣಾನಾಂ ಪ್ರತಿಪ್ರಸವಃ ಕೈವಲ್ಯಂ ಸ್ವರೂಪ ಪ್ರತಿಷ್ಠಾ ವಾ ಚಿತಿಶಕ್ತಿರಿತಿ ॥** [ಯೋಗದರ್ಶನ 4-34]

ಅರ್ಥಾತ್, ಸತ್ವಾದಿ ಮೂರು ಗುಣಗಳಿಂದ ಉತ್ಪನ್ನವಾದ ಬುದ್ಧಿ, ಅಹಂಕಾರಾದಿಗಳು ಪ್ರಕೃತಿಯಲ್ಲಿ ಲೀನವಾಗುವುದಕ್ಕೆ ಮೋಕ್ಷವೆಂದು ಹೆಸರು. ಇದರ ತಾತ್ಪರ್ಯ ವೇನೆಂದರೆ, ಪ್ರಕೃತಿ ಮತ್ತು ಪ್ರಕೃತಿಯ ಎಲ್ಲಾ ವಿಕೃತಿಗಳಿಂದ ಜೀವಾತ್ಮನು ತನ್ನನ್ನು ನಾನೇ ಪ್ರತ್ಯೇಕವೆಂದು ಅರಿತುಕೊಂಡು, ಪರಮಾತ್ಮನ ಸ್ವರೂಪದಲ್ಲಿ ಮಗ್ನನಾಗಿರುವುದಕ್ಕೆ ಕೈವಲ್ಯ ಅಥವಾ ಮೋಕ್ಷವೆನ್ನುತ್ತಾರೆ. ಋಗ್ವೇದಾದಿ ಭಾಷ್ಯಭೂಮಿಕೆಯಲ್ಲಿ ಮುಕ್ತಿ ವಿಷಯದ ಪ್ರಕರಣದಲ್ಲಿ ಮಹರ್ಷಿ ದಯಾನಂದರು ಈ ಸೂತ್ರದ ಅರ್ಥವನ್ನು ಈ ರೀತಿಯಲ್ಲಿ ವಿವರಿಸಿದ್ದಾರೆ. "**ಪುರುಷಾರ್ಥಂ, ಅರ್ಥಾತ್**, ಸತ್ವ, ರಜ, ತಮೋಗುಣಗಳಿಂದ ಕೂಡಿದ ಕಾರ್ಯ ಜಗತ್ತು ಹಾಗೂ ಅಹಂಕಾರಾದಿ ಕಾರ್ಯ ಜಗತ್ತು ಪುರುಷಾರ್ಥದಿಂದ ನಾಶವಾಗಿ, ಆತ್ಮನು ನಿತ್ಯ ತನ್ನ ಶುದ್ಧ, ವಿಜ್ಞಾನಮಯ, ಪ್ರಕಾಶಮಯ ಮತ್ತು ಆನಂದಮಯ ಸ್ವರೂಪದಲ್ಲಿ ತನ್ನ ಮೂಲಶಕ್ತಿ ಹಾಗೂ ಗುಣಗಳೊಂದಿಗೆ ಇರುತ್ತಾನೆ. ಜೀವಾತ್ಮನ ಈ ಸ್ಥಿತಿಯನ್ನೇ ಕೈವಲ್ಯ ಅಥವಾ ಮೋಕ್ಷವೆಂದು ಹೇಳುತ್ತಾರೆ".

ಇಲ್ಲಿ (ಸೂತ್ರದಲ್ಲಿ) ಸ್ವರೂಪ-ಪ್ರತಿಷ್ಠಾ ಎಂದರೆ, ಜೀವನು ಕೇವಲ ತನ್ನ ನಿಜರೂಪದಲ್ಲಿ ಇರುತ್ತಾನೆ, ಎಂದು ಇಷ್ಟುಮಾತ್ರ ಅರ್ಥವಾಗುವುದಿಲ್ಲ. ಇದರ ನಿಜವಾದ ಅರ್ಥ, ಜೀವಾತ್ಮನು ಪ್ರಕೃತಿ, ವಿಕೃತಿ, ಮತ್ತು ತನ್ನ ಸ್ವರೂಪವನ್ನು ಪ್ರತ್ಯೇಕ ಪ್ರತ್ಯೇಕವಾಗಿ ಚೆನ್ನಾಗಿ ಅರಿತುಕೊಂಡು, ಪರಮಾತ್ಮನ ಸ್ವರೂಪದಲ್ಲಿ ಸ್ಥಿತನಾಗುತ್ತಾನೆ. ಮತ್ತು ಆನಂದವನ್ನು ಅನುಭವಿಸುತ್ತಾನೆ ಎಂದಾಗುತ್ತದೆ.

ಮೋಕ್ಷದ ವಿಷಯದಲ್ಲಿ ಒಂದು ಪ್ರಶ್ನೆಯು ಉತ್ಪನ್ನವಾಗುತ್ತದೆ : ಮೋಕ್ಷವನ್ನು ಹೊಂದಿದ ಜೀವಾತ್ಮನು ಪುನಃ ಈ ಸಂಸಾರದಲ್ಲಿ ಜನ್ಮ ತಾಳುತ್ತಾನೆಯೋ ಇಲ್ಲವೋ? ಈ ಪ್ರಶ್ನೆಗೆ ಉತ್ತರ : ಜೀವಾತ್ಮನು ಖಂಡಿತವಾಗಿಯೂ ಪುನಃ ಜನ್ಮತಾಳುತ್ತಾನೆ. ಇದಕ್ಕೆ ಅನೇಕ ಪ್ರಮಾಣಗಳಿವೆ.

**ಪ್ರಶ್ನೆ** :- ಉಪನಿಷತ್ತುಗಳು "**ನ ಚ ಪುನರಾವರ್ತತೆ ನ ಚ ಪುನರಾವರ್ತತೇ ಇತಿ**" ಎಂದು ಹೇಳುತ್ತವೆ. ಮಾತ್ರವಲ್ಲ, '**ಅನಾವೃತ್ತಿಶಬ್ದದನಾವೃತ್ತಿಶಬ್ದಾತ್**" (ಶಾರೀರಿಕ ಸೂ.) "**ಯದ್ ಗತ್ವಾ ನಿವರ್ತಂತೇ ತದ್ಧಾಮ ಪರಮಂ ಮಮ**" (ಭಗವದ್ಗೀತೆ), ಎಂದು ಮುಂತಾದ ವಾಕ್ಯಗಳಲ್ಲಿ ಜೀವಾತ್ಮನು ಮೋಕ್ಷವನ್ನು ಹೊಂದಿದನಂತರ ತಿರುಗಿ ಸಂಸಾರಕ್ಕೆ ಬರುವುದಿಲ್ಲ ಎಂದು ಹೇಳಿದೆ?

**ಉತ್ತರ**:- ಇದು ಸರಿಯಲ್ಲ, ಯಾಕೆಂದರೆ, ಇದು ವೇದ ವಿರುದ್ಧವಾಗಿದೆ. ಈ ಕೆಳಗಿನ ವೇದ ಮಂತ್ರಗಳನ್ನು ನೋಡಿರಿ :

**ಕಸ್ಯ ನೂನಂ ಕತಮಸ್ಯಾಮೃತಾನಾಂ ಮನಾಮಹೇ ಚಾರುದೇವಸ್ಯನಾಮ ।**
**ಕೋ ನೋ ಮಹ್ಯಾ ಅದಿತಯೇ ಪುನರ್ದಾತ್ ಪಿತರಂಚದೃಶೇಯಂ ಮಾತರಂ ಚ ॥೧॥**

**ಅಗ್ನೇರ್ವಯಂ ಪ್ರಥಮಸ್ಯಾಮೃತಾನಾಂ ಮನಾಮಹೇ ಚಾರು ದೇವಸ್ಯನಾಮ ।**
**ಸನೋ ಮಹ್ಯಾ ಅದಿತಯೇ ಪುನರ್ದಾತ್ ಪಿತರಂ ಚ ದೃಶೇಯಂ ಮಾತರಂ ಚ ॥೨॥**

[ಋಗ್ವೇದ1-24-1, 2]

**ಪ್ರಶ್ನೆ** :- ನಾವು ಯಾರ ಹೆಸರನ್ನು ಪವಿತ್ರವೆಂದು ತಿಳಿದುಕೊಳ್ಳಬೇಕು? ಪ್ರಪಂಚದ ಎಲ್ಲಾ ಪದಾರ್ಥಗಳ ನಡುವೆ, ವಿದ್ಯಮಾನನಾಗಿರುವ, ನಾಶರಹಿತ ಮತ್ತು ಸದಾ ಪ್ರಕಾಶ ಸ್ವರೂಪನಾದ ಆ ದೇವನು ಯಾರು? ನಮಗೆ ಮೋಕ್ಷದ ಸುಖವನ್ನು ಕೊಟ್ಟು ಪುನಃ ಯಾರು ನಮಗೆ ಜನ್ಮವನ್ನು ಕೊಡುತ್ತಾನೆ. ಮತ್ತು ಯಾರು ಪುನಃ ತಂದೆ ತಾಯಿಗಳ ದರ್ಶನ ಮಾಡಿಸುತ್ತಾನೆ? ॥ ೧ ॥

**ಉತ್ತರ:-** ನಾವು ಆ ಪ್ರಕಾಶಸ್ವರೂಪನೂ ಅನಾದಿಯೂ, ಸದಾ ಮುಕ್ತ ಸ್ವರೂಪನೂ ಆದ ಪರಮಾತ್ಮನ ಹೆಸರನ್ನು ಪವಿತ್ರವೆಂದು ತಿಳಿದುಕೊಳ್ಳಬೇಕು. ಅವನೇ ನಮಗೆ ಮೋಕ್ಷದ ಆನಂದವನ್ನು ಕೊಟ್ಟು, ಪುನಃ ಪೃಥ್ವಿಯ ಮೇಲೆ ಜನ್ಮಕೊಟ್ಟು ತಂದೆ ತಾಯಿಗಳ ದರ್ಶನ ಮಾಡಿಸುತ್ತಾನೆ. ಆ ಪರಮಾತ್ಮನೇ ಮುಕ್ತಿಯ ವ್ಯವಸ್ಥೆಯನ್ನು ಮಾಡುತ್ತಾನೆ ಮತ್ತು ಅವನೇ ಎಲ್ಲರ ಸ್ವಾಮಿಯಾಗಿದ್ದಾನೆ.

**ಇದಾ ನೀ ಮಿವ ಸರ್ವತೋ ನಾತ್ಯ ತೋಚ್ಛೇದಃ ॥** [ಸಾಂಖ್ಯದರ್ಶನ]

ಅರ್ಥಾತ್, ಈ ಯಾವ ರೀತಿಯಲ್ಲಿ ಜೀವಾತ್ಮರು ಬಂಧನ ಮತ್ತು ಮುಕ್ತಿ ಎಂಬ ಎರಡು ರೀತಿಯ ಸ್ಥಿತಿಯಲ್ಲಿ ಇದ್ದಾರೆಯೋ, ಅದೇ ಸ್ಥಿತಿಯಲ್ಲಿ ಅವರು ಯಾವಾಗಲೂ ಇರುತ್ತಾರೆ. ಬಂಧನ ಮತ್ತು ಮೋಕ್ಷದ ಅತ್ಯಂತ ವಿಚ್ಛೇದವು ಎಂದಿಗೂ ಆಗುವುದಿಲ್ಲ. ಬಂಧನ ಮತ್ತು ಮುಕ್ತಿ ಇವು ಸರ್ವದಾ ಇರುವುದಿಲ್ಲ. (ಸತ್ಯಾರ್ಥ ಪ್ರಕಾಶ ಸಮುಲ್ಲಾಸ - 9)

**ಪ್ರಶ್ನೆ :-** ಉಪನಿಷತ್ತುಗಳು, ವೇದಾಂತದರ್ಶನ, ಶ್ರೀಮದ್ ಭಗವದ್ಗೀತೆ ಮುಂತಾದ ಪ್ರಾಚೀನ ಗ್ರಂಥಗಳಲ್ಲಿ ಒಂದು ಬಾರಿ ಮೋಕ್ಷಕ್ಕೆ ಹೋದ ಜೀವರು ಪುನಃ ಜನ್ಮಕ್ಕೆ ಒಳಗಾಗುವುದಿಲ್ಲವೆಂದು ಹೇಳಿದೆಯಲ್ಲ?

**ಉತ್ತರ:-** ಉಪನಿಷತ್ತು ಮೊದಲಾದ ಗ್ರಂಥಗಳಲ್ಲಿ "**ನ ಚ ಪುನರಾವರ್ತತೇ**" ಎಂದು ಮುಂತಾಗಿ ಹೇಳಿದೆ ನಿಜ, ಆದರೆ, ಇದರ ಅಭಿಪ್ರಾಯ ಜೀವರು ಒಂದು ಸರ್ತಿ ಮೋಕ್ಷಕ್ಕೆ ಹೋದ ಮೇಲೆ ತಿರುಗಿ ಜನನಕ್ಕೆ ಬರುವುದೇ ಇಲ್ಲ, ಎಂದಲ್ಲ, ಇದರ ನಿಶ್ಚಯವಾದ ಅಭಿಪ್ರಾಯವು ಹೀಗಿದೆ. ಮುಕ್ತಿಗೆ ಒಂದು ಅವಧಿ ಇದೆ. ಅದು 31 ನೀಲ, 10, ಖರಬ, 40 ಅರ್ವ ವರ್ಷಗಳ ಕಾಲಾವಧಿ (31,10,40,00,00,00,000 ವರ್ಷಗಳು) ಮೋಕ್ಷದಲ್ಲಿರುವ ಜೀವರು, ಈ ಕಾಲಾವಧಿಯ ನಡುವೆ, ಜನ್ಮ ಮರಣಗಳ ಚಕ್ರಕ್ಕೆ ಒಳಗಾಗುವುದಿಲ್ಲ. ಈ ಅವಧಿಯು ಮುಗಿದ ನಂತರ, ಅವರು ಜನ್ಮ ತಾಳಲೇ ಬೇಕಾಗುತ್ತದೆ. ಯಾಕೆಂದರೆ ಶುದ್ಧ ಜ್ಞಾನ-ಕರ್ಮ-ಉಪಾಸನೆಯ ಫಲವಾಗಿ ಜೀವರಿಗೆ ಮುಕ್ತಿಯು ಸಿಗುತ್ತದೆ. ಆದರೆ, ಜೀವರು ಈ ಜ್ಞಾನ-ಕರ್ಮ-ಉಪಾಸನೆಯನ್ನು ಒಂದು ಸೀಮಿತ ರೂಪದಲ್ಲಿ ಮಾಡಿರುತ್ತಾರೆ. ಆದುದರಿಂದ ಅದರ ಫಲವೂ ಸೀಮಿತವಾಗಿದೆ. ಸೀಮಿತ ಕಾರ್ಯದಿಂದ ಅಸೀಮಿತ ಫಲವು ದೊರೆಯಲಿಕ್ಕೆ ಸಾಧ್ಯವಿಲ್ಲ. ಸೀಮಿತ ಜ್ಞಾನ-ಕರ್ಮ-ಉಪಾಸನೆಗೆ ಮಿತಿ

ಇಲ್ಲದ ಫಲವನ್ನು ಬಯಸುವುದು ನ್ಯಾಯವೂ ಅಲ್ಲ. ಜನರು ಎಷ್ಟು ಸತ್ಕಾರ್ಯ ಅಥವಾ ದುಷ್ಕಾರ್ಯಗಳನ್ನು ಮಾಡುತ್ತಾರೆಯೋ, ಅವರಿಗೆ ಅಷ್ಟೇ ಸುಖ ಅಥವಾ ದುಃಖವನ್ನು ಕೊಡುವುದು ಪರಮಾತ್ಮನ ನ್ಯಾಯವಾಗಿದೆ. ಪಶು, ಪಕ್ಷಿ ಮೊದಲಾದ ಯೋನಿಗಳಲ್ಲಿ ಇರುವ ಜೀವರು ದುಃಖವನ್ನು ಅನುಭವಿಸುತ್ತಿರುತ್ತಾರೆ. ಒಂದು ವೇಳೆ ಯಾವುದೇ ದುಷ್ಕರ್ಮಗಳನ್ನು ಮಾಡದೆಯೇ ಪರಮಾತ್ಮನು ಜೀವರನ್ನು ಪಶು-ಪಕ್ಷಿಗಳ ಯೋನಿಗೆ ಕಳುಹಿಸುತ್ತಾನೆ ಎಂದಾದರೆ, ಆಗ ಅವನು ಅನ್ಯಾಯಕಾರಿ ಎಂದಾಗುತ್ತದೆ. ಮುಕ್ತಿ ಅಥವಾ ಬಂಧನವನ್ನು ಪರಮಾತ್ಮನು ಜೀವರ ಕರ್ಮಕ್ಕನುಸಾರವಾಗಿ ಕೊಡುತ್ತಾನೆ. ಜೀವರ ಕರ್ಮಗಳಿಗೆ ಇತಿಮಿತಿಗಳಿವೆ. ಆದುದರಿಂದ ಕರ್ಮದ ಫಲಕ್ಕೂ ಇತಿ ಮಿತಿ ಇದೆ. ಮಿತಿ ಇರುವ ಕರ್ಮಕ್ಕೆ ಮಿತಿ ಮೀರಿ ಫಲಕೊಡುವುದು ಯೋಗ್ಯವಲ್ಲ.

ಇನ್ನೊಂದು ಮಾತು, ಒಂದು ವೇಳೆ, ಮೋಕ್ಷಕ್ಕೆ ಹೋದ ಜೀವರುಗಳೆಲ್ಲಾ ತಿರುಗಿ ಜನ್ಮ ಮರಣದ ಈ ಸಂಸಾರಕ್ಕೆ ಬರದೆ ಇದ್ದರೆ, ಒಂದು ಕಾಲದಲ್ಲಿ ಈ ಸಂಸಾರವು ಬರಿದಾಗಬಹುದು. ಯಾಕೆಂದರೆ, ಜೀವರ ಸಂಖ್ಯೆ ನಿಶ್ಚಿತವಾಗಿದೆ. ಹೊಸ ಜೀವರು ಉತ್ಪನ್ನರಾಗುವುದಿಲ್ಲ. ಮೋಕ್ಷಕ್ಕೆ ಒಬ್ಬೊಬ್ಬರೇ ಹೋದನಂತರ, ಮರಳಿ ಯಾರೂ ಬರದೆ ಇರುವುದರಿಂದ, ಈ ಸಂಸಾರವು ಒಂದು ದಿನ ಖಾಲಿಯಾಗುತ್ತದೆ. ಈ ಖಾಲಿ ಸಂಸಾರವು ನಿಷ್ಪ್ರಯೋಜನವಾಗುತ್ತದೆ. ಪರಮಾತ್ಮನ ಯಾವ ಸೃಷ್ಟಿಯೂ ನಿಷ್ಪ್ರಯೋಜನವೆಂದಾಗುವುದಿಲ್ಲ. ಆದುದರಿಂದ ಮೋಕ್ಷಕ್ಕೆ ಹೋದ ಜೀವರು ಪುನಃ ಈ ಸಂಸಾರಕ್ಕೆ ಬರುವುದಿಲ್ಲ ಎಂಬ ವಿಚಾರವು ಸರಿಯಲ್ಲ.

**ಪ್ರಶ್ನೆ** :- ಮುಕ್ತಿಯ ಅವಧಿಯು ಮುಗಿದಾಗ ಜೀವರು ಪುನಃ ಈ ಸಂಸಾರದಲ್ಲಿ ಜನ್ಮತಾಳುತ್ತಾರೆ, ಎಂಬುದು ನಿಜವಾದರೆ, ಈ ಜನ್ಮಕ್ಕೆ ಕಾರಣ ಏನೆಂದು ಹೇಳುತ್ತೀರಿ?

**ಉತ್ತರ**:- ಈ ಪ್ರಶ್ನೆಗೆ, ಸ್ವಾಮಿ ದಯಾನಂದರು ಈ ರೀತಿಯಲ್ಲಿ ಉತ್ತರ ಕೊಟ್ಟಿರುತ್ತಾರೆ.

**"ಅಗ್ನೇರ್ವಯಂ.................** (ಋಗ್ವೇದ 1-24-2)

**ಅಯಮೇವ ಮುಕ್ತಾನಾಮಪಿ ಜೀವಾನಾಂ ಮಹಾಕಲ್ಪಾಂತೇ ಪುನಃ ಪಾಪಪುಣ್ಯ ತುಲ್ಯಯಾ ಪಿತರಿ ಮಾತರಿ ಚ ಮನುಷ್ಯ ಜನ್ಮ ಕಾರಯತೀತಿ ಚ........॥**

ಅರ್ಥಾತ್, ಆ ಪರಮಾತ್ಮನೇ ಮೋಕ್ಷ ಪದವಿಯನ್ನು ಹೊಂದಿದ ಜೀವರಿಗೆ ಕೂಡ ಮಹಾ ಕಲ್ಪದ ಕೊನೆಗೆ ಪುನಃ ಪಾಪ ಮತ್ತು ಪುಣ್ಯದ ಸಮಾನತೆಯ ಆಧಾರದ ಮೇಲೆ, ಮಾತಾ-ಪಿತಾ ಮತ್ತು ಸ್ತ್ರೀ ಇವರ ಮಧ್ಯದಲ್ಲಿ ಮನುಷ್ಯ ಜನ್ಮವನ್ನು ಕೊಡುತ್ತಾನೆ".

ಮಹರ್ಷಿಯವರ ಈ ವಚನದಿಂದ ಈ ಮಾತು ಸಿದ್ಧವಾಗುತ್ತದೆ. ಜೀವರು ಮೋಕ್ಷವನ್ನು ಪಡೆದಾಗ, ಪಾಪ-ಪುಣ್ಯಾತ್ಮಕ ಕರ್ಮದಿಂದ ಒದಗುವ ಸಾಮಾನ್ಯ ಮನುಷ್ಯ ಜನ್ಮವು, ಬಾಕಿ ಉಳಿಯುತ್ತದೆ, ಮತ್ತು ಮೋಕ್ಷ ಪ್ರಾಪ್ತಿಗೆ ಕಾರಣೀಭೂತವಾದ ನಿಷ್ಕಾಮ ಕರ್ಮದ ಫಲವನ್ನು ಜೀವರು ಅನುಭವಿಸಿ ಮುಗಿಸುತ್ತಾರೆ. ಆದುದರಿಂದ ಮೋಕ್ಷ ಪ್ರಾಪ್ತಿಯನಂತರ ಜೀವರ ಪುನರ್ಜನ್ಮಕ್ಕೆ ಕಾರಣ ಬಾಕಿ ಉಳಿದ ತುಲ್ಯ ಪಾಪ ಪುಣ್ಯಗಳ ಫಲವೆಂದು ತಿಳಿದುಕೊಳ್ಳುವುದು ಉತ್ತಮ.

ಈ ಮೊದಲು ಸಂಕ್ಷೇಪದಲ್ಲಿ ಯೋಗದ ಸ್ವರೂಪ, ಅದರ ಫಲ, ಯೋಗದ ಸಾಧನಗಳು, ವಿಘ್ನಗಳ ಸ್ವರೂಪ, ಇತ್ಯಾದಿ ವಿಷಯಗಳನ್ನು ತಿಳಿಸುವ ಪ್ರಯಾಸ ಮಾಡಲಾಗಿತ್ತು. ಈಗ ಈ ಪ್ರಕರಣದಲ್ಲಿ, ಯೋಗಾಭ್ಯಾಸಿಯು ಯಾವ ರೀತಿಯಲ್ಲಿ ಯೋಗ ಮಾರ್ಗದಲ್ಲಿ ನಡೆದು ತಾನು ಪರಮಾತ್ಮನ ಸಾಕ್ಷಾತ್ಕಾರವನ್ನು ಮಾಡಬಹುದು ಮತ್ತು ಇತರ ಜನರಿಗೂ ಮಾಡಬಹುದು ಎಂಬುದನ್ನು ಸ್ಪಷ್ಟವಾಗಿ ತಿಳಿಸುವ ಪ್ರಯತ್ನ ಮಾಡಲಾಗಿದೆ. ಬುದ್ಧಿಶಾಲಿಗಳಾದ ಯೋಗಿ ಜಿಜ್ಞಾಸುಗಳು ಇದರ ಅಧ್ಯಯನ ಮಾಡಿ ಇದನ್ನು ತಮ್ಮ ಜೀವನದಲ್ಲಿ ತಂದು, ತಮ್ಮ ಹಾಗೂ ಇತರ ಜನರ ಕಲ್ಯಾಣವನ್ನು ಮಾಡುವರೆಂದು ಆಶಿಸಲಾಗುತ್ತದೆ.

# ಉತ್ತರಾರ್ಧ

## 1. ಪರಮಾತ್ಮ, ಜೀವಾತ್ಮ ಮತ್ತು ಪ್ರಕೃತಿಯ ಪೃಥಕ್ತ್ವವನ್ನು ತಿಳಿದುಕೊಳ್ಳುವ ಆವಶ್ಯಕತೆ

**ಪ್ರಶ್ನೆ** :- ಕೆಲವರ ವಿಚಾರದಲ್ಲಿ, ಜನರು ಪರಮಾತ್ಮ, ಜೀವಾತ್ಮ ಮತ್ತು ಪ್ರಕೃತಿ, ಇವು ಮೂರನ್ನೂ ಅನಾದಿಯೆಂದು ತಿಳಿದುಕೊಳ್ಳಬಹುದು ; ಅಥವಾ ಜೀವಾತ್ಮ ಮತ್ತು ಪ್ರಕೃತಿಯನ್ನು ಮಾತ್ರ ಅನಾದಿ ಎಂದು ನಂಬಬಹುದು; ಅಥವಾ ಕೇವಲ ಪ್ರಕೃತಿಯನ್ನು ಮಾತ್ರ ಅನಾದಿಯೆಂದು ಒಪ್ಪಿಕೊಳ್ಳಬಹುದು ; ಆದರೆ, ಜನರು ಈ ರೀತಿ ಬೇರೆ ಬೇರೆ ನಂಬಿಕೆಗಳನ್ನು ಇಟ್ಟುಕೊಳ್ಳುವುದರಿಂದ ಅವರೆಲ್ಲಾ ಯೋಗಿಗಳಾಗುವುದಕ್ಕೆ ಏನೂ ತೊಂದರೆ ಇಲ್ಲ. ಏಕೆಂದರೆ, ನಂಬಿಕೆಗಳಿಗೂ ಯೋಗಕ್ಕೂ ಏನೂ ಸಂಬಂಧವಿಲ್ಲ.

**ಉತ್ತರ**:- ಯಾರು ಪರಮಾತ್ಮ, ಜೀವಾತ್ಮ ಮತ್ತು ಪ್ರಕೃತಿ ಇವು ಮೂರನ್ನೂ ಅನಾದಿಯೆಂದು ನಂಬುತ್ತಾರೆಯೋ, ಅವರೇ ನಿಜವಾಗಿಯೂ ಯೋಗಿಗಳಾಗುವುದಕ್ಕೆ ಸಾಧ್ಯವಿದೆ. ಬೇರೆಯವರು ನಿಜವಾದ ಯೋಗಿಗಳಾಗುವುದಕ್ಕೆ ಸಾಧ್ಯವಿಲ್ಲ. ಈ ನಂಬಿಕೆಗಳಿಗೂ ಯೋಗಕ್ಕೂ ಏನೂ ಸಂಬಂಧವಿಲ್ಲ ಎಂದು ಹೇಳುವವರು ದೊಡ್ಡ ಅಜ್ಞಾನಾಂಧಕಾರದಲ್ಲಿದ್ದಾರೆ. ಎಂದರೆ, ತ್ರೈತವಾದವನ್ನು ಬಿಟ್ಟು (ದ್ವೈತಾ ದ್ವೈತಾದಿ) ಬೇರೆ ಸಿದ್ಧಾಂತಗಳನ್ನು ನಂಬುವವರು ನಿಜವಾದ ಅರ್ಥದಲ್ಲಿ ಯೋಗಿಗಳಾಗಲಿಕ್ಕೆ ಸಾಧ್ಯವೇ ಇಲ್ಲ. ಏಕೆಂದರೆ, ಈ ಸಿದ್ಧಾಂತಗಳೆಲ್ಲಾ ಪ್ರಮಾಣ ಮತ್ತು ಯುಕ್ತಿಗಳಿಗೆ ವಿರುದ್ಧವಾಗಿವೆ.

ಯೋಗದ ಸತ್ಯಸ್ವರೂಪವನ್ನು ತಿಳಿಸುವ ಗ್ರಂಥ, ಯೋಗದರ್ಶನದಲ್ಲಿ, ಪರಮಾತ್ಮ, ಜೀವಾತ್ಮ ಮತ್ತು ಪ್ರಕೃತಿ, ಇವು ಮೂರನ್ನೂ ಬೇರೆ ಬೇರೆ ಎಂದು ಒಪ್ಪಿಕೊಂಡಿದ್ದಾರೆ.

**"ಕ್ಲೇಶ ಕರ್ಮ ವಿಪಾಕಾಶಯೈರಪರಾಮೃಷ್ಟಃ ಪುರುಷ ವಿಶೇಷಃ ಈಶ್ವರಃ"**
(ಯೋಗದರ್ಶನ 1-24)

ಈ ಸೂತ್ರದಿಂದ, 'ಪುರುಷ ವಿಶೇಷಃ ಈಶ್ವರಃ' ಎಂದರೆ, ಸಾಮಾನ್ಯ ಪುರುಷರು ಜೀವಾತ್ಮರು ಮತ್ತು ಪುರುಷ ವಿಶೇಷ ಪರಮಾತ್ಮನು, ಎಂದು ಸ್ಪಷ್ಟವಾಗುತ್ತದೆ. ಈ ರೀತಿ ಪರಮಾತ್ಮ ಮತ್ತು ಜೀವಾತ್ಮರ ಭಿನ್ನತೆಯು ಇಲ್ಲಿ ಸಿದ್ಧವಾಗುತ್ತದೆ.

ಈ ಸೂತ್ರದ ಭಾಷ್ಯೆಯಲ್ಲಿ ವ್ಯಾಸರು, **"ಅಥ ಪ್ರಧಾನ ಪುರುಷ ವ್ಯತಿರಿಕ್ತ: ಕೋಽಯಮೀಶ್ವರೋ ನಾಮೇತಿ?"**, ಅರ್ಥಾತ್, ಈಗ ಪ್ರಧಾನ (ಪ್ರಕೃತಿ) ಮತ್ತು ಪುರುಷರ (ಜೀವಾತ್ಮರ) ಹೊರತಾಗಿ ಇರುವ ಈಶ್ವರನು (ಪರಮಾತ್ಮನು) ಯಾರು? ಎಂದು ಒಂದು ಪ್ರಶ್ನೆಯನ್ನು ಎತ್ತಿದ್ದಾರೆ. ಈ ಪ್ರಶ್ನೆಯಿಂದಲೂ ಪರಮಾತ್ಮ, ಜೀವಾತ್ಮ ಮತ್ತು ಪ್ರಕೃತಿ, ಇವು ಮೂರೂ ಪರಸ್ಪರ ಭಿನ್ನ ಭಿನ್ನ ತತ್ವಗಳು ಎಂದು ಸಿದ್ಧವಾಗುತ್ತದೆ.

**"ಪ್ರಕಾಶಕ್ರಿಯಾಸ್ಥಿತಿಶೀಲಂ ಭೂತೇಂದ್ರಿಯಾತ್ಮಕಂ ಭೋಗಾಪವರ್ಗಾರ್ಥಂ ದೃಶ್ಯಂ"**
(ಯೋಗದರ್ಶನ 2-18)

ಎಂದರೆ, ಪರಮಾತ್ಮ ಮತ್ತು ಜೀವಾತ್ಮರಿಗಿಂತ ಭಿನ್ನವಾಗಿರುವ ಈ ದೃಶ್ಯ ಜಗತ್ತು (ಪ್ರಕೃತಿ) ಜೀವಾತ್ಮರ ಭೋಗ ಮತ್ತು ಮೋಕ್ಷಕ್ಕಾಗಿ ಇದೆ.

**ದ್ರಷ್ಟಾ ದೃಶಿಮಾತ್ರ: ಶುದ್ಧೋಽಪಿ ಪ್ರತ್ಯಯಾನು ಪಶ್ಯ:**
(ಯೋಗದರ್ಶನ 2-20)

ಈ ಸೂತ್ರದಿಂದಲೂ ಜೀವಾತ್ಮರು, ಪರಮಾತ್ಮ ಮತ್ತು ಪ್ರಕೃತಿಯಿಂದ ಭಿನ್ನವಾಗಿದ್ದಾರೆ, ಎಂದು ಸುವಿದಿತವಾಗುತ್ತದೆ. ಏಕೆಂದರೆ, ಸೂತ್ರಕಾರರು, ಪರಮಾತ್ಮ ಮತ್ತು ಪ್ರಕೃತಿ ಬೇರೆ ಬೇರೆಯಾಗಿವೆ ಎಂಬುದನ್ನು ಈ ಮುಂಚಿನ ಸೂತ್ರದಲ್ಲಿ ತಿಳಿಸಿದ್ದಾರೆ. ಆದುದರಿಂದ ಈ ಸೂತ್ರದಲ್ಲಿ ಈಗ ಜೀವಾತ್ಮರ ಸ್ವರೂಪದ ವರ್ಣನೆಯನ್ನು ಕೊಟ್ಟಿದ್ದಾರೆ.

**ವೇದಾಂತ ದರ್ಶನದಲ್ಲಿಯೂ ತ್ರೈತವಾದವನ್ನು ಸ್ವೀಕರಿಸಿದ್ದಾರೆ.**

**"ಅಥಾತೋ ಬ್ರಹ್ಮ ಜಿಜ್ಞಾಸಾ"** (ವೇ.ದ. 1-1) – ಈ ಸೂತ್ರದಲ್ಲಿ ಬ್ರಹ್ಮನನ್ನು(ಪರಮಾತ್ಮನನ್ನು) ತಿಳಿದುಕೊಳ್ಳುವ ಜಿಜ್ಞಾಸೆಯ ಉಪದೇಶವಿದೆ. ಒಂದು ವೇಳೆ ಬ್ರಹ್ಮನ ಹೊರತು ಬೇರೆ ಯಾವ ವಸ್ತುವೂ ಇಲ್ಲವೆಂಬುದು ನಿಜವಾದರೆ, ಬ್ರಹ್ಮನನ್ನು ತಿಳಿದುಕೊಳ್ಳುವ ಜಿಜ್ಞಾಸೆಯನ್ನು ತೋರುವವರು ಯಾರು?

"**ಜನ್ಮಾದ್ಯಸ್ಯಯತಃ**" (ವೇ.ದ. 1-2) ಅರ್ಥಾತ್, ಯಾರಿಂದ ಈ ಜಗತ್ತಿನ ಉತ್ಪತ್ತಿ, ಸ್ಥಿತಿ ಮತ್ತು ಪ್ರಳಯವು ಆಗುತ್ತದೆಯೋ, ಆ ಬ್ರಹ್ಮನು ಎಲ್ಲಾ ಜೀವಾತ್ಮರಿಗೂ ತಿಳಿದುಕೊಳ್ಳುವುದಕ್ಕೆ ಯೋಗ್ಯವಾಗಿದ್ದಾನೆ. ಎಂದರೆ, ಅವನನ್ನು ತಿಳಿದುಕೊಳ್ಳುವುದು ಎಲ್ಲರ ಕರ್ತವ್ಯವಾಗಿದೆ.

ಈ ಎಲ್ಲಾ ಸೂತ್ರಗಳಿಂದ, ಪರಮಾತ್ಮ, ಜೀವಾತ್ಮ ಮತ್ತು ಪ್ರಕೃತಿ, ಇವು ಮೂರೂ ತತ್ವಗಳು ಭಿನ್ನ ಭಿನ್ನ ಪದಾರ್ಥಗಳೆಂದು ಸ್ಪಷ್ಟವಾಗುತ್ತದೆ. ವೇದಾಂತ ಸೂತ್ರದಲ್ಲಿ ಜಿಜ್ಞಾಸುವಿನ ಉಲ್ಲೇಖವಿದೆ. ತನಗಿಂತ ಭಿನ್ನವಾದ ಒಂದು ವಸ್ತು ಇರುವುದರಿಂದಲೇ ಜಿಜ್ಞಾಸುವಿನ ಮನದಲ್ಲಿ ಅದು ಏನೆಂದು ತಿಳಿದುಕೊಳ್ಳುವ ಜಿಜ್ಞಾಸೆಯು ಉತ್ಪನ್ನವಾಗುತ್ತದೆ. ಇಲ್ಲದಿದ್ದರೆ ಈ ಜಿಜ್ಞಾಸೆಗೆ ಅರ್ಥವಿಲ್ಲ. ಈ ಜಿಜ್ಞಾಸೆಯ ಲಕ್ಷ್ಯವಾಗಿರುವವನು ಜಗತ್ತನ್ನು ಸೃಷ್ಟಿಸುತ್ತಾನೆ, ಅದರ ಪಾಲನೆ ಮಾಡುತ್ತಾನೆ ಮತ್ತು ಪ್ರಳಯವನ್ನೂ ಮಾಡುತ್ತಾನೆ. ಯಾವ ಪದಾರ್ಥದಿಂದ ಅವನು ಈ ಎಲ್ಲಾ ಕಾರ್ಯಗಳನ್ನು ಮಾಡುತ್ತಾನೆಯೋ ಅದು ಪ್ರಕೃತಿಯಾಗಿದೆ. ಹೀಗೆ ಸೃಷ್ಟಿ, ಸ್ಥಿತಿ, ಪ್ರಳಯಾದಿಗಳ ಕರ್ತೃವಾದ ಪರಮಾತ್ಮನು ಅನಾದಿ, ಅವನನ್ನು ತಿಳಿದುಕೊಳ್ಳಬೇಕೆಂದು ಜಿಜ್ಞಾಸೆ ಪಡುವ ಜೀವಾತ್ಮರೂ ಅನಾದಿ ಮತ್ತು ಯಾವುದರಿಂದ ಪರಮಾತ್ಮನು ಸೃಷ್ಟಿ ಇತ್ಯಾದಿ ಕಾರ್ಯಗಳನ್ನು ಮಾಡುತ್ತಾನೆಯೋ ಆ(ಉಪಾದಾನ ಕಾರಣವಾದ) ಪ್ರಕೃತಿಯೆಂಬ ಮೂಲ ತತ್ವವೂ ಅನಾದಿ. ಆದುದರಿಂದ, ಕೇವಲ ಬ್ರಹ್ಮ, ಎಂದರೆ, ಪರಮಾತ್ಮನು ಮಾತ್ರ ಅನಾದಿ ಎಂಬ ಮಾತನ್ನು ನಂಬುವವರು ನಿಜವಾಗಿ ಯೋಗಿಗಳಾಗಲಿಕ್ಕೆ ಸಾಧ್ಯವಿಲ್ಲ. (ಎಂದರೆ, ಅವರ ಯೋಗವು ಸಾರ್ಥಕವಾಗುವುದಿಲ್ಲ).

ಇತ್ತೀಚೆಗಿನ ಆಚಾರ್ಯರಲ್ಲಿ ಒಬ್ಬ ಬಹುದೊಡ್ಡ ಯೋಗಿಯಾಗಿದ್ದ ಮಹರ್ಷಿ ದಯಾನಂದರು ಮಾತ್ರ ಈ ಮಾತನ್ನು ಸ್ಪಷ್ಟಪಡಿಸಿ, ಪರಮಾತ್ಮ, ಜೀವಾತ್ಮ ಮತ್ತು ಪ್ರಕೃತಿ ಇವು ಮೂರನ್ನೂ ಮೂರು ಕಾಲದಲ್ಲಿಯೂ ಬೇರೆ ಬೇರೆಯಾಗಿರುವ ಪದಾರ್ಥಗಳೆಂದು ಹೇಳಿದ್ದಾರೆ. ಸತ್ಯಾರ್ಥ ಪ್ರಕಾಶದ ಎಂಟನೇ ಸಮುಲ್ಲಾಸದಲ್ಲಿ "**ದ್ವಾ ಸುಪರ್ಣಾ ಸಯುಜಾ..........**" (ಋಗ್ವೇದ 1-164-20) ಈ ಮಂತ್ರದ ಆಧಾರದಿಂದ, ಇವರು ಪರಮಾತ್ಮ, ಜೀವಾತ್ಮ ಮತ್ತು ಪ್ರಕೃತಿ, ಇವು ಮೂರನ್ನೂ ಅನಾದಿಯೆಂದು ಸಿದ್ಧಪಡಿಸಿದ್ದಾರೆ. ಮಹರ್ಷಿ ದಯಾನಂದರು ಒಬ್ಬ ದೊಡ್ಡ ಯೋಗಿಯಾಗಿದ್ದರು ಎಂಬುದನ್ನು ಕೆಲವರು ಒಪ್ಪುವುದಿಲ್ಲ. ಇದಕ್ಕೆ ಮಹರ್ಷಿ ದಯಾನಂದರ ಕುರಿತಾಗಿ ಅವರ ಅಜ್ಞಾನವೇ ಕಾರಣವಾಗಿದೆ. ಮಹರ್ಷಿಯು ರಚಿಸಿದ

ಗ್ರಂಥಗಳನ್ನೂ ಮತ್ತು ಅವರು ತಮ್ಮ ಜೀವನಕಾಲದಲ್ಲಿ ಮಾಡಿದ ಕಾರ್ಯ, ಅವರ ವ್ಯವಹಾರ ಇತ್ಯಾದಿಗಳನ್ನು ಚೆನ್ನಾಗಿ ಅಧ್ಯಯನ ಮಾಡಿದರೆ, ಈ ಅಜ್ಞಾನವು ಖಂಡಿತವಾಗಿಯೂ ದೂರವಾಗುತ್ತದೆ. ಆದುದರಿಂದ, ಯೋಗದ ವಿಷಯದಲ್ಲಿ ಮಹರ್ಷಿ ದಯಾನಂದರ ವಿಚಾರಗಳನ್ನು ಪ್ರಮಾಣವೆಂದು ಸ್ವೀಕರಿಸುವುದಕ್ಕೆ ಏನೂ ತೊಂದರೆಯಿಲ್ಲ.

ತ್ರೈತವಾದವನ್ನು ಒಪ್ಪುವವರು ಮಾತ್ರ ಸಫಲ ಯೋಗಿಗಳಾಗಬಹುದು ಎಂಬ ಮಾತು ತರ್ಕದಿಂದಲೂ ಸಿದ್ಧವಾಗುತ್ತದೆ. ಅದು ಹೇಗೆಂದರೆ, ಕೇವಲ ಬ್ರಹ್ಮ, ಎಂದರೆ ಪರಮಾತ್ಮನು, ಮಾತ್ರ ಅನಾದಿ ಎಂದಾದರೆ, ಜನರು ಯೋಗಾಭ್ಯಾಸ ಕಲಿತು ಯೋಗಿಗಳಾಗುವ ಆವಶ್ಯಕತೆಯೇ ಇರುವುದಿಲ್ಲ. ಏಕೆಂದರೆ, ಒಬ್ಬ ಯೋಗಿಯು ತಾನೇ ಸಚ್ಚಿದಾನಂದ ಪರಮಾತ್ಮನಾಗಿದ್ದಾನೆ. ಹೀಗಿರುವಾಗ ಅವನಿಗೆ ಯಾವುದೇ ವಸ್ತುವಿನ ಆವಶ್ಯಕತೆ, ಅಥವಾ ಕೊರತೆ ಇರುವುದಿಲ್ಲ. ಯಾರು ಕೇವಲ ಪರಮಾತ್ಮ ಮತ್ತು ಪ್ರಕೃತಿ, ಇವೆರಡನ್ನು ಮಾತ್ರ ಅನಾದಿಯೆಂದು ಹೇಳುತ್ತಾರೆಯೋ, ಅವರ ಈ ಸಿದ್ಧಾಂತಕ್ಕನುಸಾರವಾಗಿಯೂ ಯಾರಿಗೂ ಯೋಗಿಯಾಗುವ ಆವಶ್ಯಕತೆ ಇಲ್ಲ. ಏಕೆಂದರೆ, ಪ್ರಕೃತಿಯು ಜಡವಾಗಿದೆ. ಜಡವಸ್ತುವು ಯೋಗಾಭ್ಯಾಸ ಮಾಡಲು ಸಮರ್ಥವಲ್ಲ ಮತ್ತು ಅದಕ್ಕೆ ಯೋಗಾಭ್ಯಾಸದ ಅಗತ್ಯವೂ ಇಲ್ಲ. ಇದೇ ರೀತಿ, ಕೇವಲ ಪ್ರಕೃತಿಯನ್ನು ಮಾತ್ರ ಅನಾದಿ ಎಂದು ಹೇಳುವವರ ಸಿದ್ಧಾಂತಕ್ಕನುಸಾರವಾಗಿಯೂ ಯಾರಿಗೂ ಯೋಗಿಯಾಗಬೇಕಾದ ಆವಶ್ಯಕತೆ ಇರುವುದಿಲ್ಲ. ಅಂತೆಯೇ, ಜೀವಾತ್ಮ ಮತ್ತು ಪ್ರಕೃತಿ ಇವೆರಡನ್ನು ಮಾತ್ರ, ಅನಾದಿ ಎಂದು ವಾದಿಸುವವರ ವಾದಕ್ಕೆ ಅನುಸಾರವಾಗಿಯೂ ಸಹ ಯಾರೂ ಯೋಗಿಯಾಗಬೇಕಾದ್ದಿಲ್ಲ. ಏಕೆಂದರೆ, ಪರಮಾತ್ಮನೆಂಬ ಯಾವ ಒಂದು ಪದಾರ್ಥವೂ ಇಲ್ಲವೆಂದಾಗ ಯೋಗಾಭ್ಯಾಸಿಯು ಯಾರ ಸಾಕ್ಷಾತ್ಕಾರಕ್ಕಾಗಿ ಯೋಗಾಭ್ಯಾಸ ಮಾಡಬೇಕು? ಒಂದು ವೇಳೆ, ಜೀವಾತ್ಮರು ಯೋಗಾಭ್ಯಾಸದಿಂದ ತಾವೇ ಪರಮಾತ್ಮ ಅಥವಾ ಬ್ರಹ್ಮರಾಗುತ್ತಾರೆ ಎಂದಾದರೆ, ಯೋಗಾಭ್ಯಾಸದಲ್ಲಿ ಒಬ್ಬ ಜೀವಾತ್ಮನು ಪರಮಾತ್ಮನಾಗುವ ಸಾಮರ್ಥ್ಯವು ಎಲ್ಲಿಂದ ಬರುತ್ತದೆ? ಮತ್ತು ಯೋಗಾಭ್ಯಾಸ ಮಾಡಿ ಜೀವಾತ್ಮನು ಪರಮಾತ್ಮನಾಗುವ ಮೊದಲು ಬಂಧನದಲ್ಲಿ ಏಕೆ ಸಿಕ್ಕಿ ಬಿದ್ದ?

ಈ ರೀತಿ, ಪ್ರಪಂಚದಲ್ಲಿ ಈಗ ಈ ವಿಷಯದಲ್ಲಿ ಎಷ್ಟೆಲ್ಲಾ ವಾದಗಳಿವೆಯೋ ಅವುಗಳ ಪೈಕಿ ಕೇವಲ ಒಂದು ತ್ರೈತವಾದದಲ್ಲಿ ಮಾತ್ರ, ತದನುಸಾರವಾಗಿ ಒಬ್ಬ ವ್ಯಕ್ತಿಯು ನಡೆದುಕೊಂಡು ಹೋದರೆ, ಅವನು ನಿಜವಾಗಿಯೂ ಯೋಗಿಯಾಗಲಿಕ್ಕೆ ಸಾಧ್ಯವಿದೆ ಹೊರತು, ಅನ್ಯವಾದಗಳಿಗೆ ಅನುಸಾರವಾಗಿ ನಡೆದುಕೊಂಡು ಹೋದರೆ,

ಯಾರೂ ನಿಜವಾಗಿ ಯೋಗಿಯಾಗಲಿಕ್ಕೆ ಸಾಧ್ಯವಿಲ್ಲ. ಆದುದರಿಂದ, ಯೋಗದ ಜಿಜ್ಞಾಸುಗಳು ಮತ್ತು ಯೋಗದ ಶಿಕ್ಷಕರು ಮೊದಲು ತ್ರೈತವಾದವನ್ನು ಸ್ವೀಕಾರಮಾಡಿ, ನಂತರ ಯೋಗಾಭ್ಯಾಸ ಮಾಡಬೇಕು ಮತ್ತು ಮಾಡಿಸಬೇಕು. ಇಲ್ಲವಾದರೆ, ಇವರೆಲ್ಲಾ ತಾವಂತೂ ದುಃಖಸಾಗರದಲ್ಲಿ ಮುಳುಗುತ್ತಾರೆ ಮಾತ್ರವಲ್ಲ ಇವರ ಮಾತನ್ನು ನಂಬಿ ಯೋಗಾಭ್ಯಾಸ ಮಾಡುವವರೂ ತಮ್ಮ ಜೀವನವನ್ನು ವ್ಯರ್ಥವಾಗಿ ಕಳೆಯುವರು.

ಒಂದು ಬಾರಿ, ದೇಶವಿದೇಶಗಳಿಗೆ ಹೋಗಿ, ಜನರಿಗೆ ಯೋಗದ ಪ್ರಶಿಕ್ಷಣ ಕೊಟ್ಟ ಮತ್ತು ದೊಡ್ಡ ಯೋಗಿಯೆಂದು ಹೆಸರು ಪಡೆದ ಸನ್ಯಾಸಿಯೊಡನೆ ನನ್ನ ವಾರ್ತಾಲಾಪವು ನಡೆಯಿತು. ಆಗ ಯಾವ ಯಾವ ವಿಷಯಗಳ ಮೇಲೆ ಶಂಕಾಸಮಾಧಾನಗಳಾದುವೋ ಅವುಗಳಲ್ಲಿ ಕೆಲವು ಮುಖ್ಯ ವಿಷಯಗಳನ್ನು ಎಲ್ಲರ ಹಿತಕ್ಕಾಗಿ ಇಲ್ಲಿ ಕೊಡುತ್ತಿದ್ದೇನೆ :

**ಪ್ರಶ್ನೆ** :– ತಾವು ವೇದವನ್ನು ಈಶ್ವರೀಯ ಜ್ಞಾನವೆಂದು ಒಪ್ಪುತ್ತೀರಾ, ಇಲ್ಲವೆ?

**ಸ್ವಾಮೀಜಿ ಉತ್ತರ**:– ನಾನು ವೇದವನ್ನು ಈಶ್ವರೀಯ ಜ್ಞಾನವೆಂದು ಒಪ್ಪುವುದಿಲ್ಲ. ಇದು ಋಷಿಗಳ ಹೃದಯದಲ್ಲಿ ಉತ್ಪನ್ನವಾದುದಾಗಿದೆ.

**ಪ್ರಶ್ನೆ** :– ತಾವು ಪರಮಾತ್ಮ ಮತ್ತು ಪ್ರಕೃತಿಯಿಂದ ಜೀವಾತ್ಮನ ಅಸ್ತಿತ್ವವನ್ನು ಪ್ರತ್ಯೇಕವಾಗಿ ಸ್ವೀಕರಿಸುತ್ತೀರಾ, ಇಲ್ಲವೆ?

**ಉತ್ತರ**:– ನಾನು ಪರಮಾತ್ಮ ಮತ್ತು ಪ್ರಕೃತಿಯಿಂದ ಪ್ರತ್ಯೇಕವಾಗಿ ಜೀವಾತ್ಮನ ಅಸ್ತಿತ್ವವನ್ನು ಸ್ವೀಕರಿಸುವುದಿಲ್ಲ.

**ಪ್ರಶ್ನೆ** :– ಮನು ಮೊದಲಾದ ಋಷಿಗಳು ಪರಮಾತ್ಮ ಮತ್ತು ಪ್ರಕೃತಿಯಿಂದ ಜೀವಾತ್ಮನು ಭಿನ್ನವಾಗಿದ್ದಾನೆಂದು ಹೇಳಿದ್ದಾರಲ್ಲವೆ?

**ಉತ್ತರ**:– ಆ ಋಷಿಗಳು ಏನೇ ಹೇಳಲಿ, ನನ್ನ ಅಭಿಪ್ರಾಯಕ್ಕನುಸಾರವಾಗಿ ಜೀವಾತ್ಮನ ಒಂದು ಪ್ರತ್ಯೇಕವಾದ ಅಸ್ತಿತ್ವವು ಇಲ್ಲವೇ ಇಲ್ಲ.

**ಪ್ರಶ್ನೆ** :– ಪರಮಾತ್ಮನಲ್ಲಿ ಏನಾದರೂ ಗುಣ ಇದೆಯೇ ಇಲ್ಲವೆ?

**ಉತ್ತರ**:– ಪರಮಾತ್ಮನಲ್ಲಿ ಯಾವ ಗುಣವೂ ಇಲ್ಲ. ಸ್ವಾಮಿ ದಯಾನಂದರು ಪರಮಾತ್ಮನನ್ನು ಸಗುಣ ಮತ್ತು ನಿರ್ಗುಣ ಎಂದು ಹೇಳಿದ್ದಾರೆ. ಇದು ಸರಿಯಲ್ಲ.

  

**ಪ್ರಶ್ನೆ** :- ನಿಮ್ಮ ಈ ವಿಚಾರಗಳಿಗೆ ಏನಾದರೂ ಪ್ರಮಾಣವಿದೆಯೇ?

**ಉತ್ತರ**:- ಪ್ರಮಾಣ ಏನೂ ಇಲ್ಲ. ಇದು ನನ್ನ ವ್ಯಕ್ತಿಗತ ವಿಚಾರ.

[ಪ್ರಮಾಣ ಕೇಳಿದಾಗ ಪ್ರತಿಯೊಂದು ಸರ್ತಿಯೂ ಸ್ವಾಮೀಜಿ ಇದೇ ರೀತಿಯ ಉತ್ತರ ಕೊಡುತ್ತಿದ್ದರು."ನನಗೆ ಹಾಗೆ ಕಾಣುತ್ತದೆ" — ಈ ಸಂದರ್ಭದಲ್ಲಿ ಸ್ವಾಮಿ ಅಗ್ನಿದೇವ ಭೀಷ್ಮ ಇವರು ಒಂದು ಪ್ರಶ್ನೆ ಹಾಕಿದರು : "ಸ್ವಾಮೀಜಿ ! ತಾವು ಬರೆದ ಪುಸ್ತಕದಲ್ಲಿ ಮೂರು ಅನಾದಿ ತತ್ವಗಳ ಅಸ್ತಿತ್ವವನ್ನು ಸ್ವೀಕರಿಸಿದ್ದೀರಿ" ಇದಕ್ಕೆ ಸ್ವಾಮೀಜಿಯವರು ಕೊಟ್ಟ ಉತ್ತರ ಇದು : "ಆಗ (ನಾನು ಪುಸ್ತಕವನ್ನು ಬರೆದಾಗ) ನಾನು ಮೂರು ಅನಾದಿ ತತ್ವಗಳ ಅಸ್ತಿತ್ವವನ್ನು ಒಪ್ಪುತ್ತಿದ್ದೆನು. ಆದರೆ, ಈಗ ನನ್ನ ವಿಚಾರವು ಬದಲಾಗಿದೆ"]

**ಪ್ರಶ್ನೆ** :- ತಮ್ಮ ಈಗಿನ ವಿಚಾರವೂ ಒಂದು ವೇಳೆ ಪರಿವರ್ತಿಸಿ ಹೋದರೆ?

**ಉತ್ತರ**:- ಈಗ ಅದು ಸಾಧ್ಯವಿಲ್ಲ. ನಾನೀಗ ಪರಮಾತ್ಮ ಮತ್ತು ಪ್ರಕೃತಿ, ಇವೆರಡನ್ನು ಮಾತ್ರ ಅನಾದಿ ಎಂದು ನಂಬುತ್ತೇನೆ. ಜೀವರ ಅಸ್ತಿತ್ವವಿದೆ ಎಂದು ನನಗೆ ಅನಿಸುವುದಿಲ್ಲ. ನನ್ನ ಈ ವಿಚಾರವು ಇನ್ನು ಬದಲಾಗುವುದಿಲ್ಲ.

ಜಗತ್ತಿನಲ್ಲಿ ಇಂತಹ ಅನೇಕ ಮಂದಿ ಜನರು ಯೋಗಿಗಳಾಗಿ ಮೆರೆಯುತ್ತಿದ್ದಾರೆ. "ನನ್ನ ಅಭಿಪ್ರಾಯ ಹೀಗೆ", "ಇದು ನನ್ನ ಅನುಭವ" ಎಂದು ಹೇಳಿಕೊಂಡು, ಜನರು ತಮ್ಮ ಸಿದ್ಧಾಂತಗಳನ್ನು ಮಂಡಿಸುತ್ತಾ ಹೋಗುತ್ತಾರೆ. ಇವರ ಈ ಕಪೋಲ ಕಲ್ಪಿತ ಸಿದ್ಧಾಂತಗಳನ್ನು ನೆಲಸಮಮಾಡಬೇಕಾದರೆ ಹೆಚ್ಚು ಹೊತ್ತು ಬೇಕಾಗುವುದಿಲ್ಲ. ಇದಕ್ಕೆ ಸಾಂಖ್ಯ ದರ್ಶನದ ರಚನೆ ಮಾಡಿರುವ ಕಪಿಲ ಮುನಿಗಳ ಒಂದು ಮಾತೇ ಸಾಕು. ಅವರು ಹೇಳಿದ್ದಾರೆ :

**ನಾಯ್ಯೌಕ್ತಿಕ ಸ್ಯ ಸಂಗ್ರಹೋಽನ್ಯಥಾ ಬಾಲೋನ್ಮತ್ತಾದಿ ಸಮತ್ವಂ ॥**

[ಸಾಂಖ್ಯದರ್ಶನ 1-26]

ಅರ್ಥಾತ್, ಒಂದು ವೇಳೆ, ತರ್ಕವಿರುದ್ಧ ಮಾತುಗಳನ್ನು ನಾವು ಒಪ್ಪಿಕೊಳ್ಳಬೇಕೆಂದಾದರೆ, ಮತ್ತೆ ಅಜ್ಞಾನಿ ಹಾಗೂ ಉನ್ಮತ್ತರ ಮಾತುಗಳನ್ನೂ ಒಪ್ಪಿಕೊಳ್ಳಬೇಕಾಗುತ್ತದೆ. ಆದುದರಿಂದ, ಈ ರೀತಿಯಲ್ಲಿ, ಪ್ರಮಾಣವೂ ಇಲ್ಲ, ತರ್ಕವೂ ಇಲ್ಲ, ಕೇವಲ ತಮ್ಮ ಕಲ್ಪನೆಗಳಿಂದ ಸಿದ್ಧಾಂತಗಳನ್ನು ಮಂಡಿಸುವ ವ್ಯಕ್ತಿಗಳು ಎಂದಿಗೂ ನಿಜವಾದ ಯೋಗಿಗಳಾಗಲಿಕ್ಕೆ ಸಾಧ್ಯವಿಲ್ಲ. ಯಾರು ಪರಮಾತ್ಮ,

ಜೀವಾತ್ಮ ಮತ್ತು ಪ್ರಕೃತಿ ಇವು ಮೂರರ ವಾಸ್ತವಿಕ ಸ್ವರೂಪವನ್ನು ತಿಳಿದುಕೊಂಡು, ನಿಷ್ಠೆಯಿಂದ ತದನುಸಾರವಾಗಿ ನಡೆದು ಬರುತ್ತಾರೆಯೋ ಅವರು ಮಾತ್ರ (ಸಫಲ) ಯೋಗಿಗಳಾಗಲಿಕ್ಕೆ ಸಾಧ್ಯವಿದೆ. ಬೇರೆಯವರಿಗೆ ಇದು ಸಾಧ್ಯವಿಲ್ಲ.

## 2. ವೇದ, ವೇದಾಂಗ, ಉಪಾಂಗಾದಿಗಳ ಅಧ್ಯಯನದ ಆವಶ್ಯಕತೆ

ಯೋಗದ ವಿಷಯದಲ್ಲಿ ಇನ್ನೊಂದು ಭ್ರಾಂತಿಯು ಜನರಲ್ಲಿ ಕಂಡು ಬರುತ್ತದೆ. ಅದೇನೆಂದರೆ, ವೇದಗಳು, ವೇದಾಂಗಗಳು, ಉಪಾಂಗಗಳು, ಈ ಮೊದಲಾದ ಶಾಸ್ತ್ರ ಗ್ರಂಥಗಳನ್ನು ಅಧ್ಯಯನ ಮಾಡದೆಯೇ ಒಬ್ಬ ವ್ಯಕ್ತಿಯು ಪೂರ್ಣ ಯೋಗಿಯಾಗಲಿಕ್ಕೆ ಸಾಧ್ಯವಿದೆ, ಎಂಬ ಒಂದು ವಿಚಾರ. ಈ ದಿನಗಳಲ್ಲಿ ಅನೇಕ ಮಂದಿ ಇಂತಹ ವಿಚಾರಗಳನ್ನೇ ಪ್ರಚಾರ ಮಾಡುತ್ತಿದ್ದಾರೆ. ಯೋಗಾಭ್ಯಾಸ ಮಾಡುತ್ತಾ ಮಾಡುತ್ತಾ, ಜನರಿಗೆ ತನ್ನಷ್ಟಕ್ಕೇ ಎಲ್ಲಾ ಜ್ಞಾನ-ವಿಜ್ಞಾನಗಳು ಲಭಿಸುತ್ತವೆ. ಆದುದರಿಂದ, ವೇದಾದಿ ಶಾಸ್ತ್ರಗಳ ಅಧ್ಯಯನ ಅಧ್ಯಾಪನದ ಏನೂ ಆವಶ್ಯಕತೆಯಿಲ್ಲ. ಈ ವಿಚಾರದ ಪರಿಶೀಲನೆ ಮಾಡಿ ನೋಡಿದರೆ, ಇದು ಒಂದು ದೊಡ್ಡ ಭ್ರಾಂತಿಯುಕ್ತವಾದ ಮಾತೆಂದು ಗೊತ್ತಾಗುತ್ತದೆ.

ಮಹರ್ಷಿ ಮನು ಒಂದು ಕಡೆ ಹೇಳಿದ್ದಾರೆ :

**ಚಾತುರ್ವರ್ಣ್ಯಂ ತ್ರಯೋ ಲೋಕಾಶ್ಚತ್ವಾರಶ್ಚಾಶ್ರಮಾಃ ಪೃಥಕ್ ।**
**ಭೂತಂ ಭವ್ಯಂ ಭವಿಷ್ಯಚ್ಚ ಸರ್ವಂ ವೇದಾತ್ ಪ್ರಸಿದ್ಧ್ಯತಿ ॥**

[ಮನುಸ್ಮೃತಿ 12-9711]

ಅರ್ಥಾತ್, ನಾಲ್ಕು ವರ್ಣಗಳು, ನಾಲ್ಕು ಆಶ್ರಮಗಳು, ಭೂತ, ಭವಿಷ್ಯತ್ ಮತ್ತು ವರ್ತಮಾನ ಕಾಲದ ಎಲ್ಲಾ ವಿದ್ಯೆಗಳು ವೇದಗಳಿಂದಲೇ ಪ್ರಸಿದ್ಧವಾಗುತ್ತವೆ. ಮಹರ್ಷಿ ದಯಾನಂದರು ಈ ವಿಷಯವನ್ನು ಈ ರೀತಿ ಪ್ರಶ್ನೋತ್ತರದ ರೂಪದಲ್ಲಿ ಸ್ಪಷ್ಟಪಡಿಸಿದ್ದಾರೆ.

**ಪ್ರಶ್ನೆ** :- ಜಗತ್ತನ್ನು ರಚಿಸುವ ಸಾಮರ್ಥ್ಯ ಪರಮಾತ್ಮನನ್ನು ಬಿಟ್ಟು ಇತರ ಯಾವ ಜೀವರಿಗೂ ಇಲ್ಲ. ಆದರೆ, ಯಾವ ರೀತಿಯಲ್ಲಿ ಮನುಷ್ಯರು ವ್ಯಾಕರಣ ಶಾಸ್ತ್ರಾದಿ ಗ್ರಂಥಗಳನ್ನು ರಚಿಸಲು ಸಮರ್ಥರಾಗಿರುವರೋ, ಅದೇ ರೀತಿ ವೇದಗಳನ್ನು ರಚಿಸಲು ಸಮರ್ಥರಾಗಿರಬಹುದು?

**ಉತ್ತರ**:- ಈ ಮಾತು ಸರಿಯಲ್ಲ. ಪರಮಾತ್ಮನು ಮೊದಲು ವೇದಗಳ ರಚನೆ ಮಾಡುತ್ತಾನೆ. ಆ ವೇದಗಳನ್ನು ಕಲಿತ ನಂತರ, ಮನುಷ್ಯರಲ್ಲಿ ಗ್ರಂಥ

ರಚನೆಯ ಸಾಮರ್ಥ್ಯವು ಬರುತ್ತದೆ. ಪ್ರಾರಂಭದಲ್ಲಿ ವೇದಗಳನ್ನು ಕಲಿತು ಜ್ಞಾನವನ್ನು ಸಂಪಾದಿಸದೆ ಯಾವ ಮನುಷ್ಯರೂ ವಿದ್ವಾಂಸರಾಗಲಿಕ್ಕೆ ಸಾಧ್ಯವಿಲ್ಲ.(ಋಗ್ವೇದಾದಿ ಭಾಷ್ಯ ಭೂಮಿಕೆಯಲ್ಲಿ ವೇದೋತ್ಪತ್ತಿ ವಿಷಯ)

ಮಹರ್ಷಿ ದಯಾನಂದರ ಈ ಮಾತುಗಳಿಂದ, ಒಬ್ಬ ವ್ಯಕ್ತಿಯು, ಮೊದಲು, ವಿದ್ವಾಂಸನಾಗದೆ, ಯೋಗಿಯಾಗುವುದಕ್ಕೆ ಸಾಧ್ಯವೇ ಇಲ್ಲ. ಮಹರ್ಷಿ ದಯಾನಂದರು ಅದೇ ಪ್ರಕರಣದಲ್ಲಿ ಪುನಃ ಬರೆದಿದ್ದಾರೆ : "ಆ ಸ್ವಾಭಾವಿಕ ಜ್ಞಾನ, ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ— ವಿದ್ಯೆಯ ಸಾಧನವು ಸ್ವತಂತ್ರವಾಗಿ ತನ್ನಷ್ಟಕ್ಕೇ ಎಂದಿಗೂ ಸಿಗುವುದಿಲ್ಲ".

**ಪ್ರಶ್ನೆ** :- ಯೋಗ ದರ್ಶನ (2-28)ದಲ್ಲಿ "**ಯೋಗಾಂಗಾನುಷ್ಠಾನಾದಶುದ್ಧಿಕ್ಷಯೇ ಜ್ಞಾನ-ದೀಪ್ತಿರಾವಿವೇಕಖ್ಯಾತೇಃ**", ಅರ್ಥಾತ್, "ಯೋಗದ ಎಂಟು ಅಂಗಗಳನ್ನು ಅನುಷ್ಠಾನ ಮಾಡಿದಾಗ, ಅಶುದ್ಧಿಯು ನಶಿಸಿ ಹೋಗಿ, ವಿವೇಕ ಪರ್ಯಂತ ಜ್ಞಾನದ ವಿಕಾಸವಾಗುತ್ತದೆ". ಆದುದರಿಂದ, ವೇದಾದಿ ಶಾಸ್ತ್ರಗಳ ಅಧ್ಯಯನದ ಆವಶ್ಯಕತೆಯೇ ಇಲ್ಲ.

**ಉತ್ತರ** :- ನಿಜವಾಗಿ ಯಾರು ಈ ಸೂತ್ರದ ಅರ್ಥವನ್ನು ತಿಳಿದಿಲ್ಲವೋ, ಅವರೇ ಈ ರೀತಿ ಹೇಳುತ್ತಾರೆ. ಏಕೆಂದರೆ, ಯೋಗದರ್ಶನಕ್ಕನುಸಾರವಾಗಿ ಯೋಗದ ಎಂಟು ಅಂಗಗಳು ಹೀಗಿವೆ :

"**ಯಮನಿಯಮಾಸನಪ್ರಾಣಾಯಾಮ ಪ್ರತ್ಯಾಹಾರ ಧಾರಣಾಧ್ಯಾನ ಸಮಾಧಯೋಽಷ್ಟಾವಂಗಾನಿ ॥**" (ಯೋಗದರ್ಶನ 2-29). ಇವುಗಳಲ್ಲಿ ಎರಡನೆಯ ಅಂಗವು ನಿಯಮವಾಗಿದೆ. ಶೌಚ, ಸಂತೋಷ, ತಪ, ಸ್ವಾಧ್ಯಾಯ ಮತ್ತು ಈಶ್ವರ-ಪ್ರಣಿಧಾನ ಇವು ನಿಯಮಗಳಾಗಿವೆ. ಯೋಗದರ್ಶನದ ಭಾಷ್ಯ ಬರೆದ ವ್ಯಾಸರು, ಸ್ವಾಧ್ಯಾಯ ಶಬ್ದದ ಅರ್ಥವನ್ನು ಈ ರೀತಿ ವಿವರಿಸಿದ್ದಾರೆ :

"**ಸ್ವಾಧ್ಯಾಯೋ ಮೋಕ್ಷ ಶಾಸ್ತ್ರಾಣಾಮಧ್ಯಯನಂ ಪ್ರಣವ ಜಪೋವಾ**" (ಯೋಗದರ್ಶನ 2-32ರಲ್ಲಿ ವ್ಯಾಸಭಾಷ್ಯ). ಎಂದರೆ, ಮೋಕ್ಷ ಶಾಸ್ತ್ರಗಳ ಅಧ್ಯಯನ ಮತ್ತು ಪ್ರಣವ ಮಂತ್ರ "ಓಂ ಕಾರ"ದ ಜಪವೇ ಸ್ವಾಧ್ಯಾಯವಾಗಿದೆ. ಮೋಕ್ಷ ಶಾಸ್ತ್ರಗಳೆಂದರೆ, ನಾಲ್ಕು ವೇದಗಳು, ಮತ್ತು ಇವುಗಳಿಗೆ ಅನುಕೂಲವಾಗಿರುವ ಋಷಿ ಗ್ರಂಥಗಳು.

**"ನಾ ವೇದವಿನ್ಮನುತೇ ತಂ ಬೃಹಂತಂ"**, ಎಂದರೆ, ವೇದಗಳನ್ನು ಅರಿಯದ ಮನುಷ್ಯನು ಆ ಪರಮಾತ್ಮನನ್ನು ಸರಿಯಾಗಿ ತಿಳಿದುಕೊಳ್ಳಲು ಸಾಧ್ಯವಿಲ್ಲ, ಎಂದು ಮಹರ್ಷಿ ದಯಾನಂದರು ಸ್ಪಷ್ಟವಾಗಿ ಹೇಳಿದ್ದಾರೆ. (ಋಗ್ವೇದಾದಿ ಭಾಷ್ಯ ಭೂಮಿಕೆಯಲ್ಲಿ, ಪಠನ ಪಾಠನ ವಿಷಯ).ಆದುದರಿಂದ, ಯೋಗವು ಸಫಲವಾಗಬೇಕಾದರೆ, ವೇದಾದಿ ಶಾಸ್ತ್ರಗಳ ಅಧ್ಯಯನ ಅಪರಿಹಾರ್ಯವಾಗಿದೆ.

**ಪ್ರಶ್ನೆ** :- ಕೆಲವರು, ಯೋಗವೇ ಯೋಗವನ್ನು ಕಲಿಸಿಕೊಡುತ್ತದೆ **(ಯೋಗ ಏವ ಯೋಗಸ್ಯೋಪಾಧ್ಯಾಯಃ)** ಎಂದು ಹೇಳುತ್ತಾರೆ. ತದನುಸಾರವಾಗಿ ಹೇಳುವುದಾದರೆ, ಜನರಿಗೆ ಯೋಗಿಗಳಾಗಬೇಕಾದರೆ, ವೇದಾದಿ ಶಾಸ್ತ್ರಗಳನ್ನು ಕಲಿಯುವ ಆವಶ್ಯಕತೆಯಾಗಲೀ, ಅಥವಾ ಒಬ್ಬ ಮಾರ್ಗದರ್ಶಕ ಗುರುವಿನ ಆವಶ್ಯಕತೆಯಾಗಲೀ ಇಲ್ಲವೇ ಇಲ್ಲ.

ಉತ್ತರ:- ಈ ಮಾತೂ ಕೂಡಾ ಸತ್ಯವಲ್ಲ. ಏಕೆಂದರೆ : **"ಯೋಗ ಏವ ಯೋಗಸ್ಯೋಪಾಧ್ಯಾಯಃ"** ಎಂಬ ವಾಕ್ಯದ ನಿಜವಾದ ಅರ್ಥ, ಒಬ್ಬ ವ್ಯಕ್ತಿಯು ಯೋಗದ ಒಂದು ಸ್ಥಿತಿಯ ಅನುಭವವನ್ನು ಮಾಡಿಕೊಂಡ ಮೇಲೆ ಆ ವ್ಯಕ್ತಿಗೆ, ಆ ಸ್ಥಿತಿಗಿಂತ ಇನ್ನೂ ಮೇಲಿನ ಸ್ಥಿತಿಯನ್ನು ತಿಳಿದುಕೊಳ್ಳುವ ಸಾಮರ್ಥ್ಯವು ಬರುತ್ತದೆ, ಎಂದಾಗಿದೆ. ಆದರೆ, ಯೋಗದ ಒಂದು ಸ್ಥಿತಿಯ ಅನುಭವ ಆದನಂತರ, ಅದರ ಮೇಲಿನ ಇನ್ನೊಂದು ಸ್ಥಿತಿಯ ಅನುಭವವನ್ನು ಪಡೆಯಬೇಕಾದರೆ, ಅದಕ್ಕೆ ವೇದ-ಜ್ಞಾನವೇ ಕಾರಣವಾಗಿದೆಯೇ ಹೊರತು ಸ್ವಾಭಾವಿಕ ಜ್ಞಾನವಲ್ಲ. ಏಕೆಂದರೆ, ಜ್ಞಾನವು 'ಜ್ಞಾತಾ'ನ (ಜ್ಞಾನಿಯ) ಆಶ್ರಯದಲ್ಲಿರುತ್ತದೆ, ಮತ್ತು ಜೀವಾತ್ಮನ ಸ್ವಾಭಾವಿಕ ಜ್ಞಾನವು ಸಮಾಧಿಯನ್ನು ದೊರಕಿಸುವುದಿಲ್ಲ. ಆದುದರಿಂದ, ಈಶ್ವರೀಯ ವೇದ-ಜ್ಞಾನದಿಂದಲೇ ಯೋಗಿಯು ಯೋಗದ ಉನ್ನತ ಸ್ಥಿತಿಯನ್ನು ಸಂಪಾದಿಸುತ್ತಾನೆ.

**"ಯೋಗ ಏವ ಯೋಗಸ್ಯೋಪಾಧ್ಯಾಯಃ"** ಎಂಬ ಈ ವಾಕ್ಯವು ಅನೇಕ ಜನರನ್ನು ಭ್ರಾಂತಿಯ ಸುಳಿಯಲ್ಲಿ ಸಿಕ್ಕಿ ಹಾಕಿಸಿದೆ. ಏಕೆಂದರೆ, ಜನರು ಇದರ ಸರಿಯಾದ ಅರ್ಥವನ್ನು ತಿಳಿದುಕೊಳ್ಳದೆ, ಯೋಗವೇ ಯೋಗವನ್ನು ಕಲಿಸುತ್ತದೆ, ಆದುದರಿಂದ, ಬೇರೆಯಾರಿಂದಲೂ ಏನೂ ಕಲಿಯಬೇಕಾದದ್ದಿಲ್ಲ, ಎಂದು ಹೇಳುತ್ತಾರೆ. ಇದರಿಂದ ಶ್ರೇಷ್ಠ ಗುರುಪರಂಪರೆಯು ಕಳೆದು ಹೋಯಿತು. ಮತ್ತು ಅದರ ಬದಲಿಗೆ,

ಕುರುಡು ಪರಂಪರೆಗಳು ಬೆಳೆದುಕೊಂಡು ಬಂದಿವೆ. ಈ ಮಾತನ್ನೇ ದೃಷ್ಟಿಯಲ್ಲಿಟ್ಟುಕೊಂಡು ಸಾಂಖ್ಯದರ್ಶನದ ರಚಯಿತ ಕಪಿಲ ಮುನಿಗಳು: **"ಉಪದೇಶ್ಯೋಽಪದೇಷ್ಟೃತ್ವಾತ್ ತತ್ಸಿದ್ಧಿ:"** (ಸಾಂಖ್ಯದರ್ಶನ 3-79)" ಮತ್ತು **"ಇತರಥಾಽಂಧ ಪರಂಪರಾ"** (ಸಾಂಖ್ಯದರ್ಶನ 3-81) ಎಂದು ಹೇಳಿದ್ದಾರೆ. ಇದರ ತಾತ್ಪರ್ಯವೇನೆಂದರೆ, ಮೋಕ್ಷದ ರಹಸ್ಯವನ್ನರಿತ ಗುರುಗಳು ಮತ್ತು ಆ ಗುರುಗಳಿಂದ ವಿದ್ಯಾಗ್ರಹಣ ಮಾಡುವ ಉತ್ತಮ ಶಿಷ್ಯರು, ಇವರಿಂದಾಗಿ ಅನೇಕ ಜನರು ಜೀವನ್ಮುಕ್ತಿಯ ಸ್ಥಿತಿಯನ್ನು ಪಡೆದು ಲಾಭಾನ್ವಿತರಾಗುತ್ತಾರೆ. ಆದರೆ, ಜಗತ್ತಿನಲ್ಲಿ ನಿಜವಾದ ಗುರುಗಳು ಮೋಕ್ಷಪ್ರಾಪ್ತಿಯ ಮಾರ್ಗವನ್ನು ತಿಳಿದವರು ಮತ್ತು ಇತರರಿಗೆ ತಿಳಿಸಲು ಸಮರ್ಥರಾದವರು ಇಲ್ಲದಿರುವಾಗ, ಪುನಃ ಅಂಧ ಪರಂಪರೆಯು ನಡೆಯುತ್ತದೆ. ಈ ಅಂಧ ಪರಂಪರೆಗೆ ಒಳಗಾಗಿ ತುಂಬಾ ಜನರು ತಥಾಕಥಿತ ಯೋಗದ ಹೆಸರಿನಲ್ಲಿ ತಮ್ಮ ಬಹುಮೂಲ್ಯ ಜೀವನವನ್ನು ವ್ಯರ್ಥವಾಗಿ ಕಳೆದುಕೊಳ್ಳುತ್ತಾರೆ. ಇವರ ಸ್ಥಿತಿಯು, ಗೀತೆಯ ಹದಿನೆಂಟು ಅಧ್ಯಾಯಗಳನ್ನು ಗಿಳಿಪಾಠ ಮಾಡಿಕೊಂಡರೂ, ಒಬ್ಬರೂ ಗುರುಗಳಾಗಿ ಬರಲಿಲ್ಲ, ಎನ್ನುವಂತೆ ಆಗಿಬಿಡುತ್ತದೆ. ಇದೇ ರೀತಿ, ಅನೇಕ ಜನರು ವೇದಗಳನ್ನೂ ಕಲಿಯುವುದಿಲ್ಲ, ನಿಜವಾದ ಗುರುಗಳಿಂದ ಯೋಗದ ಶಿಕ್ಷಣವನ್ನೂ ಪಡೆಯುವುದಿಲ್ಲ. ಆದರೆ, **"ಯೋಗ ಏವ ಯೋಗಸ್ಯೋಽಪಾಧ್ಯಾಯಃ"** ಎಂದು ಗಿಳಿಪಾಠ ಹೇಳುತ್ತಾ ಮತ್ತು ಈ ವಾಕ್ಯದ ಅಪಾರ್ಥ ಹೇಳಿಕೊಳ್ಳುತ್ತಾ ಹೋಗುತ್ತಾರೆ. ಹೀಗೆ ಇವರೆಲ್ಲಾ ತಾವಂತೂ ಯೋಗ ವಿದ್ಯೆಯ ಲಾಭದಿಂದ ವಂಚಿತರಾಗುತ್ತಾರೆ, ಮತ್ತು ತಮ್ಮ ಅನುಯಾಯಿಗಳನ್ನೂ ದುಃಖಸಾಗರದಲ್ಲಿ ಮುಳುಗಿಸಿಬಿಡುತ್ತಾರೆ.

ನಮ್ಮ ದೇಶದಲ್ಲಿ ಒಬ್ಬ ಪ್ರಸಿದ್ಧ ಯೋಗಿ ಇದ್ದಾರೆ. ಅವರು ತಮ್ಮ ಜೀವನ ವೃತ್ತಾಂತದಲ್ಲಿ ಬರೆದಿದ್ದಾರೆ : "ನನ್ನ ಗುರುಗಳು ಒಂದು ದಿನ ನನ್ನ ತಲೆಯ ಮೇಲೆ ತಮ್ಮ ಕೈಯನ್ನು ಇಟ್ಟು, ನಾನು ವ್ಯಾಕರಣ ಶಾಸ್ತ್ರವನ್ನು ಓದುವುದನ್ನು ಬಿಟ್ಟುಬಿಡಬೇಕೆಂದು ಹೇಳಿದರು. ಯೋಗಕ್ಕೆ ಅದರ ಆವಶ್ಯಕತೆ ಇಲ್ಲವೆಂದು ಅವರು ನನಗೆ ತಿಳಿಸಿದರು......" ಈ ರೀತಿ ತಮ್ಮ ಲೇಖನಗಳಿಂದಲೂ, ಉಪದೇಶಗಳಿಂದಲೂ ವೇದಗಳ ಮೇಲೆ ಇವರೆಲ್ಲಾ ಘೋರ ಅನ್ಯಾಯವನ್ನು ಮಾಡುತ್ತಿದ್ದಾರೆ. ಇದರ ಪರಿಣಾಮ ಒಂದೇ-ಅಜ್ಞಾನ ಮತ್ತು ಅಧರ್ಮದ ವೃದ್ಧಿ.

ಮೇಲೆ ಹೇಳಿದ ಯೋಗಿಯ ಹಿಂದೆ ಅನೇಕ ಶಿಷ್ಯರು ಇದ್ದಾರೆ. ಅವರಲ್ಲಿ ಕೆಲವರು ತಮ್ಮನ್ನು ತಾವೇ ವೈದಿಕ ಧರ್ಮಾನುಯಾಯಿಗಳೆಂದೂ ಹೇಳುತ್ತಾರೆ. ಮಾತ್ರವಲ್ಲ, ಅವರು ಮಹರ್ಷಿ ದಯಾನಂದರನ್ನು ಒಬ್ಬ ಆಪ್ತ ಪುರುಷರೆಂದೂ ಒಪ್ಪಿಕೊಳ್ಳುತ್ತಾರೆ. ನನಗೆ ಒಂದು ದೊಡ್ಡ ಆಶ್ಚರ್ಯ ಏನೆಂದರೆ, ಈ ಆರ್ಯಸಮಾಜಗಳು, ವೈದಿಕ ಧರ್ಮಾವಲಂಬಿಗಳಾಗಿದ್ದೂ ಕೂಡಾ, ವೇದ-ವಿರುದ್ಧ ಸಿದ್ಧಾಂತಗಳ ಪ್ರಚಾರ ಮಾಡುತ್ತಿರುವ ಇಂತಹ ಸ್ವಾಮಿ ಯೋಗೇಶ್ವರಾನಂದರನ್ನು ಇವರು ಒಬ್ಬ ನಿಜವಾಗಿಯೂ ಪೂರ್ಣ ಯೋಗಿಯೆಂದುಕೊಂಡು ಹೇಗೆ ತಮ್ಮ ಗುರುಗಳನ್ನಾಗಿ ವರಿಸಿಕೊಂಡರು ಎಂದು. ಮಹರ್ಷಿ ದಯಾನಂದರ ಮತ್ತು ಇವರ ವಿಚಾರಗಳು ಪರಸ್ಪರ ವಿರುದ್ಧವಾಗಿವೆ. ಮಹರ್ಷಿ ದಯಾನಂದರು, ಜೀವಾತ್ಮನನ್ನು ಪರಮಾತ್ಮ ಮತ್ತು ಪ್ರಕೃತಿಯಿಂದ ಭಿನ್ನವೆಂದು ಹೇಳಿದ್ದಾರೆ. ಈ ಸ್ವಾಮಿಗಳು ಜೀವಾತ್ಮರ ಪ್ರತ್ಯೇಕ ಅಸ್ತಿತ್ವವನ್ನು ಒಪ್ಪಿಕೊಳ್ಳುವುದಿಲ್ಲ. ಮಹರ್ಷಿ ದಯಾನಂದರು ವೇದವನ್ನು ಈಶ್ವರೀಯ ಜ್ಞಾನವೆಂದು ಪ್ರತಿಪಾದಿಸಿದ್ದಾರೆ. ಈ ಸ್ವಾಮಿಗಳು ವೇದವನ್ನು ಋಷಿಗಳ ರಚನೆಯೆಂದು ಹೇಳುತ್ತಾರೆ. ಮಹರ್ಷಿ ದಯಾನಂದರು ಪರಮಾತ್ಮನನ್ನು ಬಹುಗುಣ ಸಂಪನ್ನನೆಂದು ಹೇಳಿದ್ದಾರೆ. ಆದರೆ, ಈ ಸ್ವಾಮಿಗಳ ವಿಚಾರದಲ್ಲಿ ಪರಮಾತ್ಮನು ಕೇವಲ ನಿರ್ಗುಣನು. ಈ ಎರಡು ಪರಸ್ಪರ ವಿರೋಧೀ ಪಕ್ಷಗಳಲ್ಲಿ ಒಂದು ಸತ್ಯವಾಗಿರಬೇಕು ಮತ್ತು ಇನ್ನೊಂದು ಅಸತ್ಯವಾಗಿರಬೇಕು. ಎರಡೂ ಸತ್ಯವಾಗಿರಲಿಕ್ಕೆ ಸಾಧ್ಯವಿಲ್ಲ. ಆದುದರಿಂದ, ನಮ್ಮ ಈ ಆರ್ಯ ಬಂಧುಗಳು ಇಂತಹ ವೇದ ವಿರೋಧೀ ಪಕ್ಷವನ್ನು ಸೇರಿಕೊಂಡು ಒಂದು ಹೊಸ ಸಂಪ್ರದಾಯದ ಸ್ಥಾಪನೆಯನ್ನು ಮಾಡಬಾರದೆಂದು ನನ್ನ ನಿವೇದನೆ. ಏಕೆಂದರೆ, ಇದರ ಪರಿಣಾಮ ಬಹಳ ಕೆಟ್ಟದಿದೆ.

ಈ ವಿಷಯದಲ್ಲಿ ಯೋಗದರ್ಶನಕಾರರು, **"ತತ್ರ ನಿರತಿಶಯಂ ಸರ್ವಜ್ಞ ಬೀಜಂ"** (ಯೋಗದರ್ಶನ1-25), ಅರ್ಥಾತ್, ಆ ಪರಮಾತ್ಮನಲ್ಲಿ ಸರ್ವಜ್ಞತೆಯ ಬೀಜವಿದೆ, ಅವನು ಸರ್ವಜ್ಞ ಎಂದು ಹೇಳಿದ್ದಾರೆ. ಇವರು ಇನ್ನೊಂದು ಸೂತ್ರದಲ್ಲಿ **"ಪೂರ್ವೇಷಾಮಪಿ ಗುರುಃ ಕಾಲೇನಾನವಚ್ಛೇದಾತ್"** (ಯೋಗದರ್ಶನ 1-26) ಎಂದೂ ಘೋಷಿಸಿದ್ದಾರೆ. ಇದರ ತಾತ್ಪರ್ಯವೇನೆಂದರೆ, ಪರಮಾತ್ಮನು ಎಲ್ಲಾ ಗುರುಗಳಿಗೂ ಗುರುವಾಗಿದ್ದಾನೆ, ಮತ್ತು ಅವನು ಕಾಲಾತೀತನಾಗಿದ್ದಾನೆ. ಇಲ್ಲಿ ವಿಚಾರಣೀಯ ವಿಷಯವೇನೆಂದರೆ, ಯೋಗದರ್ಶನಕಾರರ ದೃಷ್ಟಿಯಲ್ಲಿ ಪರಮಾತ್ಮನು ಸರ್ವಜ್ಞನು, ಮತ್ತು ಯೋಗಿಗಳು ಸಮಾಧಿಯ ಸ್ಥಿತಿಯಲ್ಲಿ ಪರಮಾತ್ಮನ ಸ್ವರೂಪದಲ್ಲಿ

ಮಗ್ನರಾಗಿ ಕುಳಿತಾಗ ಅವರಿಗೆ ಜ್ಞಾನೋದಯವಾಗುತ್ತದೆ. ಈ ಜ್ಞಾನವೇ ವೇದವಾಗಿದೆ. ಇದನ್ನು ತಿಳಿದುಕೊಳ್ಳದೆ ಮನುಷ್ಯರು ಯೋಗಿಗಳಾಗಲು ಸಾಧ್ಯವಿಲ್ಲ. ಆದುದರಿಂದ, ವೇದಜ್ಞಾನವಿಲ್ಲದ ವ್ಯಕ್ತಿಯೂ ಯೋಗಿಯಾಗಬಲ್ಲನೆಂಬ ಮಾತು ಅಜ್ಞಾನ-ಜನ್ಯ ಮತ್ತು ನಿತಾಂತ ಅಸತ್ಯವಾಗಿದೆ.

**ಪ್ರಶ್ನೆ** :– ಕೆಲವು ಜನರಿಗೆ ಈ ಜನ್ಮದಲ್ಲಿ ವೇದಗಳನ್ನು ಕಲಿಯದಿದ್ದರೂ ಯೋಗವು ಸಿದ್ಧಿಸುವುದನ್ನು ನಾವು ನೋಡುತ್ತಿದ್ದೇವೆ. ಇದಕ್ಕೆ ನೀವೇನು ಹೇಳುವಿರಿ?

**ಉತ್ತರ**:– ಯಾರೇ ಬೇಕಾದರೆ ಇರಲಿ, ಜನರಿಗೆ ಯೋಗದ ಜ್ಞಾನವು ಎಷ್ಟು ಆಗುತ್ತದೆಯೋ, ಅದಕ್ಕೆ ವೇದಾಧ್ಯಾಯನವೇ ಕಾರಣವಾಗಿದೆ. ಅವರು ವೇದಾಧ್ಯಯನವನ್ನು ಈ ಜನ್ಮದಲ್ಲಿಯೂ ಮಾಡಿರಬಹುದು ಅಥವಾ ಹಿಂದಿನ ಜನ್ಮದಲ್ಲಿಯೂ ಮಾಡಿರಬಹುದು.

ಕೆಲವು ಮನುಷ್ಯರು ಅನೇಕ ಜನ್ಮ-ಜನ್ಮಾಂತರಗಳಿಂದ ಪರಮಾತ್ಮನಿಂದ ಅಥವಾ ಗುರುಗಳಿಂದ ವೇದಗಳನ್ನು ಕಲಿತುಕೊಂಡು ಬಂದಿದ್ದಾರೆ. ಆದುದರಿಂದ, ಅವರಿಗೆ ಈ ಜನ್ಮದಲ್ಲಿ, ಅಧ್ಯಯನದಲ್ಲಿ ವಿಶೇಷ ಪರಿಶ್ರಮ ಪಡದೆಯೇ ಯೋಗದ ರಹಸ್ಯವು ಗೊತ್ತಾಗುತ್ತದೆ. ಯಾವ ರೀತಿಯಲ್ಲಿ, ಲೋಕದಲ್ಲಿ ಈಗ ವಿದ್ಯೆ ಕಲಿಯದೆಯೇ ಯಾರೂ ವಿದ್ವಾಂಸರಾಗುವುದಿಲ್ಲವೋ, ಅದೇ ರೀತಿ, ಮಾನವಸೃಷ್ಟಿಯ ಪ್ರಾರಂಭಿಕ ಸ್ಥಿತಿಯಲ್ಲಿ, ಋಷಿಗಳು ಪರಮಾತ್ಮನಿಂದ ವೇದ-ಜ್ಞಾನವನ್ನು ಪಡೆಯದಿರುತ್ತಿದ್ದರೆ, ಯಾರೂ ವಿದ್ವಾಂಸರಾಗಲಿಕ್ಕೆ ಸಾಧ್ಯವಿದ್ದಿಲ್ಲ, ಮತ್ತು ವಿದ್ಯೆ ಕಲಿಯದ ಯಾರೂ ಯೋಗಿಗಳಾಗಲೂ ಸಾಧ್ಯವಿದ್ದಿಲ್ಲ.

**ಪ್ರಶ್ನೆ** :– ಹಾಗಾದರೆ, ಈ ಮಿಥ್ಯಾವಾದದ ಪ್ರಚಾರಕ್ಕೆ ಕಾರಣವೇನು?

**ಉತ್ತರ**:– ಅದಕ್ಕೆ ಮುಖ್ಯವಾಗಿ, ಈ ಕಾರಣಗಳಿವೆ :-

1) ಕೆಲವರು ವೇದ ಶಾಸ್ತ್ರಗಳನ್ನು ಕಲಿಯುವ ಗೋಜಿಗೆ ಹೋಗದೆ, ಅನಾಯಾಸವಾಗಿ ಯೋಗಾಚಾರ್ಯರೆಂದುಕೊಂಡು ಪ್ರಪಂಚದ ಜನರನ್ನು ವಂಚಿಸಿ ತಾವು ಸುಖ-ಸೌಕರ್ಯ ಮತ್ತು ಆಡಂಬರದಲ್ಲಿ ಜೀವನವನ್ನು ನಡೆಸಲು ಬಯಸುತ್ತಾರೆ. ಆದುದರಿಂದ, ಇವರಲ್ಲಿ ಸಹಜವಾಗಿ ವೇದಗಳನ್ನು ಖಂಡಿಸುವ ಪ್ರವೃತ್ತಿಯು ಕಂಡುಬರುತ್ತದೆ. ಒಂದು ವೇಳೆ, ಇವರು ವೇದದ ಖಂಡನೆ ಅಥವಾ ನಿಂದೆ ಮಾಡದಿದ್ದರೆ, ಇವರಿಗೆ ಶಿಷ್ಯರು ಸಿಗುವುದು ಕಷ್ಟವಾಗಿದೆ.

2) ಕೆಲವರಿಗೆ ವೇದವು ಪರಮಾತ್ಮನ ಜ್ಞಾನವೆಂಬ ಮಾತಿನಲ್ಲಿ ವಿಶ್ವಾಸ ಇರುವುದಿಲ್ಲ. (ಏಕೆಂದರೆ, ಅವರ ಬುದ್ಧಿಯು ಈ ಸೂಕ್ಷ್ಮ ರಹಸ್ಯವನ್ನು ಗ್ರಹಿಸಿಕೊಳ್ಳಲು ಅಸಮರ್ಥವಾಗಿದೆ.) ಆದುದರಿಂದ ಇವರು (ಅಹಂಕಾರದಿಂದ ಪ್ರೇರಿತರಾಗಿ) ವೇದನಿಂದನೆಯ ಕಾರ್ಯದಲ್ಲಿ ಪ್ರವೃತ್ತರಾಗುತ್ತಾರೆ.

3) ಇನ್ನು ಕೆಲವರು ತಮ್ಮ ಆಲಸ್ಯದಿಂದಾಗಿ ವೇದಶಾಸ್ತ್ರಗಳನ್ನು ಕಲಿಯಲು ಇಷ್ಟಪಡುವುದಿಲ್ಲ. ತಮ್ಮ ಈ ದೋಷವನ್ನು ಮರೆಮಾಡಲಿಕ್ಕಾಗಿ, ಇವರು ವೇದಗಳನ್ನು ತೆಗಳುತ್ತಾರೆ, ಮತ್ತು ವೇದ ಕಲಿಯುವವರನ್ನು ನಿರುತ್ಸಾಹ ಗೊಳಿಸುತ್ತಾರೆ.

ಈ ರೀತಿ ಇಂತಹ ಅನೇಕ ಕಾರಣಗಳಿಂದ ಕೆಲವರು ವೇದ ವಿರೋಧೀ ವಿಚಾರಗಳನ್ನು ಪ್ರಚಾರ ಮಾಡುತ್ತಿದ್ದಾರೆ. ಇಲ್ಲಿ, ಕೊನೆಗೆ ಒಂದು ಮಾತನ್ನು ನಾನು ಹೇಳಬೇಕೆಂದು ಬಯಸುತ್ತೇನೆ. ಅದೇನೆಂದರೆ, ಜನರ ತಮ್ಮ ಬುದ್ಧಿಯಲ್ಲಿ ಎಷ್ಟರತನಕ ಸತ್ಯಾಸತ್ಯದ ನಿರ್ಣಯ ಮಾಡುವ ಸಾಮರ್ಥ್ಯವು ಬರುವುದಿಲ್ಲವೋ ಅಷ್ಟರ ತನಕ ಅವರು ವೇದ ಮತ್ತು ಆಪ್ತಪುರುಷರ ಮಾತುಗಳನ್ನು ಕೇಳಿ ಅದಕ್ಕನುಸಾರವಾಗಿ ನಡೆದರೆ ಎಲ್ಲರಿಗೂ ಕ್ಷೇಮ. ವೇದಾಧ್ಯಯನ ಮಾಡದೆ, ಯೋಗಿಯಾಗಬಹುದು ಎಂಬ ವಿಚಾರವು ನಿರಾಧಾರವಾಗಿದೆ. ಆದುದರಿಂದ ಅದು ತ್ಯಾಜ್ಯವಾಗಿದೆ.

## 3. ಪೂರ್ಣ ರೂಪೇಣ ಅಹಿಂಸೆಯು ಸಿದ್ಧಿಯಾದ ಯೋಗಿ ಮತ್ತು ಪ್ರಾಣಿಗಳ ವೈರಭಾವ

ಯೋಗ ವಿದ್ಯಾ ಕ್ಷೇತ್ರದಲ್ಲಿ ಹರಡಿರುವ ಮೂರನೆಯ ಭ್ರಾಂತಿ ಏನೆಂದರೆ, ಒಬ್ಬ ಯೋಗಿಯು ಪೂರ್ಣ ರೂಪೇಣ ಅಹಿಂಸೆಯ ಪಾಲನೆ ಮಾಡಿದಾಗ, ಪ್ರಪಂಚದ ಪ್ರಾಣಿಗಳೆಲ್ಲಾ ಇವನ ಮೇಲೆ ಶತೃತ್ವದ ಭಾವನೆಯನ್ನು ಬಿಟ್ಟು ಬಿಡುತ್ತವೆ, ಎಂಬ ಮಾತು. ಈಗ ಈ ಮಾತನ್ನು ಸ್ವಲ್ಪ ಪರಿಶೀಲಿಸುವ. ಯೋಗದರ್ಶನ (2-30)ದಲ್ಲಿ **"ಅಹಿಂಸಾಸತ್ಯಾಸ್ತೇಯಾ ಬ್ರಹ್ಮಚರ್ಯಾಪರಿಗ್ರಹಾ ಯಮಾಃ"**, ಅರ್ಥಾತ್, ಅಹಿಂಸೆ ಇತ್ಯಾದಿಗಳು '**ಯಮ**'ಗಳಾಗಿವೆ, ಎಂದು ಹೇಳಿದೆ. ಈ ಸೂತ್ರದ ವ್ಯಾಸಭಾಷ್ಯೆಯಲ್ಲಿ **"ಅಹಿಂಸಾ"** ಶಬ್ದದ ಸ್ವರೂಪವನ್ನು ಈ ರೀತಿ ವರ್ಣಿಸಿದ್ದಾರೆ :

**"ತತ್ರಾಹಿಂಸಾ ಸರ್ವಥಾ ಸರ್ವದಾ ಸರ್ವಭೂತಾನಾಮನಭಿದ್ರೋಹಃ ।"**

ಎಂದರೆ, ಸರ್ವ ಪ್ರಾಣಿಗಳ ಮೇಲೆ ಸದಾಕಾಲವೂ ಸರ್ವಥಾ ದ್ರೋಹದ ಭಾವನೆಯನ್ನು ಬಿಟ್ಟುಬಿಡುವುದಕ್ಕೆ ಅಹಿಂಸೆ ಎಂದು ಹೇಳುತ್ತಾರೆ. ಯೋಗದರ್ಶನದ ರಚನೆಮಾಡಿರುವ ಮಹರ್ಷಿ ಪತಂಜಲಿ ಅಹಿಂಸೆಯ ಫಲವನ್ನು ಸೂತ್ರಭಾಷೆಯಲ್ಲಿ ಹೀಗೆಂದು ಹೇಳಿದ್ದಾರೆ : "**ಅಹಿಂಸಾ ಪ್ರತಿಷ್ಠಾಯಾಂ ತತ್ಸನ್ನಿಧೌ ವೈರತ್ಯಾಗಃ**" (ಯೋಗದರ್ಶನ 2-35). ಈ ಸೂತ್ರದ ಅರ್ಥವು ಮಹರ್ಷಿ ದಯಾನಂದರ ಮಾತುಗಳಲ್ಲಿ ಹೇಳುವುದಾದರೆ ಹೀಗಿದೆ : "ಉಪಾಸಕನಲ್ಲಿ ಅಹಿಂಸಾಧರ್ಮವು ಸ್ಥಿರವಾದಾಗ, ಅವನ ಮನಸ್ಸಿನಿಂದ ವೈರಭಾವನೆಯು ದೂರವಾಗುತ್ತದೆ, ಮತ್ತು ಅವನ ಸಂಪರ್ಕದಿಂದ ಅನ್ಯ ವ್ಯಕ್ತಿಗಳ ವೈರ ಭಾವನೆಯೂ ದೂರವಾಗುತ್ತದೆ". ಆದರೆ, ಈ ರೀತಿಯ ಪರಿವರ್ತನೆಯು ಎಲ್ಲರಲ್ಲಿಯೂ ಸಮಾನರೂಪದಲ್ಲಿ ಸಂಭವಿಸುವುದಿಲ್ಲ. ಕೆಲವರಲ್ಲಿ 50%, ಇನ್ನು ಕೆಲವರಲ್ಲಿ 20%, ಮತ್ತೆ ಕೆಲವರಲ್ಲಿ 10% ವೈರ ಭಾವವು ಕಡಿಮೆಯಾಗಬಹುದು. ಇದು ಯೋಗಿಯ ಸಂಪರ್ಕಕ್ಕೆ ಬರುವ ಜನರ ತಮ್ಮ ಸ್ಥಿತಿಯನ್ನು ಹೊಂದುಕೊಂಡಿದೆ. ಈ ಸ್ಥಿತಿಯು ಅವರ ಪೂರ್ವ ಜನ್ಮ ಮತ್ತು ಈ ಜನ್ಮದ ಸಂಸ್ಕಾರವನ್ನು ಹೊಂದುಕೊಂಡಿದೆ. ಹೀಗೆ, 1% ಅಂಶ ವೈರಭಾವವು ದೂರವಾಗದವರೂ ನಮಗೆ ಸಿಗಬಹುದು. ಕೆಲವರಂತೂ ಅಹಿಂಸಾ ವ್ರತದ ಪಾಲನೆಯನ್ನು ಮಾಡುವವರ ಪ್ರಾಣವನ್ನೂ ತೆಗೆಯಲು ಸಿದ್ಧರಿರುತ್ತಾರೆ. ಇದಕ್ಕೆ ಇತಿಹಾಸದಲ್ಲಿ ನಮಗೆ ಅನೇಕ ಉದಾಹರಣೆಗಳು ಸಿಗುತ್ತವೆ. ಆದುದರಿಂದ ಯೋಗಿಯನ್ನು ಕಂಡು ಪ್ರಪಂಚದ ಪ್ರಾಣಿಗಳೆಲ್ಲಾ ವೈರಭಾವವನ್ನು ಬಿಟ್ಟು, ಮಿತ್ರ ಭಾವದಿಂದ ವರ್ತಿಸುತ್ತವೆ ಎಂಬ ಮಾತು ಸತ್ಯವಲ್ಲ. ಸಹಜ ಸ್ವಭಾವವಾಗಿ ಬಂದಿರುವ ವೈರಭಾವವನ್ನು ಯಾವ ಪ್ರಾಣಿಗಳೂ ಬಿಟ್ಟುಬಿಡುವುದಿಲ್ಲ. ಹಿಂದೆ ಎಂದೂ ಇದು ಹಾಗೆ ಆಗಿಲ್ಲ. ಈಗಲೂ ಆಗುವುದಿಲ್ಲ, ಇನ್ನು ಮುಂದೆಯೂ ಹಾಗೆ ಆಗುವ ಹಾಗಿಲ್ಲ.

ಇಲ್ಲಿ ಒಬ್ಬ ವ್ಯಕ್ತಿ ಬಹು ದೊಡ್ಡ ಯೋಗಿ ಎಂದು ಹೆಸರುವಾಸಿಯಾಗಿದ್ದಾರೆ. ಕೆಲವು ಮಂದಿ ವೈದಿಕಧರ್ಮಿಗಳೂ ಅವರನ್ನು ಒಬ್ಬ ಯೋಗಿ ಎಂದು ಒಪ್ಪಿಕೊಂಡಿದ್ದಾರೆ. ಈ ಯೋಗಿ ಮಹಾರಾಜರು ಜೀವಾತ್ಮಕ್ಕೆ ಸ್ವತಂತ್ರ ಅಸ್ತಿತ್ವ ಇದೆ ಎಂಬುದನ್ನು ಸ್ವೀಕರಿಸಲು ಸಿದ್ಧರಿಲ್ಲ. ಇವರು ತಮ್ಮ ಒಂದು ಪುಸ್ತಕದಲ್ಲಿ, ಮಹಾತ್ಮಾ ಗಾಂಧಿಯವರನ್ನು ಗುಂಡಿಟ್ಟು ಕೊಲ್ಲಲು ಕಾರಣವೇನೆಂದರೆ, ಅವರು ಪೂರ್ಣರೂಪೇಣ ಅಹಿಂಸಾವ್ರತದ ಪಾಲನೆಯನ್ನು ಮಾಡುತ್ತಿರಲಿಲ್ಲ, ಎಂದು ಹೇಳಿದ್ದಾರೆ. ಒಂದು ವೇಳೆ ಗಾಂಧೀಜೀ ಪೂರ್ಣವಾಗಿ ಅಹಿಂಸೆಯ ವ್ರತವನ್ನು

ಪಾಲಿಸುತ್ತಿದ್ದರೆ, ಗುಂಡು ಹೊಡೆಯುವವನ ಕೈಯಿಂದ ಕೋವಿಯು ಜಾರಿ ಕೆಳಗೆ ಬಿದ್ದು ಹೋಗುತ್ತಿತ್ತು, ಎಂದು ಈ ಯೋಗಿಯು ವಾದಿಸಿದ್ದಾರೆ. ಇಲ್ಲಿ ನಾನು ಮಹಾತ್ಮಾಗಾಂಧಿಯವರು ಪೂರ್ಣವಾಗಿ ಅಹಿಂಸೆಯ ಪಾಲನೆ ಮಾಡುತ್ತಿದ್ದ ವ್ಯಕ್ತಿಯೆಂದು ಹೇಳ ಹೊರಟಿಲ್ಲ. ಇಲ್ಲಿ ಈ ವಿಷಯದ ಮೇಲೆ ಚರ್ಚೆಯೂ ಅನಾವಶ್ಯಕವಾಗಿದೆ. ಆದರೂ, ನಾನು ಇಷ್ಟು ಮಾತ್ರ ಹೇಳಬೇಕೆಂದು ಬಯಸುತ್ತೇನೆ: ಪೂರ್ಣ ಅಹಿಂಸೆಯ ಪಾಲನೆಯನ್ನು ಮಾಡುವವನನ್ನು ಹೊಡೆಯಲಿಕ್ಕೆ ಹೋದವನ ಕೈಯಿಂದ ಕೋವಿಯು ಜಾರಿ ಬೀಳುತ್ತದೆ ಎಂಬ ಮಾತು, ಇದನ್ನು ಹೇಳುವವರ ಅಜ್ಞಾನವನ್ನು ತೋರಿಸುತ್ತದೆ. ಮಹರ್ಷಿ ದಯಾನಂದರನ್ನು ಲೋಕದಲ್ಲಿ ತುಂಬಾ ಮಂದಿ, ಒಬ್ಬ ಯೋಗಿ ಎಂದು ಒಪ್ಪಿಕೊಂಡಿದ್ದಾರೆ. ನಾನು ಕೂಡ ಇದನ್ನು ನಂಬುತ್ತೇನೆ. ಆದರೆ, ಮಹರ್ಷಿಗೆ ಯೋಗದ ಉನ್ನತ ಸ್ಥಿತಿಯು ಸಿದ್ಧವಾದನಂತರ, ಅನೇಕ ಜನರು ಅವರನ್ನು ಮುಗಿಸಿಬಿಡಬೇಕೆಂದು ಮನಸಾ, ವಾಚಾ ಮತ್ತು ಕರ್ಮಣಾ ಪ್ರಯತ್ನಿಸಿದ್ದರು, ಮತ್ತು ಅನೇಕರು ಅವರೊಡನೆ ಶತ್ರುತಾ ಪೂರ್ವಕವಾಗಿ ವ್ಯವಹರಿಸಿದ್ದರು. ಒಂದು ದಿನ ಈ ದುಷ್ಟ ಜನರೆಲ್ಲಾ ಒಟ್ಟು ಸೇರಿ ಅವರ ಇಹಲೋಕದ ಲೀಲೆಯನ್ನು ಮುಗಿಸಿಯೇ ಬಿಟ್ಟರು. ಇಲ್ಲಿ ಉತ್ಪನ್ನವಾಗುವ ಪ್ರಶ್ನೆ ಏನೆಂದರೆ, ಮಹರ್ಷಿ ದಯಾನಂದರಿಗೆ ಅಹಿಂಸೆಯು ಸಿದ್ಧಿಸಿತ್ತೋ ಇಲ್ಲವೋ, ಎಂದು. ದಯಾನಂದರು ಯೋಗದ ಈ ಪ್ರಥಮ ಮೆಟ್ಟಲನ್ನು ಹತ್ತಿರಲಿಲ್ಲವೇ? ದಯಾನಂದರು ವೈರಭಾವವನ್ನು ಬಿಡಲಿಕ್ಕೆ ಅಸಮರ್ಥರಾಗಿದ್ದರೇ? ಒಂದು ವೇಳೆ, ದಯಾನಂದರು ಯೋಗದ ಪ್ರಾರಂಭಿಕ ಕ್ರಿಯೆ-ವೈರತ್ಯಾಗ ಇದನ್ನು ಮಾಡದೆ, ಈಶ್ವರೋಪಾಸನೆಯನ್ನೂ ಪ್ರಾರಂಭಿಸದೆ ಇದ್ದ ವ್ಯಕ್ತಿ ಎಂಬುದು ನಿಜವಾಗಿದ್ದರೆ, ಇಷ್ಟೆಲ್ಲಾ ವಿದ್ವಾಂಸರು ಇವರನ್ನು ಯೋಗಿಗಳೆಂದು ನಂಬುತ್ತಾ ಬಂದಿದ್ದಾರೆ, ಇದು ನಿಜವಲ್ಲವೆಂದಾಗುವುದಿಲ್ಲವೇ?

ಭಗವಾನ್ ಶ್ರೀ ಕೃಷ್ಣನನ್ನೂ ಅನೇಕ ಜನರು ಒಬ್ಬ ಪೂರ್ಣಯೋಗಿ ಎಂದು ಹೇಳುತ್ತಾರೆ. ಹಾಗಾದರೆ, ದುರ್ಯೋಧನನಲ್ಲಿದ್ದ ವೈರ-ಭಾವವು ದೂರವಾಗ ಬೇಕಿತ್ತಲ್ಲಾ? ಯಾದವರು ಪರಸ್ಪರ ಹೊಡೆದಾಟಮಾಡಿಕೊಂಡು ಸಂಪೂರ್ಣ ಯದುವಂಶವೇ ನಾಶವಾಗಿ ಹೋಯಿತು. ಶ್ರೀ ಕೃಷ್ಣನ ಅಹಿಂಸಾಧರ್ಮದಿಂದ ಇವರೆಲ್ಲರೂ ಪ್ರಭಾವಿತರಾಗಿ ವೈರಭಾವವನ್ನು ಬಿಟ್ಟು ಬಿಡಬೇಕಾಗಿತ್ತಲ್ಲ? ಭಗವಾನ್ ವೇದ ವ್ಯಾಸರನ್ನೂ ಜನರು ಯೋಗಿಯೆಂದು ಹೇಳುತ್ತಾರೆ. ಇವರ ಸಂಪರ್ಕದಿಂದ ಕೌರವ-ಪಾಂಡವರ ಶತ್ರುತ್ವವು ದೂರವಾಗಲಿಲ್ಲ. ಪಂಚತಂತ್ರದಲ್ಲಿ ವಿಷ್ಣುಶರ್ಮಾ

ಒಂದು ಶ್ಲೋಕವನ್ನು ಕೊಟ್ಟಿರುತ್ತಾನೆ. ಅದು ಹೀಗಿದೆ:

ಸಿಂಹೋ ವ್ಯಾಕರಣಸ್ಯ ಕರ್ತುರಹರತ್ ಪ್ರಾಣಾನ್ ಪ್ರಿಯಾನ್ ಪಾಣಿನೇಃ ।
ಮೀಮಾಂಸಾಕೃತಮುನ್ಮಮಾಥ ಸಹಸಾ ಹಸ್ತೀಮುನಿಂ ಜೈಮಿನಿಂ ॥
ಛಂದೋಜ್ಞಾನನಿಧಿಂ ಜಘಾನ ಮಕರೋವೇಲಾತಟೇ ಪಿಂಗಲಂ ।
ಅಜ್ಞಾನ ವೃತಚೇತ ಸಾಮತಿರುಷಾಂ ಕೋಽರ್ಥಸ್ತಿರ ಶ್ಚಾಂ ಗುಣೈಃ ॥

ಈ ಶ್ಲೋಕದ ಅಭಿಪ್ರಾಯವು ಹೀಗಿದೆ : ಪಾಣಿನಿಯನ್ನು ಸಿಂಹವು ಕೊಂದು ಬಿಟ್ಟಿತು, ಜೈಮಿನಿಯ ಪ್ರಾಣವನ್ನು ಆನೆಯೊಂದು ತೆಗೆದುಬಿಟ್ಟಿತು, ಪಿಂಗಳಾಚಾರ್ಯರು ಮೊಸಳೆಯ ಬಾಯಿಗೆ ಸಿಕ್ಕಿ ಮೃತ್ಯುವಶರಾದರು. ಏನು, ಇವರ ವೈರಭಾವವು ದೂರವಾಗಿರಲಿಲ್ಲವೇ? ಇವರೆಲ್ಲಾ ದೊಡ್ಡ ದೊಡ್ಡ ಯೋಗಿಗಳಾಗಿದ್ದರೆಂದು ಮೂರ್ಧನ್ಯ ವಿದ್ವಾಂಸರು ಹೇಳುವುದನ್ನು ಕೇಳಿದ್ದೇವೆ. ಆದುದರಿಂದ, ನಿಜವಾದ ಯೋಗಿಯ ಮುಂದೆ ಎಲ್ಲಾ ಪ್ರಾಣಿಗಳೂ ತಮ್ಮ ವೈರಭಾವವನ್ನು ಬಿಟ್ಟು ಬಿಡುತ್ತವೆ ಎಂಬ ಮಾತು ಸತ್ಯವಾಗಿದ್ದರೆ, ಮೇಲೆ ಹೇಳಿದ ಮಹಾಪುರುಷರಲ್ಲಿ ಒಬ್ಬನೂ ಯೋಗಿಯಾಗಿರಲಿಲ್ಲ ಎಂದು ಸಿದ್ಧವಾಗುತ್ತದೆ.

ವೇದಗಳು ಪರಮಾತ್ಮನನ್ನು ಅಹಿಂಸಕನೆಂದು ಹೇಳುತ್ತವೆ. ಯಥಾ **"ಯುಂಜಂತಿ ಬ್ರಧ್ನಮರುಷಂ"** (ಋಗ್ವೇದ 1-6-1), ಅರುಷಂ = ಅಹಿಂಸಕಂ, ಕರುಣಾಮಯಂ, ಹಿಂಸಾದಿ ದೋಷರಹಿತಂ" (ರುಷ ಹಿಂಸಾಯಾಂ). ಪರಮಾತ್ಮನಲ್ಲಿ ಭೂತ, ವರ್ತಮಾನ ಮತ್ತು ಭವಿಷ್ಯತ್ ಈ ಮೂರೂ ಕಾಲಗಳಲ್ಲಿ, ವೈರ ಭಾವವು ಬರಲಿಕ್ಕೆ ಸಾಧ್ಯವಿಲ್ಲ. ಆದರೂ ಕೂಡ, ಪ್ರಪಂಚದಲ್ಲಿ ಜನರು ಅವನ ಮೇಲಿನ ವೈರಭಾವವನ್ನು ಇಷ್ಟರ ತನಕ ಬಿಡಲಿಲ್ಲ, ಇನ್ನೂ ಬಿಡುವ ಹಾಗೆ ಇಲ್ಲ. ಎಷ್ಟೋ ಮಂದಿ ಈಗ ಪ್ರಪಂಚದಲ್ಲಿ ಅವನ ಹೆಸರೆತ್ತಿದರೆ ರೇಗುತ್ತಾರೆ, ಎಷ್ಟೋ ಮಂದಿ ಅವನು ಇದ್ದಾನೆ ಎಂಬುದನ್ನೂ ಒಪ್ಪುವುದಿಲ್ಲ. ಇಷ್ಟೇ ಅಲ್ಲ, ದೇವರ ಹೆಸರನ್ನು ಎತ್ತಿದರೆ ಮೃತ್ಯುದಂಡನೆ ಕೊಡುವವರೂ ಈ ಲೋಕದಲ್ಲಿ ಇದ್ದಾರೆ. ಇನ್ನು ಕೆಲವರು ತಮ್ಮ ಪುತ್ರನ ಮೃತ್ಯುವಿಗೆ ಪರಮಾತ್ಮನನ್ನು ದೂರುತ್ತಾರೆ, ಮತ್ತೂ ಕೆಲವರು ತಮ್ಮ ಬೆಳೆ ಹಾಳಾಯಿತೆಂದು ದೇವರಿಗೆ ಬೈಯುತ್ತಾರೆ. ಪುನಃ ಕೆಲವರು ತಮ್ಮ ಮನೆ ಹಾಳಾದುದಕ್ಕೆ ದೇವರೇ ಕಾರಣ ಎನ್ನುತ್ತಾರೆ. ಇವರಿಗೆಲ್ಲಾ ದೇವರ ಮೇಲೆ ಇಷ್ಟು ಸಿಟ್ಟು ಇರುವಂತೆ ಕಾಣುತ್ತದೆ ಎಂದರೆ, ಒಂದು ವೇಳೆ ದೇವರು ಇವರೆದುರಿಗೆ ಸಿಕ್ಕಿದರೆ, ಅವನ ಕುತ್ತಿಗೆ ಹಿಡಿಯುವವರೋ ಏನೋ ಎಂದು ತೋರುತ್ತದೆ.

ಪರಮಾತ್ಮನು ಸ್ವಯಂ ವೈರತ್ವರಹಿತನಾಗಿದ್ದಾನೆ. ವೇದಗಳಲ್ಲಿ, ಎಲ್ಲಾ ಪ್ರಾಣಿಗಳು ಪರಸ್ಪರ ಮಿತ್ರತ್ವದ ದೃಷ್ಟಿಯಿಂದ ನೋಡಿ ಕೊಂಡಿರಬೇಕೆಂದು ಉಪದೇಶ ನೀಡುತ್ತವೆ. (**ದೃತೇ ದೃಂಹ.......... ಮಿತ್ರಸ್ಯ ಚಕ್ಷುಷಾ............ ಸಮೀಕ್ಷಾಮಹೇ॥**ಯಜುರ್ವೇದ 36-1811). ಸಹೋದರ ಸಹೋದರಿಯರು ಪರಸ್ಪರ ದ್ವೇಷ ಮಾಡಿಕೊಂಡಿರಬಾರದೆಂದು, ಇನ್ನೊಂದು ಮಂತ್ರವು ಹೇಳುತ್ತದೆ : (**ಮಾ ಭ್ರಾತಾ ಭ್ರಾತರಂ ದ್ವಿಕ್ಷನ್ಮಾ ಸ್ವಸಾರಮುತಸ್ವಾಸಾ ॥** ಅಥರ್ವ ವೇದ 3-6-3011) ಇಷ್ಟೆಲ್ಲಾ ಇದ್ದರೂ ಕೂಡ, ಜನರು ದೇವರ ಮೇಲೆಯಾಗಲೀ ಅಥವಾ ತಮ್ಮ ಬಂಧು ಬಳಗದೊಳಗಾಗಲೀ ದ್ವೇಷಭಾವವನ್ನು ಬಿಟ್ಟಿಲ್ಲ. ದೇವರು ಮೂರು ಕಾಲದಲ್ಲಿಯೂ ವೈರಭಾವರಹಿತನಾಗಿದ್ದರೂ ಕೂಡ, ಅವನ ಮೇಲೆ ವೈರವನ್ನು ಬಿಡದ ಜನರು, ಯೋಗಿಗಳನ್ನು ಹೇಗೆ ಬಿಟ್ಟಾರು? ಯೋಗಿಗಳು, ಯೋಗಿಯ ಸ್ಥಿತಿಯನ್ನು ಹೊಂದುವ ಮೊದಲು ಅಯೋಗಿಗಳಾಗಿರುತ್ತಾರೆ. ಅವರು ಅಯೋಗಿಗಳಾಗಿದ್ದಾಗ ಹಿಂಸಕರಾಗಿಯೂ ಇದ್ದಿರಬಹುದು. ಆದರೆ, ಪರಮಾತ್ಮನು ಹಾಗಲ್ಲ. ಅವನು ಸರ್ವಥಾ, ಸರ್ವದಾ, ಪೂರ್ಣರೂಪೇಣ ಅಹಿಂಸಕ, ಎಂದರೆ ಕರುಣಾಮಯನಾಗಿಯೇ ಇರುತ್ತಾನೆ. ಆದರೂ ಕೂಡ ಕೆಲವು ಜನರು ಅವನ ಮೇಲೆ ಹಗೆತನವನ್ನು ಇಟ್ಟುಕೊಂಡಿರುತ್ತಾರೆಂದ ಮೇಲೆ, ಸಾಮಾನ್ಯ ಯೋಗಿಗಳ ಮಾತೇನು?

ಅನೇಕ ಪ್ರಮಾಣಗಳು ನಮ್ಮ ಮುಂದಿವೆ. ಇವೆಲ್ಲಾ ಪೂರ್ಣ ಅಹಿಂಸಾ ಧರ್ಮದ ಪಾಲನೆ ಮಾಡುವ ಯೋಗಿಗಳ ಮುಂದೆ ಪ್ರಾಣಿಗಳೆಲ್ಲಾ ತಮ್ಮ ವೈರಭಾವನೆಯನ್ನು ಬಿಟ್ಟು ಕೊಡುತ್ತವೆ ಎಂಬ ನಿಯಮವೇನೂ ಇಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತವೆ. ಆದುದರಿಂದ, ಈ ಮಿಥ್ಯಾ ವಿಚಾರವನ್ನು ಜನರು ಬಿಟ್ಟುಬಿಡಬೇಕು.

## 4. ತರ್ಕ ಮತ್ತು ಯೋಗ

ಯೋಗಕ್ಕೆ ಸಂಬಂಧಪಟ್ಟ ಇನ್ನೊಂದು ಭ್ರಾಂತಿಯಿದೆ. ಇದಕ್ಕನುಸಾರವಾಗಿ, ತರ್ಕವು ಯೋಗಕ್ಕೆ ಬಾಧಕವಾಗಿದೆ. ಈ ದಿನಗಳಲ್ಲಿ ನಮಗೆ ತುಂಬಾ ಮಂದಿ ತಥಾಕಥಿತ ಯೋಗಾಚಾರ್ಯರು ಮತ್ತು ಅವರ ಶಿಷ್ಯರು ಸಿಗುತ್ತಾರೆ ; ಇವರೆಲ್ಲಾ, ಯೋಗದ ಜಿಜ್ಞಾಸುಗಳು ಎಂದೂ ಕೂಡ ತರ್ಕ ಮಾಡಬಾರದು ಎಂಬ ಮಾತನ್ನು ಪ್ರಚಾರ ಮಾಡುತ್ತಾರೆ. ಇವರು ಹೇಳುವ ಪ್ರಕಾರ, ತರ್ಕ ಮಾಡುವವನು ಎಂದಿಗೂ ಯೋಗಿಯಾಗಲಾರನು. ಇಲ್ಲಿ ಈಗ ಈ ಮಾತು ಎಷ್ಟು ಸತ್ಯ ಮತ್ತು ಎಷ್ಟು ಸುಳ್ಳು ಎಂಬುದನ್ನು ತೋರಿಸಲಾಗುತ್ತದೆ.

ನ್ಯಾಯದರ್ಶನದ ರಚಯಿತರಾದ ಗೌತಮ ಋಷಿಗಳು ಹದಿನಾರು ಪದಾರ್ಥಗಳ ತತ್ತ್ವಜ್ಞಾನದಿಂದ ಮೋಕ್ಷದ ಸಿದ್ಧಿಯಾಗುತ್ತದೆಂದು ಹೇಳಿದ್ದಾರೆ. (**ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನಂ** [ನ್ಯಾಯದರ್ಶನ 1-1-1]) ಈ ಹದಿನಾರು ತತ್ತ್ವಗಳಲ್ಲಿ ತರ್ಕವೂ ಒಂದಾಗಿದೆ. ಜನರಿಗೆ ತರ್ಕದ ವಾಸ್ತವಿಕ ಸ್ವರೂಪದ ಜ್ಞಾನವು ಇಲ್ಲದಿದ್ದರೆ ಮತ್ತು ಜನರು ಅದರ ಉಪಯೋಗವನ್ನು ಮಾಡದಿದ್ದರೆ, ಯಾರಿಗೂ ಮೋಕ್ಷವು ಸಿಗುವುದು ಅಸಂಭವ ಎಂದು ಗೌತಮಋಷಿಗಳು ಅಭಿಪ್ರಾಯಪಟ್ಟಿದ್ದಾರೆ. ಈ ರೀತಿ ಈಶ್ವರೋಪಾಸನೆಯ ಎಂಟು ಅಂಗಗಳ ಅನುಷ್ಠಾನದಿಂದಲೂ ಮುಕ್ತಿಯು ದೊರೆಯುತ್ತದೆ, ಮತ್ತು ಹದಿನಾರು ಪದಾರ್ಥಗಳ ತತ್ತ್ವಜ್ಞಾನದಿಂದಲೂ ಮುಕ್ತಿಯು ಲಭಿಸುತ್ತದೆ, ಎಂದು ಋಷಿಗಳು ಹೇಳಿರುವಾಗ, ತರ್ಕವು ಯೋಗಕ್ಕೆ ಬಾಧಕ ಎಂಬ ಮಾತು ತೀರಾ ಸುಳ್ಳು.

ನ್ಯಾಯದರ್ಶನದ ಭಾಷ್ಯಕಾರರಾದ ವಾತ್ಸ್ಯಾಯನರು, **ಪ್ರಮಾಣ ಪ್ರಮೇಯಂ** (ನ್ಯಾಯದರ್ಶನ 1-1-1) ಈ ಸೂತ್ರದಲ್ಲಿ ದ್ವಂದ್ವ ಸಮಾಸದ ಪ್ರಯೋಗ ಇದೆ ಎಂದು ಹೇಳಿದ್ದಾರೆ. ದ್ವಂದ್ವ ಸಮಾಸದ ವಿಶೇಷತೆ ಏನೆಂದರೆ, ಇದರಲ್ಲಿ ಇರುವ ಪ್ರತಿಯೊಂದು ಶಬ್ದವೂ ಪ್ರಧಾನವಾಗಿದೆ. ಈ ರೀತಿ ಪ್ರಧಾನವಾಗಿರುವುದರಿಂದ ಇದು ಯೋಗಕ್ಕೆ ಸಹಾಯಕವಾಗಿದೆಯೇ ಹೊರತು ಬಾಧಕವಾಗಿಲ್ಲ.

ಗೌತಮ ಋಷಿಗಳು ತರ್ಕದ ಪರಿಭಾಷೆಯನ್ನು ಈ ರೀತಿ ಕೊಟ್ಟಿದ್ದಾರೆ: **"ಅವಿಜ್ಞಾತ ತತ್ತ್ವೇಽರ್ಥೇ ಕಾರಣೋಪಪತ್ತಿತಸ್ತತ್ತ್ವಜ್ಞಾನಾರ್ಥಮೂಹಸ್ತರ್ಕಃ ॥"** (ನ್ಯಾಯದರ್ಶನ 1-1-40) ಎಂದರೆ, ನಮಗೆ ಯಾವ ವಸ್ತುವಿನ ವಾಸ್ತವಿಕ ಸ್ವರೂಪದ ಜ್ಞಾನವು ಇಲ್ಲವೋ, ಆ ವಸ್ತುವಿನ ಯಥಾರ್ಥ ಸ್ವರೂಪದ ಜ್ಞಾನವನ್ನು ಗಳಿಸುವುದಕ್ಕಾಗಿ, ಪ್ರಮಾಣಗಳ ಸಂಯೋಜನೆಯಿಂದ ವಿಚಾರಮಾಡುವುದಕ್ಕೆ ತರ್ಕ ಎಂದು ಹೇಳುತ್ತಾರೆ. ಪ್ರತಿಯೊಬ್ಬ ಯೋಗಾಭ್ಯಾಸಿಗೂ ವಸ್ತುಗಳ ಯಥಾರ್ಥ ತತ್ತ್ವಜ್ಞಾನಕ್ಕಾಗಿ ಪದೇ ಪದೇ ತರ್ಕದ ಆಶ್ರಯವನ್ನು ಹೊಂದಲೇಬೇಕಾಗುತ್ತದೆ. ಯೋಗದರ್ಶನದ ಮೂರನೇ ಪಾದದಲ್ಲಿ **"ಏತೇನ ಭೂತೇಂದ್ರಿಯೇಷು ಧರ್ಮ ಲಕ್ಷಣಾವಸ್ಥಾ ಪರಿಣಾಮಾ ವ್ಯಾಖ್ಯಾತಾ"**, ಎಂದು ಹೇಳಿದ್ದಾರೆ. ಇಲ್ಲಿ ಹೇಳಿರುವ ಧರ್ಮ, ಲಕ್ಷಣ, ಅವಸ್ಥಾ ಮತ್ತು ಪರಿಣಾಮಗಳ ಅರ್ಥವನ್ನು ತರ್ಕದ ಜ್ಞಾನವಿಲ್ಲದೆ ತಿಳಿಯಲು ಸಾಧ್ಯವಿಲ್ಲ. ಸಾಂಖ್ಯದರ್ಶನದಲ್ಲಿ ಪುರುಷ ಮತ್ತು ಪ್ರಕೃತಿಯ ಸ್ವರೂಪದ ವಿಸ್ತಾರ ಪೂರ್ವಕವಾಗಿ ವರ್ಣನೆ ಇದೆ. ಇಲ್ಲಿ ಪುರುಷನು ಪ್ರಕೃತಿಯಿಂದ ಭಿನ್ನ ಯಾಕೆ ಎಂಬುದನ್ನು ವಿವರಿಸಿ ಹೇಳಲಾಗಿದೆ. ವಿಜ್ಞಾನವಾದ, ಕ್ಷಣಿಕವಾದ, ಶೂನ್ಯವಾದ

ಮೊದಲಾದ ಅನೇಕ ಮಿಥ್ಯಾವಾದಗಳನ್ನು ಇಲ್ಲಿ ತರ್ಕದ ಆಧಾರದ ಮೇಲೆ ಖಂಡಿಸಲಾಗಿದೆ. ಒಂದು ವೇಳೆ ಸಾಂಖ್ಯದರ್ಶನದ ರಚಯಿತರಾದ ಕಪಿಲಮುನಿಗಳು ತರ್ಕವನ್ನು ಉಪಯೋಗಕ್ಕೆ ತರದೆ ಇರುತ್ತಿದ್ದರೆ, ಪ್ರಕೃತಿ ಮತ್ತು ಪುರುಷರ ಸ್ವರೂಪದ ಪರಿಜ್ಞಾನವು ಅವರಿಗೆ ಆಗುವುದು ಮತ್ತು ಅದನ್ನು ಅವರು ಇತರರಿಗೆ ತಿಳಿಸುವುದು, ಇವೆರಡೂ ಸಂಭವವಾಗುತ್ತಿರಲಿಲ್ಲ. ಈ ಪರಿಜ್ಞಾನವಿಲ್ಲದೆ, ಯೋಗದ ಸಿದ್ಧಿಯೂ ಸಂಭವವಿರಲಿಲ್ಲ. ಕಪಿಲ ಮುನಿಗಳು ಈ ಸತ್ಯವನ್ನು ತಾವೇ ಒಪ್ಪಿಕೊಂಡಿದ್ದಾರೆ. ಅವರ ಮಾತಿನಲ್ಲೇ ಹೇಳುವುದಾದರೆ : **"ಅನಿಯತತ್ವೇಽಪಿ ನಾಯೌಕ್ತಿಕಸ್ಯ ಸಂಗ್ರಹೋಽನ್ಯಥಾ ಬಾಲೋನ್ಮಾತ್ತಾದಿ ಸಮತ್ವಂ ॥** (ಸಾಂಖ್ಯದರ್ಶನ 1-26). ಅರ್ಥಾತ್, ಯುಕ್ತಿ-ವಿರುದ್ಧ ಮಾತುಗಳನ್ನು ಸ್ವೀಕರಿಸಲು ಸಾಧ್ಯವಿಲ್ಲ. ನ್ಯಾಯದರ್ಶನದಲ್ಲಿ ಹೇಳಿರುವ ಹದಿನಾರು ತತ್ವಗಳಲ್ಲಿ ವಾದವೂ ಒಂದಾಗಿದೆ. ವಾದದ ಲಕ್ಷಣವು ಹೀಗಿದೆ :

**ಪ್ರಮಾಣ ತರ್ಕ ಸಾಧನೋಪಾಲಂಭಃ ಸಿದ್ಧಾಂತಾ ವಿರುದ್ಧಃ**
**ಪಂಚಾವಯವೋಪಪನ್ನಃ ಪಕ್ಷ ಪ್ರತಿಪಕ್ಷ ಪರಿಗ್ರಹೋ ವಾದಃ ॥**

(ನ್ಯಾಯದರ್ಶನ 1-1-1)

ಈ ಸೂತ್ರದಲ್ಲಿ ತರ್ಕವನ್ನು ವಾದದ ಒಂದು ಅಂಗವೆಂದು ತೋರಿಸಲಾಗಿದೆ. ಆದುದರಿಂದ, ತರ್ಕವನ್ನು ಬಿಟ್ಟುಬಿಟ್ಟರೆ ವಾದವು ಪೂರ್ಣವಾಗುವುದಿಲ್ಲ. ಮಾತ್ರವಲ್ಲ, ಇಂತಹ ತರ್ಕರಹಿತ ವಾದವು ಅನೇಕ ದೋಷಗಳಿಗೊಳಗಾಗುತ್ತದೆ. ಸರಿಯಾದ ವಾದದ ಮೂಲಕವೇ ಸತ್ಯಾಸತ್ಯದ ನಿರ್ಣಯ ಮಾಡಲಿಕ್ಕೆ ಸಾಧ್ಯವಾಗುತ್ತದೆ. ಸತ್ಯಾಸತ್ಯದ ಜ್ಞಾನವಿಲ್ಲದೆ ಯೋಗಾಭ್ಯಾಸವು ಸಫಲವಾಗುವ ಸಂಭವವಿರುವುದಿಲ್ಲ.

ಮಹರ್ಷಿ ವ್ಯಾಸರು ಹೇಳಿರುವ ಪ್ರಕಾರ, **"ಜ್ಞಾನಸ್ಯೈವ ಪರಾಕಾಷ್ಠಾ ವೈರಾಗ್ಯಂ"** (ಯೋಗದರ್ಶನ1-16ರಲ್ಲಿ ವ್ಯಾಸಭಾಷ್ಯ). ಅರ್ಥಾತ್, ಯಾವಾಗ ಪರಮಾತ್ಮ, ಜೀವಾತ್ಮ ಮತ್ತು ಪ್ರಕೃತಿ, ಇವು ಮೂರರ ಸರಿಯಾದ ಜ್ಞಾನವು ಆಗುತ್ತದೆಯೋ, ಆವಾಗಲೇ ವೈರಾಗ್ಯವು ಉತ್ಪನ್ನವಾಗುತ್ತದೆ. ಎಂದರೆ, ಜ್ಞಾನವು ಕಾರಣ ಮತ್ತು ವೈರಾಗ್ಯವು ಅದರ ಕಾರ್ಯವಾಗಿದೆ. ಕಾರ್ಯಕಾರಣ ಅಭೇದವನ್ನು ಅನುಸರಿಸಿ ವಾಸ್ತವಿಕ ಜ್ಞಾನವೇ ವೈರಾಗ್ಯವೆಂದು ಹೇಳಬಹುದು. ಈ ರೀತಿಯ ವೈರಾಗ್ಯದಿಂದ ಅಸಂಪ್ರಜ್ಞಾತ ಸಮಾಧಿಯು ಸಿದ್ಧಿಸುತ್ತದೆ. ಹೀಗೆ ವಾದವು ವೈರಾಗ್ಯಕ್ಕೆ ಮತ್ತು ವೈರಾಗ್ಯವು ಅಸಂಪ್ರಜ್ಞಾತ ಸಮಾಧಿಗೆ ಕಾರಣವೆಂದು ಸಿದ್ಧವಾಗುವುದರಿಂದ,

ಯೋಗಕ್ಕೂ ತರ್ಕಕ್ಕೂ ಇರುವ ಘನಿಷ್ಠ ಸಂಬಂಧವು ಇಲ್ಲಿ ಬಹಳ ಸ್ಪಷ್ಟವಾಗುತ್ತದೆ.

ನ್ಯಾಯದರ್ಶನದಿಂದ ವಾದವನ್ನು ತೆಗೆದುಬಿಟ್ಟರೆ, ತತ್ತ್ವಜ್ಞಾನವು ಅಸಂಭವವಾಗಿಬಿಡುತ್ತದೆ. ತತ್ತ್ವಜ್ಞಾನವಿಲ್ಲದೆ ಮೋಕ್ಷವಿಲ್ಲ. ಆದುದರಿಂದ ಕಪಿಲ ಮುನಿಗಳು, "**ಜ್ಞಾನಾನ್ಮುಕ್ತಿಃ**" (ಸಾಂಖ್ಯದರ್ಶನ 3-23) ಎಂದು ಹೇಳಿದ್ದಾರೆ.

ಈ ಎಲ್ಲಾ ಕಾರಣಗಳಿಂದ, ತರ್ಕವು ಯೋಗಕ್ಕೆ ಬಾಧಕ ಎಂಬ ಮಾತು ನಿರಾಧಾರವೆಂದು ಸಿದ್ಧವಾಗುತ್ತದೆ. ಮಹರ್ಷಿ ಮನು ಕೂಡ ಧರ್ಮಾಧರ್ಮವನ್ನು ತಿಳಿದುಕೊಳ್ಳುವುದಕ್ಕೆ ತರ್ಕವು ಅತ್ಯಂತ ಉಪಯೋಗೀ ಎಂದು ಹೇಳಿದ್ದಾರೆ :

**ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ ।**
**ಯಸ್ತರ್ಕೇಣಾನುಸಂಧತ್ತೇ ಸಧರ್ಮಾಂ ವೇದನೇತರಃ ॥**

(ಮನುಸ್ಮೃತಿ 12-106)

ಎಂದರೆ, ಋಷಿಪ್ರಣೀತ ವಾಕ್ಯಗಳು, ವೇದಶಾಸ್ತ್ರಗಳಿಗೆ ಅನುಕೂಲವಾಗಿರುವ ಧರ್ಮೋಪದೇಶ, ಮತ್ತು ತರ್ಕದಿಂದ ಏನು ಸರಿಯೆಂದು ಸಿದ್ಧವಾಗುತ್ತದೋ, ಅದೇ ಧರ್ಮವಾಗಿದೆ, ಬೇರೆಯಾವುದೂ ಧರ್ಮವಲ್ಲ.

ಮಹರ್ಷಿ ದಯಾನಂದರು ಧರ್ಮದಿಂದ ಮುಕ್ತಿ ಮತ್ತು ಅಧರ್ಮದಿಂದ ಬಂಧನ ಎಂದು ಹೇಳಿದ್ದಾರೆ. ಮಹರ್ಷಿ ಕಣಾದರ ಮಾತಿನಲ್ಲಿ ಹೇಳುವುದಾದರೆ, "**ಯತೋಽಭ್ಯುದಯ ನಿಃ ಶ್ರೇಯಸಸಿದ್ಧಿಃ ಸ ಧರ್ಮಾಃ**" (ವೈಶೇಷಿಕ ದರ್ಶನ 1-1-2), ಅರ್ಥಾತ್, ಯಾವುದರ ಪಾಲನೆಯಿಂದ ಮನುಷ್ಯರ ಅಭ್ಯುದಯವಾಗುತ್ತದೆಯೋ ಮತ್ತು ಪರಮಾನಂದದ ಪದವಿಯು ದೊರೆಯುತ್ತದೆಯೋ ಅದೇ ಧರ್ಮವಾಗಿದೆ. ಉಪಾಸನೆಯ ಎಂಟು ಅಂಗಗಳೂ ಧರ್ಮವೆಂದುಕೊಂಡಿವೆ. ಇವುಗಳ ಅನುಷ್ಠಾನದಿಂದ ಮುಕ್ತಿಯು ದೊರೆಯುತ್ತದೆ. ಇದು ಕೂಡ, ತರ್ಕದ ಹೊರತು ಯಾರಿಗೂ ಗೊತ್ತಾಗುವುದಿಲ್ಲ. ಆದರೂ, ಒಂದು ಮಾತು ಏನೆಂದರೆ, ಈ ತರ್ಕವು ವೇದಗಳು ಮತ್ತು ವೇದಾನುಕೂಲ ಋಷಿ ಗ್ರಂಥಗಳಿಗೆ ವಿರುದ್ಧವಾಗಿರಬಾರದು.

ಲೋಕದಲ್ಲಿ ಭ್ರಮೆಯು ಹುಟ್ಟುವುದಕ್ಕೆ ಒಂದು ಕಾರಣ ಏನೆಂದರೆ, ಜನರಿಗೆ ತರ್ಕ ಮತ್ತು ಕುತರ್ಕದ ಭೇದವು ಗೊತ್ತಿರುವುದಿಲ್ಲ.

ವ್ಯಾಕರಣ ಮಹಾಭಾಷ್ಯೆಯಲ್ಲಿ, ವ್ಯಾಕರಣ ಶಾಸ್ತ್ರದ ಅಧ್ಯಯನದ ಹದಿನೆಂಟು ಪ್ರಯೋಜನಗಳನ್ನು ಹೇಳಿದ್ದಾರೆ. ಅವುಗಳಲ್ಲಿ ಐದು ಮುಖ್ಯವಾಗಿವೆ. ಈ ಐದರಲ್ಲಿ ಒಂದು "**ಊಹಾ**" ಎನಿಸಿಕೊಂಡಿದೆ. ಇದು ವೇದಮಂತ್ರಗಳನ್ನು ಅರ್ಥ

ಮಾಡಿಕೊಳ್ಳುವುದಕ್ಕೆ ಉಪಯೋಗಿಯಾಗಿದೆ. ಈ ರೀತಿ **ಊಹಾ,** ಎಂದರೆ ತರ್ಕವು ವೇದ ಮಂತ್ರಗಳನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಉಪಯುಕ್ತವಾಗಿರುವಾಗ, ಅದು ಯೋಗಕ್ಕೆ ಹೇಗೆ ಬಾಧಕವಾಗುತ್ತದೆ? ಈ ಮೊದಲೇ ನಾನು ಹೇಳಿದ್ದೇನೆ, ಏನೆಂದರೆ, ವೇದಜ್ಞಾನವನ್ನು ಸಂಪಾದಿಸದೆ ಯಾರೂ ಯೋಗಿಯಾಗುವುದಕ್ಕೆ ಸಾಧ್ಯವಿಲ್ಲವೆಂದು.

ಮೀಮಾಂಸಾ-ದರ್ಶನಕಾರರೂ ಕೂಡ, ಒಂಭತ್ತನೇ ಅಧ್ಯಾಯದಲ್ಲಿ "**ಊಹಾ**" ಇದಕ್ಕೆ ಬಹಳ ಮಹತ್ವವನ್ನು ಕೊಟ್ಟಿದ್ದಾರೆ. ಇದು ಸಾಮಗಾಯನಕ್ಕೆ ಬಹಳ ಅಗತ್ಯವಾಗಿ ಬೇಕಾಗಿದೆ. ಸಾಮವೇದವು ಉಪಾಸನೆಗೆ ಅಧಿಕ ಸಂಬಂಧಪಟ್ಟದ್ದಾಗಿದೆ. ಹೀಗೆ, ಸಾಮಗಾನಕ್ಕೂ '**ಊಹಾ**' ಅಥವಾ '**ತರ್ಕ**'ವು ಉಪಯೋಗಿಯಾಗಿರುವಾಗ ಯೋಗಕ್ಕೆ ಹೇಗೆ ಇದು ಅನುಪಯೋಗಿಯಾಗಿದೆ?

ಯೋಗದರ್ಶನದಲ್ಲಿ ತರ್ಕದ ಪ್ರಯೋಗದ ಕುರಿತು ಈ ರೀತಿ ಹೇಳಿದ್ದಾರೆ: "**ಪರಿಮಾಣೈಕತ್ವಾದ್ವಸ್ತುತತ್ವಂ**" (ಯೋಗದರ್ಶನ 4-14) ಈ ಸೂತ್ರದ ಅರ್ಥವನ್ನು ವ್ಯಾಸಭಾಷ್ಯೆಯಲ್ಲಿ ಈ ರೀತಿ ವಿವರಿಸಿದ್ದಾರೆ : "**ನಾಸ್ತ್ಯರ್ಥೋ ವಿಜ್ಞಾನವಿಸಹಚರಃ**", ಎಂದರೆ, ವಿಜ್ಞಾನಕ್ಕೆ ಹೊರತಾಗಿ ಯಾವ ವಸ್ತು ತತ್ವವೂ ಇಲ್ಲ. ಆದರೆ, ಇವರೇ ಈ ವಿಜ್ಞಾನವಾದದ ಖಂಡನವನ್ನೂ ಮಾಡಿದ್ದಾರೆ. ಮುಂದಿನ ಸೂತ್ರದ ಅವತರಣದಲ್ಲಿ ವ್ಯಾಸರು ಹೇಳುತ್ತಾರೆ : "**ಕುತಶ್ಚೈತದ ನ್ಯಾಯಂ ॥**", ಅರ್ಥಾತ್, ಈ ವಿರೋಧವು ಹೇಗೆ? "**ವಸ್ತು ಸಾಮ್ಯೇಚಿತ್ತಭೇದಾತ್ತಯೋರ್ವಿಭಕ್ತಃ ಪಂಥಾಃ**" (ಯೋಗದರ್ಶನ 4-15). ಈ ಸೂತ್ರದ ಭಾವಾರ್ಥವೇನೆಂದರೆ, ವಸ್ತುವು ಒಂದೇ ಆಗಿದ್ದರೂ ಅದರಿಂದ ಕೆಲವರಿಗೆ ಸುಖದ ಅನುಭೂತಿಯಾಗುತ್ತದೆ, ಮತ್ತು ಕೆಲವರಿಗೆ ದುಃಖದ ಅನುಭೂತಿಯಾಗುತ್ತದೆ. ಆದುದರಿಂದ, ಜ್ಞಾನ ಮತ್ತು ವಸ್ತು ಪರಸ್ಪರ ಭಿನ್ನವಾಗಿವೆ. ಇದೇ ರೀತಿ ವಿಜ್ಞಾನವೂ ಕೂಡ ವಸ್ತುವಿಗಿಂತ ಭಿನ್ನವಾಗಿದೆ. ಈ ರೀತಿ, ವ್ಯಾಸರು ವಿಜ್ಞಾನವಾದವನ್ನು ಖಂಡಿಸಿದ್ದಾರೆ. ಯಾರು ವಸ್ತುಗಳನ್ನು ಚಿತ್ತದ ಅಧೀನವೆಂದು ಹೇಳುತ್ತಾರೆಯೋ ಅವರ ಮಾತನ್ನು ಯೋಗದರ್ಶನಕಾರರು ಖಂಡಿಸುತ್ತಾ ಹೀಗೆಂದು ಹೇಳಿದ್ದಾರೆ : "**ನ ಚೈಕಚಿತ್ತತಂತ್ರಂ ವಸ್ತು ತದಪ್ರಮಾಣಕಂ ತದಾ ಸ್ಯಾತ್**" (ಯೋಗದರ್ಶನ 4-16). ಈ ಸೂತ್ರದ ಅಭಿಪ್ರಾಯ ಹೀಗಿದೆ : ವಸ್ತುಗಳು ಯಾವುದೇ ಒಂದು ಚಿತ್ತದ ಅಧೀನದಲ್ಲಿ ಇರುವುದಿಲ್ಲ. ಒಂದು ವೇಳೆ ವಸ್ತುಗಳು ಚಿತ್ತದ ಅಧೀನದಲ್ಲಿ ಇರುವುದು ನಿಜವೆಂದಾದರೆ, ಒಂದು ಚಿತ್ತವು ಯಾವುದೇ ಒಂದು ಅನ್ಯ ಸ್ಥಾನದಲ್ಲಿ ಕೇಂದ್ರಿತವಾಗಿರುವಾಗ, ಆ ವಸ್ತುಗಳು (ಪ್ರತ್ಯಕ್ಷಾದಿ) ಪ್ರಮಾಣಗಳಿಗೆ ಬಾಹ್ಯವಾಗಿಬಿಡುತ್ತವೆ. ಈ ರೀತಿ ಸೂತ್ರಕಾರರು,

ಹಾಗೂ ಭಾಷ್ಯಕಾರರು, ಇಬ್ಬರೂ, ವಸ್ತುಗಳು ಚಿತ್ತದ ಅಧೀನವಾಗಿರುತ್ತವೆ ಎಂಬ ಮಾತನ್ನು ಖಂಡಿಸಿದ್ದಾರೆ. ಇದೇ ರೀತಿ, ಇವರಿಬ್ಬರೂ ಯೋಗದ ಬಗ್ಗೆ ಹರಡಿರುವ ಅನೇಕ ಮಿಥ್ಯಾವಾದಗಳನ್ನು ತರ್ಕದ ಆಧಾರದಿಂದ ಖಂಡಿಸಿದ್ದಾರೆ. ತರ್ಕದ ಹೊರತು ನಾಸ್ತಿಕವಾದದ ಖಂಡನೆ ಸಾಧ್ಯವಿಲ್ಲ. ಮತ್ತು ನಾಸ್ತಿಕವಾದದ ಖಂಡನೆ ಮಾಡದೆ ಯಾರೂ ಯೋಗಿಯಾಗಲಾರರು. ಈಗಿನ ಕಾಲದಲ್ಲಿ ಅನೇಕ ಮಂದಿ ತರ್ಕದ ವಿರೋಧಿಗಳು ತತ್ವಜ್ಞಾನದ ಲಾಭದಿಂದ ವಂಚಿತರಾಗಿದ್ದಾರೆ. ಇಷ್ಟು ಮಾತ್ರವಲ್ಲ, ಇವರೆಲ್ಲಾ ತಮ್ಮ ತಮ್ಮ ಶಿಷ್ಯರನ್ನೂ ಅಜ್ಞಾನಾಂಧಕಾರದ ಕಡೆಗೆ ತಳ್ಳಿಬಿಡುತ್ತಿದ್ದಾರೆ. ತಮ್ಮನ್ನು ತಾವೇ ದೇವರು ಭಕ್ತರೆಂದುಕೊಳ್ಳುವ ಸಾವಿರಾರು ಮಂದಿ ಜನರು ತರ್ಕವನ್ನು ಬದಿಗಿಟ್ಟುಬಿಟ್ಟು ತಮ್ಮ ಜೀವನವನ್ನು ವ್ಯರ್ಥ ಮಾಡಿಕೊಳ್ಳುತ್ತಿದ್ದಾರೆ. ಇವರೆಲ್ಲರ ತನು, ಮನ, ಧನ ಮತ್ತು ಸಮಯ ಯೋಗದ ಹೆಸರಲ್ಲಿ ವ್ಯರ್ಥವಾಗಿ ಕಳೆದು ಹೋಗುತ್ತಿದೆ. ತರ್ಕದ ವಿರೋಧಮಾಡಿ, ಇವರೆಲ್ಲಾ ದುಃಖಸಾಗರದಲ್ಲಿ ಮುಳುಗಿಬಿಟ್ಟಿದ್ದಾರೆ. ಇಲ್ಲಿ, ವಿಚಿತ್ರವಾದ ಒಂದು ಮಾತೇನೆಂದರೆ, ಇವರೆಲ್ಲಾ ಯೋಗದ ನಿಜವಾದ ಫಲದಿಂದ ವಂಚಿತರಾಗಿದ್ದರೂ ಕೂಡ, ತಮ್ಮನ್ನು ತಾವೇ ಸಫಲರು ಎಂದು ಕೊಂಡಿದ್ದಾರೆ.

**ಪ್ರಶ್ನೆ** :– ತರ್ಕವು ಯೋಗಕ್ಕೆ ಸಾಧಕ (ಸಹಾಯಕ)ವಾಗಿದ್ದರೂ ಕೂಡ, ಕೆಲವು ಜನರು ಇದನ್ನು ಯಾಕೆ ವಿರೋಧಿಸುತ್ತಾರೆ?

**ಉತ್ತರ** :– ಇದಕ್ಕೆ ಅನೇಕ ಕಾರಣಗಳಿವೆ. ಇಲ್ಲಿ ಕೆಲವು ಮುಖ್ಯಕಾರಣಗಳನ್ನು ಹೇಳುತ್ತಿದ್ದೇನೆ :-

ಒಂದನೆಯದಾಗಿ, ಈಗಿನ ಕಾಲದಲ್ಲಿ ಅನೇಕಮಂದಿ, ಸುಳ್ಳು, ಛಲ ಮತ್ತು ಕಪಟದಿಂದ ತಮ್ಮನ್ನು ತಾವೇ ಯೋಗಿಗಳೆಂದು ತೋರಿಸಿ, ಜನರಿಂದ ತಮ್ಮ ಪೂಜೆಯನ್ನು ಮಾಡಿಸಿಕೊಂಡು ಬರುತ್ತಿದ್ದಾರೆ. ಇವರ ಯೋಗ ಮತ್ತು ಸಿದ್ಧಾಂತಗಳು, ಇವು ಸತ್ಯಕ್ಕೆ ವಿರುದ್ಧವಾಗಿವೆ. ಆದುದರಿಂದ ಯಾರಾದರೂ ಇವರೊಡನೆ ತರ್ಕ ಮಾಡುವುದಕ್ಕೆ ಹೊರಟರೆ, ಇವರ ಪಾಖಂಡವು ಬಹಿರಂಗವಾಗಿಬಿಡುತ್ತದೆ. ಈ ಭೀತಿಯಿಂದ ಇವರು ತರ್ಕವನ್ನು ವಿರೋಧಿಸುತ್ತಿದ್ದಾರೆ.

ಎರಡನೇಯದಾಗಿ, ಕೆಲವರಿಗೆ ಯೋಗದ ನಿಜವಾದ ಸ್ವರೂಪವು ಏನೆಂದು ಗೊತ್ತಿಲ್ಲ. ಮತ್ತು ತರ್ಕವೆಂದರೇನು ಎಂಬುದೂ ಗೊತ್ತಿಲ್ಲ. ಆದುದರಿಂದ, ಯಾರೋ

ಹೇಳಿದ ಮಾತನ್ನು ನಂಬಿ, ಇವರೂ ಹೇಳಿಕೊಂಡು ಬರುತ್ತಿದ್ದಾರೆ : ತರ್ಕವು ಯೋಗಕ್ಕೆ ಬಾಧಕವಾಗಿದೆ, ಎಂದ, ಇಂತಹ ಜನರ ಸ್ಥಿತಿಯನ್ನು ಹೋತದ ಹಿಂದೆ ಗುಂಪಿನಲ್ಲಿ ಹೋಗುವ ಕುರಿಗಳ ಹಾಗೆ, ದಯನೀಯವಾಗಿದೆ. ತರ್ಕವು ಯೋಗಕ್ಕೆ ಅನುಕೂಲವಾಗಿಲ್ಲ, ಎಂಬ ಮಾತಿನ ತುಂಬಾ ಪ್ರಚಾರವಾಗಿ, ತರ್ಕದ ಪ್ರಯೋಗವು ಕಡಿಮೆಯಾಗುತ್ತಾ ಬಂದಿತು. ಹೀಗಾಗಿ, ಯಾರು ಬೇಕಾದರೂ ಯೋಗಿಯಾಗಬಹುದು ಎಂಬ ವಿಚಾರವು ಬೆಳೆದು ಅನೇಕ ಮಂದಿ ಮೂರ್ಖರು, ಕಪಟಿಗಳು ಮತ್ತು ದುರಾಚಾರಿಗಳು ಯೋಗಿಗಳೆಂದು ಪ್ರಸಿದ್ಧರಾಗಿದ್ದಾರೆ. ಜನರು ತಮ್ಮ ಅಜ್ಞಾನದ ದೆಸೆಯಿಂದಾಗಿ, ಇವರನ್ನು ಪೂಜಿಸುತ್ತಿದ್ದಾರೆ.

ಮೂರನೇಯದಾಗಿ, ಕೆಲವರಿಗೆ ತರ್ಕದ ಮಹತ್ವವು ಗೊತ್ತಿದೆ. ಆದರೆ, ಅವರು ಪರಿಶ್ರಮ ಮಾಡಲಿಕ್ಕೆ ಸಿದ್ಧರಿಲ್ಲ. ಅನಾಯಾಸವಾಗಿ ಲಾಭವು ದೊರೆಯುತ್ತಿರುವಾಗ ವ್ಯರ್ಥವಾಗಿ ಏಕೆ ತಲೆ ಬಿಸಿಮಾಡಿಕೊಳ್ಳಬೇಕು, ಎಂಬುದು ಇವರ ಭಾವನೆ. ಆದುದರಿಂದ, ತರ್ಕವು ಬೇಡ, ಅದರಿಂದ ಏನೂ ಪ್ರಯೋಜನವಿಲ್ಲ, ಎಂದು ಹೇಳುತ್ತಾರೆ. ತರ್ಕಕ್ಕೆ ರಜೆಕೊಟ್ಟು ಜಿಜ್ಞಾಸುಗಳ ಸಂದೇಹಗಳನ್ನು ದೂರ ಮಾಡುವುದು, ಅಷ್ಟೊಂದು ಕಷ್ಟ ಅಲ್ಲ.

ನಾಲ್ಕನೇಯ ಕಾರಣವೇನೆಂದರೆ, ಕೆಲವರಂತೂ ಯೋಗದ ವಿಷಯದಲ್ಲಿ ತರ್ಕ ತುಂಬಾ ಮಾಡುತ್ತಾರೆ. ಆದರೆ, ಅವರ ಆಚರಣೆಯು ಮಾತ್ರ ಸಾಮಾನ್ಯವಾಗಿ ಯೋಗಕ್ಕೆ ವಿರುದ್ಧವಾಗಿದೆ. ಆದುದರಿಂದ, ಇಂತಹ ಜನರು ಕೂಡ ತರ್ಕವನ್ನು ದೂರದಲ್ಲಿ ಇಟ್ಟುಕೊಳ್ಳುವ ಪ್ರಯತ್ನ ಮಾಡುತ್ತಾರೆ. ಒಂದು ವೇಳೆ, ತರ್ಕ ಮಾಡುವವರು, ತರ್ಕಕ್ಕೆ ಅನುಸಾರವಾಗಿ ಯೋಗಾಭ್ಯಾಸ ಮಾಡಲು ಪ್ರಾರಂಭಮಾಡಿದರೆ, ಈ ರೀತಿ ತರ್ಕಕ್ಕೆ ವಿರುದ್ಧವಾದ ವಿಚಾರಗಳು ಬೆಳೆಯಲಿಕ್ಕೆ ಸಾಧ್ಯವಿಲ್ಲ.

ಹೀಗೆ ಜನರು ತರ್ಕವನ್ನು ವಿರೋಧಿಸುವುದಕ್ಕೆ ಇನ್ನೂ ಅನೇಕ ಕಾರಣಗಳಿವೆ. **"ನೈಷಾ ತರ್ಕೇಣ ಮತಿರಾಪನೇಯಾ"** ಎಂಬ ವಾಕ್ಯವು ಕಠೋಪನಿಷತ್ತಿನಲ್ಲಿ (2-9) ಬರುತ್ತದೆ. ಇದನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ, ಕೆಲವರು, ಇದನ್ನೇ ಪ್ರಮಾಣವಾಕ್ಯವನ್ನಾಗಿ ಕೊಟ್ಟು, ತರ್ಕವನ್ನು ವಿರೋಧಿಸುವುದು ಉಂಟು. ಇದು ಯೋಗ್ಯವಲ್ಲ. ಜನರು ತರ್ಕದ ವಾಸ್ತವಿಕ ಸ್ವರೂಪವನ್ನು (ಮತ್ತು ಅದರ ಮಹತ್ವವನ್ನು) ಚೆನ್ನಾಗಿ ತಿಳಿದುಕೊಳ್ಳಬೇಕು, ಮತ್ತು ತರ್ಕವು ಯೋಗಸಾಧನೆಯ ಮಾರ್ಗದಲ್ಲಿ ಬಾಧಕವೆಂಬ ಮಿಥ್ಯಾ ವಿಚಾರವನ್ನು ಬಿಟ್ಟುಬಿಡಬೇಕು.

## 5. ಆಸನ ಹಾಕಿ, ಗುರುಗಳ ಕೈಯಿಂದ ತಲೆಯನ್ನು ಸವರಿಸಿಕೊಂಡು ಅಥವಾ ಕೇವಲ ಸಂಕೇತದಿಂದ ಸಮಾಧಿ ಸಿದ್ಧಿಯ ಮಾತು

ಯೋಗಕ್ಕೆ ಸಂಬಂಧಪಟ್ಟ ಐದನೇಯ ಭ್ರಾಂತಿಯ ಕುರಿತಾಗಿ ಈಗ ಇಲ್ಲಿ ಕೆಳಗೆ ಸ್ವಲ್ಪ ಚರ್ಚೆ ನಡೆಸೋಣ. ಕೆಲವು ಮಂದಿ ತಥಾಕಥಿತ ಯೋಗಾಚಾರ್ಯರು ತಮ್ಮ ಶಿಷ್ಯರನ್ನು ಆಸನ ಹಾಕಿಸಿ ತಮ್ಮ ಮುಂದೆ ಕುಳಿತುಕೊಳ್ಳಿಸುತ್ತಾರೆ. ಮತ್ತು ಶಿಷ್ಯರ ತಲೆಯನ್ನು ತಮ್ಮ ಕೈಯಿಂದ ಸವರಿಸುತ್ತಾರೆ. ಅಥವಾ ತಮ್ಮ ಕೈಯಿಂದ ಏನೋ ಸಂಕೇತ ಮಾಡಿ ತಮ್ಮ ಮನೋಬಲದಿಂದ ಶಿಷ್ಯರ ಬಳಿಗೆ ಜ್ಞಾನವನ್ನು ಸಾಗಿಸುತ್ತಾರೆ, ಮತ್ತು ಇದರಿಂದ ಶಿಷ್ಯರಿಗೆ ಸಮಾಧಿಯು ಸಿದ್ಧಿಸುತ್ತದೆ, ಎಂಬ ಮಾತನ್ನು ಜನರು ಪ್ರಚಾರ ಮಾಡುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಇದರಿಂದ ಈ ಶಿಷ್ಯರಿಗೆ ಪರಮಾತ್ಮನ ಸಾಕ್ಷಾತ್ಕಾರವೂ ಆಗುತ್ತದೆ, ಮತ್ತು ಪರಮಾನಂದದ ತೃಪ್ತಿ ಆಗುತ್ತದೆ ಎಂದೂ ಇವರು ಹೇಳುತ್ತಾರೆ. ಈ ರೀತಿಯ ಯೋಗದಲ್ಲಿ, ಸಾಂಗೋಪಾಂಗ ವೇದಗಳನ್ನಾಗಲೀ, ಬ್ರಾಹ್ಮಣ ಗ್ರಂಥಗಳು, ಉಪನಿಷತ್ತುಗಳು, ಅಥವಾ ಉಪವೇದಗಳನ್ನಾಗಲೀ ಅಧ್ಯಯನ ಮಾಡುವ ಆವಶ್ಯಕತೆಯೇ ಇಲ್ಲ. ಅಸಿಧಾರಾ ವ್ರತಕ್ಕೆ ತುಲ್ಯವಾದ ಯಮ-ನಿಯಮಾದಿಗಳ ಪಾಲನೆ ಮಾಡುವುದೂ ಇಲ್ಲಿ ಅಗತ್ಯವಿಲ್ಲ. ಕೇವಲ ಗುರುಗಳ ಕೃಪೆಯಿಂದ ಸಮಾಧಿಯು ಸಿದ್ಧಿಸುತ್ತದೆ, ಎಂದು ಇವರು ನಂಬುತ್ತಾರೆ. ಈ ಮಾತು ಎಷ್ಟು ಸುಳ್ಳು ಎಂಬುದನ್ನು ಪ್ರಮಾಣ ಮತ್ತು ಯುಕ್ತಿಗಳಿಂದ ಈಗ ಸಿದ್ಧಪಡಿಸುತ್ತೇನೆ.

ಮಹರ್ಷಿ ಪತಂಜಲಿ, ಇವರು ಯೋಗದರ್ಶನದ ಪ್ರಥಮ ಪಾದದಲ್ಲಿಯೇ ಯೋಗದ ಲಕ್ಷಣಗಳನ್ನು ಸ್ಪಷ್ಟಪಡಿಸಿದ್ದಾರೆ. **"ಯೋಗಶ್ಚಿತ್ತವೃತ್ತಿನಿರೋಧಃ"** (ಯೋ.ದ. 1-2) ಅರ್ಥಾತ್, ಚಿತ್ತದ ವೃತ್ತಿಗಳನ್ನು ತಡೆಯುವುದಕ್ಕೆ ಯೋಗವೆಂದು ಹೇಳುತ್ತಾರೆ. ಬಳಿಕ, ಪ್ರಮಾಣ ಮೊದಲಾದ ಐದು ವೃತ್ತಿಗಳ ಹೆಸರು ಮತ್ತು ಅವುಗಳ ಲಕ್ಷಣಗಳನ್ನೂ ಹೇಳಿದ್ದಾರೆ. ಮಾತ್ರವಲ್ಲ, **"ಅಭ್ಯಾಸ ವೈರಾಗ್ಯಾಭ್ಯಾಂ ತನ್ನಿರೋಧಃ"** (ಯೋ. ದ. 1-12). ಅರ್ಥಾತ್, ಅಭ್ಯಾಸ ಮತ್ತು ವೈರಾಗ್ಯಗಳಿಂದ ವೃತ್ತಿಗಳನ್ನು ತಡೆಯಬಹುದು ಎಂದೂ ಹೇಳಿದ್ದಾರೆ. ಚಿತ್ತವನ್ನು ವೃತ್ತಿರಹಿತವನ್ನಾಗಿ ಇಟ್ಟುಕೊಳ್ಳುವುದಕ್ಕಾಗಿ, ಮಾಡುವ ಪ್ರಯತ್ನ, ಯಮ-ನಿಯಮಗಳ ಅನುಷ್ಠಾನ, ಇದನ್ನು 'ಅಭ್ಯಾಸ' ಎಂದು ಕರೆಯುತ್ತಾರೆ. **"ಜ್ಞಾನಸ್ಯೈವ ಪರಾಕಾಷ್ಠಾ ವೈರಾಗ್ಯಂ"** (ಯೋ.ದ. 1-16, ಇಲ್ಲಿ ವ್ಯಾಸಭಾಷ್ಯ), ಎಂದರೆ, ಜ್ಞಾನದ ಪರಾಕಾಷ್ಠದ ಫಲವಾಗಿ ವೈರಾಗ್ಯವು ಉತ್ಪನ್ನವಾಗುತ್ತದೆ. ಜ್ಞಾನ ಮತ್ತು ಅಭ್ಯಾಸ(ವೈರಾಗ್ಯ)ವನ್ನು ಬಿಟ್ಟರೆ, ವೃತ್ತಿಗಳನ್ನು ತಡೆಯುವುದು ಕಷ್ಟ. ವೃತ್ತಿಗಳನ್ನು ತಡೆಯದೆ ಸಮಾಧಿಯು

ಸಿದ್ಧಿಸುವುದಿಲ್ಲ. ಆದುದರಿಂದ, ವೃತ್ತಿಗಳ ಸ್ವರೂಪ, ಅವುಗಳನ್ನು ವಶದಲ್ಲಿ ಇಟ್ಟುಕೊಳ್ಳುವುದಕ್ಕೆ ಅಭ್ಯಾಸ, ಮತ್ತು ವೈರಾಗ್ಯ, ಇವು ಅನಿವಾರ್ಯ ಸಾಧನಗಳು ಎಂದಿರುವಾಗ, ಗುರುಗಳು ತಲೆಯ ಮೇಲೆ ಕೈಯಿಟ್ಟರೆ ಸಾಕು, ಸಮಾಧಿಯು ಸಿದ್ಧಿಸುತ್ತದೆ, ಎಂಬ ಮಾತು ಹೇಗೆ ಸತ್ಯವಾದೀತು?

ಯೋಗದರ್ಶನದ ಎರಡನೆಯ ಪಾದದ, ಪ್ರಥಮ ಸೂತ್ರದಲ್ಲಿ, **"ತಪಃ ಸ್ವಾಧ್ಯಾಯೇಶ್ವರ ಪ್ರಣಿಧಾನಾನಿ ಕ್ರಿಯಾಯೋಗಃ"** ಎಂದು ಹೇಳಿದ್ದಾರೆ. ಸಾಮಾನ್ಯ ಜನರಿಗೆ, ದೈನಿಕ ಕ್ರಿಯಾಯೋಗ, ಎಂದರೆ, ನಿತ್ಯ ತಪಸ್ಸು, ಸ್ವಾಧ್ಯಾಯ ಮತ್ತು ಈಶ್ವರ ಪ್ರಣಿಧಾನ, ಇವು ಯೋಗದ ಸಾಧನಗಳು ಎಂದು ಇದರ ತಾತ್ಪರ್ಯವಾಗಿದೆ.

**"ತಪೋದ್ವಂದ್ವ ಸಹನಂ"** (ಯೋ.ದ. 2-32) ಎಂದರೆ, ನಾನಾ ಪ್ರಕಾರದ ಕಷ್ಟಗಳು ಬಂದರೂ ಕೂಡ, ಧರ್ಮಾಚರಣೆಯನ್ನು ಬಿಡದಿರುವುದಕ್ಕೆ ತಪಸ್ಸು ಎಂದು ಹೇಳುತ್ತಾರೆ. ಪ್ರಣವ ಮಂತ್ರ 'ಓಂ'ಕಾರದ ಜಪ ಮತ್ತು ಮೋಕ್ಷಕಾರಕ, ವೇದ ಹಾಗೂ ವೇದಾನುಕೂಲವಾಗಿರುವ ಋಷೀಕೃತ ಗ್ರಂಥಗಳ ಅಧ್ಯಯನ ಮಾಡುವುದಕ್ಕೆ 'ಸ್ವಾಧ್ಯಾಯ' ಎಂದು ಹೇಳುತ್ತಾರೆ. ನಾವು ಮನಸಾ, ವಾಚಾ, ಕರ್ಮಣಾ, ಎಂದರೆ ತ್ರಿಕರಣ ಪೂರ್ವಕವಾಗಿ ಮಾಡುತ್ತಿರುವ ಎಲ್ಲಾ ಕ್ರಿಯೆಗಳಿಗೂ ಪರಮ ಗುರು ಪರಮಾತ್ಮನೇ ಪ್ರೇರಕನೆಂದು ಭಾವಿಸಿ, ಅವನನ್ನು ಸ್ಮರಣೆಯಲ್ಲಿಟ್ಟುಕೊಂಡು ಈ ಕ್ರಿಯೆಗಳ ಫಲದ ಲೋಭಕ್ಕೆ ಹೋಗದೆ, ಕೇವಲ ಕರ್ತವ್ಯ ದೃಷ್ಟಿಯಿಂದ ವ್ಯವಹರಿಸುವುದಕ್ಕೆ 'ಈಶ್ವರ-ಪ್ರಣಿಧಾನ' ಎನ್ನುತ್ತಾರೆ. ಸಮಾಧಿಯ ಸಿದ್ಧಿಗೋಸ್ಕರ ಈ ಕ್ರಿಯೆಗಳನ್ನು ಮಾಡಬೇಕಾಗುತ್ತದೆ. ಈ ಮೇಲಿನ ಸೂತ್ರದ ಭಾಷ್ಯೆಯಲ್ಲಿ ವ್ಯಾಸರು, **"ನಾತಪಸ್ವಿನೋ ಯೋಗಃ ಸಿದ್ಧ್ಯತಿ"** ಎಂದು ಹೇಳಿದ್ದಾರೆ. ಅರ್ಥಾತ್, ಯಾರ ಜೀವನದಲ್ಲಿ ತಪಸ್ಸು ಇಲ್ಲವೋ ಅವರಿಗೆ ಯೋಗವು, ಎಂದರೆ, ಸಮಾಧಿಯು ಸಿದ್ಧಿಸುವುದಿಲ್ಲ.

ಮನುಷ್ಯರ ಮನಸ್ಸಿನಲ್ಲಿ ಜನ್ಮ ಜನ್ಮಾಂತರಗಳ ಸಂಸ್ಕಾರಗಳು (ವಾಸನಾಗಳು) ಸಂಗ್ರಹವಾಗಿ ಇರುತ್ತವೆ. ಈ ಜನ್ಮದ ಸಂಸ್ಕಾರಗಳು ಕೂಡಾ ಅದರಲ್ಲಿ ಸೇರಿಕೊಳ್ಳುತ್ತವೆ. ಇವೆಲ್ಲಾ, ತಪಸ್ಸು, ಸ್ವಾಧ್ಯಾಯ ಮತ್ತು ಈಶ್ವರ ಪ್ರಣಿಧಾನಗಳ ಹೊರತು ದೂರವಾಗಲಿಕ್ಕೆ ಸಾಧ್ಯವಿಲ್ಲ.

ಯೋಗದರ್ಶನದ ಎರಡನೇ ಪಾದದಲ್ಲಿ, ದುಃಖದ ಕಾರಣಗಳು, ಸುಖ ಮತ್ತು ಸುಖಪ್ರಾಪ್ತಿಯ ಉಪಾಯಗಳನ್ನು ತಿಳಿಸಿದ್ದಾರೆ. **"ವಿವೇಕಖ್ಯಾತಿರವಿಪ್ಲವಾ ಹಾನೋಪಾಯಃ"** (ಯೋ.ದ. 2-26), ಎಂದರೆ, ಸುದೃಢವಾದ ವಿವೇಕ ಖ್ಯಾತಿಯೇ ಮೋಕ್ಷದ ಉಪಾಯವಾಗಿದೆ.

**"ಯೋಗಾಂಗಾನುಷ್ಠಾನಾದ ಶುದ್ಧಿಕ್ಷಯೇ ಜ್ಞಾನ ದೀಪ್ತಿರಾವಿವೇಕಖ್ಯಾತೇಃ"** (ಯೋ.ದ. 2-28), ಅರ್ಥಾತ್, ಅಷ್ಟಾಂಗ ಯೋಗದ ಅನುಷ್ಠಾನದಿಂದ ವಿವೇಕಖ್ಯಾತಿ ಪರ್ಯಂತ ಜ್ಞಾನದ ವೃದ್ಧಿಯಾಗುತ್ತದೆ. ಅಷ್ಟಾಂಗ ಯೋಗದ ಅನುಷ್ಠಾನವೇ ವಿವೇಕಖ್ಯಾತಿಯನ್ನು ಪಡೆಯುವುದಕ್ಕೆ ಉತ್ತಮ ಉಪಾಯವಾಗಿದೆ, ಎಂದು ಇದರ ತಾತ್ಪರ್ಯ.

ಯೋಗದರ್ಶನದಲ್ಲಿ ಇಷ್ಟೆಲ್ಲಾ ಸ್ಪಷ್ಟವಾಗಿ ಹೇಳಿರುವಾಗ, ಬುದ್ಧಿವಂತರು ಸ್ವಲ್ಪ ವಿಚಾರ ಮಾಡಬೇಕು: ಅಷ್ಟಾಂಗ ಯೋಗದ ಅನುಷ್ಠಾನದಿಂದ ಸಮಾಧಿಯು ಸಿದ್ಧಿಸುತ್ತದೆಯೇ ಅಥವಾ ಕೇವಲ ಒಬ್ಬ ಗುರುವು ತಲೆಯ ಮೇಲೆ ಕೈ ಇಟ್ಟರೆ ಸಮಾಧಿಯು ಲಭಿಸುವುದೇ? ಒಂದು ವೇಳೆ, ಕೇವಲ ತಲೆಯ ಮೇಲೆ ಕೈ ಇಟ್ಟು ಸಮಾಧಿಯನ್ನು ಸಿದ್ಧಿಸಬಹುದಾದರೆ, ಯಾರ ತಲೆಯ ಮೇಲಾದರೂ ಕೈ ಇಟ್ಟು ಅವರನ್ನು ಮಹರ್ಷಿ ವ್ಯಾಸರನ್ನಾಗಿ ಯಾಕೆ ಮಾಡಬಾರದು? ತ್ರಿವಿಧ ದುಃಖಗಳಿಂದ ಪಾರಾಗುವುದಕ್ಕೆ ಮತ್ತು ಸಮಾಧಿಯನ್ನು ಸಿದ್ಧಿಸುವುದಕ್ಕೆ ಕಪಿಲಾಚಾರ್ಯರು ಅನೇಕ ಉಪಾಯಗಳನ್ನು ಹೇಳಿದ್ದಾರೆ. ಆದರೆ, ತಲೆಯ ಮೇಲೆ ಕೈಯಿಟ್ಟರೆ ಸಮಾಧಿಯು ಒದಗುತ್ತದೆ ಎಂದು ಅವರು ಎಲ್ಲಿಯೂ ಹೇಳಿಲ್ಲ. ವೃತ್ತಿ ನಿರೋಧದ ಪ್ರಕರಣದಲ್ಲಿ ಅವರು, **"ವೈರಾಗ್ಯದಭ್ಯಾಸಾಚ್ಚ"** (ಸಾಂಖ್ಯ ದರ್ಶನ 3-36) ಎಂದು ಹೇಳಿದ್ದಾರೆ. ಎಂದರೆ, ವೈರಾಗ್ಯ ಮತ್ತು ಅಭ್ಯಾಸದಿಂದ ವೃತ್ತಿಯ ನಿರೋಧವಾಗುತ್ತದೆ.

ಕಪಿಲಾಚಾರ್ಯರು ಪುನಃ ಹೇಳಿದ್ದಾರೆ: **"ಸೋಪದೇಶಶ್ರವಣೇಽಪಿಕೃತಕೃತ್ಯತಾ ಪರಾಮರ್ಶಾದೃತೇ ವಿರೋಚನ ವತ್"** (ಸಾಂಖ್ಯ ದರ್ಶನ 4-17)

ತಥಾ, **"ದೃಷ್ಟಸ್ತಯೋರಿಂದ್ರಸ್ಯ"** (ಸಾಂಖ್ಯ ದರ್ಶನ 4-18). ಇದರ ತಾತ್ಪರ್ಯವೇನೆಂದರೆ, ಮನನ ಮತ್ತು ನಿದಿಧ್ಯಾಸನ ಮಾಡದೆ, ಕೇವಲ ಉಪದೇಶಗಳನ್ನು ಶ್ರವಣಮಾಡಿದರೆ, ಏನೂ ಪ್ರಯೋಜನವಿಲ್ಲ. ದೃಷ್ಟಾಂತಕ್ಕೆ ಇತಿಹಾಸದಲ್ಲಿ ವಿರೋಚನದ ಕತೆಯಿದೆ. ವಿರೋಚನ ಮತ್ತು ಇಂದ್ರ, ಇವರಿಬ್ಬರೂ ತುಂಬಾ ಉಪದೇಶಗಳನ್ನು ಶ್ರವಣಮಾಡಿದ್ದರು. ಆದರೆ, ಇಂದ್ರನು ಮಾತ್ರ ಮನನ ಮತ್ತು ನಿದಿಧ್ಯಾಸನವನ್ನೂ ಮಾಡಿದ್ದನು. ವಿರೋಚನನು ಹಾಗೆ ಮಾಡಲಿಲ್ಲ. ಆದುದರಿಂದ, ಇಂದ್ರನಿಗೆ ಸಫಲತೆ ಸಿಕ್ಕಿತು, ವಿರೋಜನನಿಗೆ ಸಫಲತೆಯು ಸಿಗಲಿಲ್ಲ. ಈ ಎಲ್ಲಾ ಮಾತುಗಳಿಂದ ತಲೆಯಮೇಲೆ ಕೈಯಿಟ್ಟ ಮಾತ್ರಕ್ಕೆ ಸಮಾಧಿಯು ಸಿದ್ಧಿಸುತ್ತದೆ, ಎಂಬ ಮಾತು ನಿರಾಧಾರವೆಂದು ಸ್ಪಷ್ಟವಾಗುತ್ತದೆ. ಕೇವಲ ಉಪದೇಶ ಕೇಳಿದರೆ ಯಾರಿಗೂ ಏನೂ ಪ್ರಯೋಜನವಾಗುವುದಿಲ್ಲ.

**"ಪ್ರಣತಿಬ್ರಹ್ಮಚರ್ಯೋಪಸರ್ಪಣಾನಿಕೃತ್ವಾ ಸಿದ್ಧಿರ್ಬಹುಕಾಲಾತ್ ತದ್ವತ್"** (ಸಾಂ. ದ. 4-19). ಈ ಸೂತ್ರದಲ್ಲಿ ಸಮಾಧಿಗೆ ಅಗತ್ಯವಾಗಿ ಬೇಕಾಗಿರುವ ಕೆಲವು ಕರ್ಮಗಳ ವರ್ಣನೆಯಿದೆ. ಯಥಾ-ನಿರಭಿಮಾನತಾ (ವಿನಯಶೀಲತೆ), ಬ್ರಹ್ಮಚರ್ಯದ ಪಾಲನೆ, ಮತ್ತು ಉತ್ತಮ ಗುರುಗಳ ಸಂಗ, ಇವುಗಳ ಪಾಲನೆಮಾಡಿದರೆ, ಸಮಾಧಿಯು ಸಿದ್ಧಿಸುತ್ತದೆ. ನ್ಯಾಯ ದರ್ಶನಕಾರರಾದ ಗೌತಮ ಋಷಿಗಳು ಕೂಡಾ, ತಲೆಯ ಮೇಲೆ ಕೈಯಿಟ್ಟ ಮಾತ್ರಕ್ಕೆ ಸಮಾಧಿಯು ಸಿದ್ಧಿಸುತ್ತದೆ ಎಂದು ನಂಬುವ ಈ ಅಂಧಪರಂಪರೆಯನ್ನು ಒಪ್ಪಲಿಲ್ಲ. ಮೋಕ್ಷಪ್ರಾಪ್ತಿಯ ಉಪಾಯವನ್ನು ವಿವರಿಸುತ್ತಾ ಅವರು ಹೀಗೆಂದು ಹೇಳಿದ್ದಾರೆ: **"ತದರ್ಥಂ ಯಮನಿಯಮಾಭ್ಯಾಮಾತ್ಮಸಂಸ್ಕಾರೋ ಯೋಗಾಚ್ಚಾಧ್ಯಾತ್ಮವಿಧ್ಯುಪಾಯೈಃ"** (ನ್ಯಾಯ ದರ್ಶನ 4-2-46). ಅರ್ಥಾತ್, ಯಮನಿಯಮಗಳ ಅನುಷ್ಠಾನದಿಂದ ಆತ್ಮಶುದ್ಧಿ ಮತ್ತು ಯೋಗದರ್ಶನದಲ್ಲಿ ಹೇಳಿಕೊಟ್ಟ ಅನ್ಯ ಉಪಾಯಗಳನ್ನು ಅನುಸರಿಸಿಕೊಂಡು ಹೋದರೆ, ಅಪವರ್ಗ, ಎಂದರೆ ಮೋಕ್ಷ ಪ್ರಾಪ್ತಿಯಾಗಬಹುದು. ಮುಂದಿನ ಸೂತ್ರದಲ್ಲಿ ಪುನಃ, **"ಜ್ಞಾನಗ್ರಹಣಾಭ್ಯಾಸಸ್ತದ್ವಿದ್ಯೈಶ್ಚ ಸಹ ಸಂವಾದಃ"** (ನ್ಯಾಯ ದರ್ಶನ 4-2-47), ಅರ್ಥಾತ್, ಜ್ಞಾನ, ಎಂದರೆ ಆತ್ಮವಿದ್ಯಾಶಾಸ್ತ್ರದ ಅರಿವು, ಅದರ ಧಾರಣೆ, ಅದಕ್ಕನುಸಾರವಾಗಿ ನಡೆಯುವುದು, ಆತ್ಮಜ್ಞಾನಿಗಳೊಂದಿಗೆ ಚರ್ಚೆಯಲ್ಲಿ ಭಾಗವಹಿಸುವುದು, ಈ ಮೊದಲಾದ ಉಪಾಯಗಳಿಂದ ಮನುಷ್ಯನಿಗೆ ಸಮಾಧಿಯು ಸಿದ್ಧಿಸಿ ಮುಂದೆ ಅವನು ಮೋಕ್ಷಪ್ರಾಪ್ತಿಗೆ ಯೋಗ್ಯನಾಗುತ್ತಾನೆ.

ಮಹರ್ಷಿ ಮನು ಹೇಳಿರುತ್ತಾರೆ :

**ಸ್ವಾಧ್ಯಾಯೇನ ವ್ರತೈರ್ಹೋಮೈಸ್ತ್ರೈವಿದ್ಯೇನೇಜ್ಯಯಾಸುತೈಃ ।**
**ಮಹಾಯಜ್ಞೈಶ್ಚಯಜ್ಞೈಶ್ಚಬ್ರಾಹ್ಮೀಯಂ ಕ್ರಿಯತೇ ತನುಃ ॥**

(ಮನುಸ್ಮೃತಿ 2-18)

ಅರ್ಥಾತ್, ಸ್ವಾಧ್ಯಾಯ (ಸಕಲ ವಿದ್ಯೆಗಳನ್ನು ಕಲಿಯುವುದು ಮತ್ತು ಇತರರಿಗೆ ಕಲಿಸುವುದು), ವ್ರತ(ಬ್ರಹ್ಮಚರ್ಯ, ಸತ್ಯಭಾಷಣಾದಿ ನಿಯಮಗಳ ಪಾಲನೆ), ಹೋಮ (ಅಗ್ನಿಹೋತ್ರಾದಿ ಹೋಮ, ಸತ್ಯವನ್ನು ಸ್ವೀಕರಿಸುವುದು, ಅಸತ್ಯವನ್ನು ಬಿಟ್ಟುಬಿಡುವುದು, ಸತ್ಯವಿದ್ಯೆಯ ದಾನ), ತ್ರೈವಿದ್ಯೆ (ವೇದೋಕ್ತರೀತಿಯಲ್ಲಿ ಜ್ಞಾನ, ಕರ್ಮ ಮತ್ತು ಉಪಾಸನಾ), ಇಜ್ಯಾ (ಪಕ್ಷೇಷ್ಟ್ಯಾದಿ), ಸುತರು (ಸಂತಾನೋತ್ಪತ್ತಿ), ಮಹಾಯಜ್ಞ (ಅಗ್ನಿಷ್ಟೋಮಾದಿ ತಥಾ ಶಿಲ್ಪವಿದ್ಯಾ ವಿಜ್ಞಾನಾದಿ ಯಜ್ಞ) ಇತ್ಯಾದಿಗಳಿಂದ ಈ ಶರೀರವು ಬ್ರಾಹ್ಮೀ ಸ್ಥಿತಿಯನ್ನು ಹೊಂದುತ್ತದೆ, ಎಂದರೆ, ಇದು ವೇದಜ್ಞಾನ ಮತ್ತು ಪರಮೇಶ್ವರನ ಭಕ್ತಿಯ

ಆಧಾರರೂಪವಾಗಿ ಪರಿಣಮಿಸುತ್ತದೆ. ಇಷ್ಟೆಲ್ಲಾ ಮಾಡದೆ ಬ್ರಾಹ್ಮಣ ಶರೀರವು ನಿರ್ಮಾಣವಾಗುವುದಿಲ್ಲ. (ಸತ್ಯಾರ್ಥ ಪ್ರಕಾಶ, 3ನೇ ಸಮುಲ್ಲಾಸ).

ಕೇವಲ ವಿದ್ಯೆಯನ್ನು ಕೇಳಿದ ಮಾತ್ರಕ್ಕೇ ಅವಿದ್ಯೆಯು ದೂರವಾಗುವುದಿಲ್ಲ ಎಂದು ಋಷಿಗಳು ಹೇಳಿರುವಾಗ, ಕೇವಲ ತಲೆಯ ಮೇಲೆ ಕೈಯಿಟ್ಟುಬಿಟ್ಟರೆ ಅದರಿಂದ ಏನಾದರೂ ಪ್ರಯೋಜನವಾಗುತ್ತದೆ ಎಂಬ ಮಾತು ಎಷ್ಟು ನಿಜವಾಗಿರಬಹುದು? ಮಹರ್ಷಿ ಕಪಿಲರು ಹೇಳುತ್ತಿದ್ದಾರೆ : **"ನ ಶ್ರವಣಮಾತ್ರಾತ್ ತತ್ಸಿದ್ಧಿರನಾದಿವಾಸನಾಯಾ ಬಲವತ್ತ್ವಾತ್!"** (ಸಾಂಖ್ಯದರ್ಶನ 2-3). ಅರ್ಥಾತ್, ಭೋಗವಾಸನಾರೂಪೀ ಹಳೆಯ ಸಂಸ್ಕಾರವು ಅನಾದಿಕಾಲದಿಂದಲೂ ಮನುಷ್ಯರಿಗೆ ಅಂಟಿಕೊಂಡು ಬಂದಿರುವುದರಿಂದ ಪ್ರಕೃತಿಯ ದೋಷಗಳನ್ನು ಶ್ರವಣ ಮಾಡಿಕೊಂಡು ಬಂದ ಮಾತ್ರಕ್ಕೆ ಈ ದೋಷಗಳಿಂದ ಮುಕ್ತನಾಗಿ ಮನುಷ್ಯನು ಮೋಕ್ಷವನ್ನು ಪಡೆಯುವುದಿಲ್ಲ. ಆದುದರಿಂದ, ಯಾರು ತಮ್ಮ ಶಿಷ್ಯರಿಗೆ, ತಮ್ಮ ಗುರುಗಳ ಕೃಪೆಯಿಂದ ಅಥವಾ ಮನೋಬಲದಿಂದ, ಇವರು ತಮ್ಮ ಆಹಾರ, ಆಚಾರ ವಿಚಾರಗಳನ್ನು ಸುಧಾರಿಸಿಕೊಳ್ಳದೆ ಇದ್ದರೂ ಕೂಡ ಸಮಾಧಿಯನ್ನು ಸಿದ್ಧಿಸಿಕೊಡುವ ಮಾತನ್ನಾಡುತ್ತಾರೆಯೋ, ಅವರ ಮಾತುಗಳು ಮನು ಮೊದಲಾದ ಋಷಿ ಮುನಿಗಳ ಉಪದೇಶಕ್ಕೆ ವಿರುದ್ಧವಾಗಿವೆ. ಇಂತಹ ಸ್ವಕಲ್ಪಿತ ವಿಚಾರಗಳು ತುಂಬಾ ಹಾನಿಕಾರಕವಾಗಿವೆ. ಎಂದಿನಿಂದ ಇಂತಹ ವಿಚಾರಗಳ ಪ್ರಚಾರ ಪ್ರಾರಂಭವಾಯಿತೋ, ಅಂದಿನಿಂದ ಅನೇಕ ಮಂದಿ ಅಜ್ಞಾನಿಗಳೂ ಆಚಾರಹೀನರೂ ಮತ್ತು ಸ್ವಾರ್ಥಿಗಳೂ ತಮ್ಮನ್ನು ತಾವೇ ಯೋಗಿಗಳೆಂದು ಹೇಳಿಕೊಂಡು ಬರುವುದಕ್ಕೆ ಪ್ರಾರಂಭಿಸಿದ್ದಾರೆ. ಇದರ ಪರಿಣಾಮವಾಗಿ, ಒಂದು ಕಡೆಯಲ್ಲಿ ಜನರಿಗೆ ಯೋಗಗಳ ಮೇಲೆ ಇದ್ದ ಶ್ರದ್ಧೆಯು ಕಡಿಮೆಯಾಗುತ್ತಾ ಬರುತ್ತಿದೆ. ಇಂತಹ ತಥಾಕಥಿತ ಯೋಗಿಗಳು ಹೇಳಿಕೊಟ್ಟ ಉಪಾಯಗಳನ್ನು ಜನರು ಈಗ ಬಿಟ್ಟುಬಿಡುತ್ತಿದ್ದಾರೆ. ಇನ್ನೊಂದು ಕಡೆಯಲ್ಲಿ, ತುಂಬಾ ಮಂದಿ ಅಂಧಶ್ರದ್ಧೆಯಿಂದ ಮೂರ್ಖರೂ, ಸ್ವಾರ್ಥಿಗಳೂ, ಮೋಸಗಾರರೂ, ಕಪಟಿಗಳೂ ಆಗಿರುವ ಮನುಷ್ಯರನ್ನು ಯೋಗಿಗಳು ಎಂದು ನಂಬಿ ಅವರ ಪೂಜೆಯನ್ನು ಮಾಡುತ್ತಿದ್ದಾರೆ.

ಒಂದು ದಿನ ದಿಲ್ಲಿಯ ಘಂಟಾಘರದ ಸಮೀಪದಲ್ಲಿ, ಒಬ್ಬ ವಸ್ತ್ರಹೀನ, ಬೆತ್ತಲೆಯಾಗಿದ್ದ ವ್ಯಕ್ತಿಯು ಮಾರ್ಗದಲ್ಲಿ ಹೋಗುತ್ತಿದ್ದ. ಅವನ ಸುತ್ತಲೂ ಅನೇಕ ಮಂದಿ ವಿದ್ಯಾವಂತರು ಅವನ ಸೇವೆಯಲ್ಲಿದ್ದರು. ಅವನು ಯಾರು ಎಂದು ಕೇಳಿದಾಗ, ಅವನು ಒಬ್ಬ ಪೂರ್ಣಯೋಗಿಯಾಗಿರಬೇಕೆಂದು ಉತ್ತರ ಸಿಕ್ಕಿತು. ಆ ವ್ಯಕ್ತಿಯು ಪೂರ್ಣಜ್ಞಾನಿ ಮತ್ತು ಪವಿತ್ರಾತ್ಮನು ಎಂದೂ ಕೆಲವರು ಹೇಳಿದರು. ಅವನ

ಕೃಪಾದೃಷ್ಟಿಯು ಯಾರ ಮೇಲೆ ಬೀಳುತ್ತದೆಯೋ, ಅವನ ಕಲ್ಯಾಣವಾಗುತ್ತದೆ, ಎಂದು ಜನರ ನಂಬಿಕೆಯಾಗಿತ್ತು. ಈ ಅಂಧ ವಿಶ್ವಾಸಿಗಳ ದೃಷ್ಟಿಯಲ್ಲಿ, ಯಾರು ಬೆತ್ತಲೆಯಾಗಿರುತ್ತಾನೆಯೋ ಅವನೇ ಪೂರ್ಣ ಸಿದ್ಧಪುರುಷನಾಗಿದ್ದಾನೆ. ಈ ರೀತಿ, ತಮ್ಮ ಅಜ್ಞಾನದಿಂದಾಗಿ ತುಂಬಾ ಮಂದಿ ಜನರು ಅಯೋಗ್ಯ ವ್ಯಕ್ತಿಗಳಿಗೆ ತನು, ಮನ ಮತ್ತು ಧನಗಳಿಂದ ಪ್ರೋತ್ಸಾಹ ಕೊಡುತ್ತಿದ್ದಾರೆ. ಆದುದರಿಂದ, ಇಂಥ ಅಂಧ ಪರಂಪರೆಗಳು ನಡೆಯುತ್ತಾ ಬಂದಿವೆ. ಈ ಕಾರಣದಿಂದಲೇ ಪ್ರಪಂಚದಲ್ಲಿ ಮಾನವ ಜಾತಿಯ ಅಧಃಪತನವೂ ಆಗುತ್ತಾ ಬರುತ್ತಿದೆ.

**ಪ್ರಶ್ನೆ :—** ತಮಗೆ ಗುರು ಪರಂಪರೆಯ ಮೇಲೆ ವಿಶ್ವಾಸವಿಲ್ಲವೇ?

**ಉತ್ತರ:—** ನನಗೆ ನಿಜವಾದ ಗುರುಪರಂಪರೆಯ ಮೇಲೆ ವಿಶ್ವಾಸವು ಇದೆ. ಅಂಧ ಪರಂಪರೆಯ ಮೇಲೆ ನನಗೆ ವಿಶ್ವಾಸವು ಇಲ್ಲ. ವೇದಗಳನ್ನು ಅಧ್ಯಯನ ಮಾಡುವವರೂ ಹಾಗೂ ವೇದಗಳನ್ನು ಕಲಿಸುವವರು, ಯಮ-ನಿಯಮಗಳ ಪಾಲನೆ ಮಾಡುವವರು, ಸತ್ಯವಾದಿಗಳು, ಪಕ್ಷಪಾತ ರಹಿತರೂ, ಪರಮಾತ್ಮನನ್ನು ಗುರುಗಳ ಗುರು ಎಂದು ನಂಬುವವರನ್ನು ನಾನು ಗುರುಗಳೆಂದು ನಂಬುತ್ತೇನೆ. ಯಾರು ಜನರ ತಲೆಯ ಮೇಲೆ ಕೈಯಿಟ್ಟು, ತಾವು ಅವರಿಗೆ ಸಮಾಧಿಯನ್ನು ಸಿದ್ಧಿಸುತ್ತೇವೆ, ಎಂದು ಹೇಳುತ್ತಾರೆಯೋ, ವೇದಗಳ ಅಧ್ಯಯನ ಮತ್ತು ಅಧ್ಯಾಪನ ಮಾಡುವವರನ್ನು ಖಂಡನೆ ಮಾಡುತ್ತಾರೆಯೋ, ಯಾರು ಯೋಗದ ಸಫಲತೆಗೆ ಯಮ-ನಿಯಮಾದಿಗಳ ಪಾಲನೆ ಮತ್ತು ವೈರಾಗ್ಯವು ಅಗತ್ಯವಿಲ್ಲ ಎಂದು ಹೇಳುತ್ತಾರೆಯೋ, ಯಾರು ದೇವರ ಸ್ಥಾನಕ್ಕಿಂತಲೂ ಗುರುಗಳ ಸ್ಥಾನ ದೊಡ್ಡದೆಂದು ಹೇಳುತ್ತಾರೆಯೋ, ಮತ್ತು ಯಾರು ಜನರಿಗೆ ಪರಮಾತ್ಮನ ಉಪಾಸನೆಯನ್ನು ಮಾಡುವುದು ಹೇಗೆಂಬುದನ್ನು ಕಲಿಸುವುದರ ಬದಲಿಗೆ, ಜನರಿಂದ ದೇವರ ಸ್ಥಾನದಲ್ಲಿ ತಮ್ಮ ಪೂಜೆಯನ್ನು ಮಾಡಿಸಿಕೊಂಡು ಬರುತ್ತಾರೆಯೋ, ಅವರನ್ನು ನಾನು ಗುರುಗಳೆಂದು ಒಪ್ಪುವುದಿಲ್ಲ! ಇಂತಹ ಜನರನ್ನು ಗುರುಗಳೆಂದು ನಂಬುವುದರಿಂದ ತಮ್ಮ ಕಾಲಿಗೆ ತಾವೇ ಕುಠಾರಘಾತವನ್ನು ಮಾಡಿದ ಹಾಗಾಗುತ್ತದೆ.

**ಪ್ರಶ್ನೆ :—** ಒಬ್ಬ ಅಜ್ಞಾನಿ ಮತ್ತು ಅಧಾರ್ಮಿಕ ವ್ಯಕ್ತಿಯ ತಲೆಯಮೇಲೆ ಒಬ್ಬ ನಿಜವಾದ ಯೋಗಿಯೂ ಕೂಡ ಕೈಯಿಟ್ಟು ಅಥವಾ ತನ್ನ ಮನೋಬಲದಿಂದ ಸಮಾಧಿಯನ್ನು ಲಭಿಸುವಂತೆ ಮಾಡಲು ಸಾಧ್ಯವಿಲ್ಲವೇ?

**ಉತ್ತರ:-** ಎಂದಿಗೂ ಸಾಧ್ಯವಿಲ್ಲ. ಯಾಕೆಂದರೆ, ಒಬ್ಬ ನಿಜವಾದ ಯೋಗಿಯು ಇನ್ನೊಬ್ಬ ಇಂತಹ ವ್ಯಕ್ತಿಯ ತಲೆಯ ಮೇಲೆ ಕೈಯಿಟ್ಟು ಅಥವಾ ತನ್ನ ಮನೋಬಲದಿಂದ ಅವನಿಗೆ ಸಮಾಧಿಯನ್ನು ಲಭಿಸಬಹುದು ಎಂಬ ಮಾತನ್ನು ಯೋಗ ಶಾಸ್ತ್ರಜ್ಞರು ಒಂದು ವೇಳೆ ಒಪ್ಪುತ್ತಿದ್ದರೆ, ಕಪಿಲಾಚಾರ್ಯರು **"ನ ಮಲಿನಚೇತಸ್ಯುಪದೇಶಬೀಜಪ್ರರೋಹೋಽಜವತ್"** (ಸಾಂಖ್ಯದರ್ಶನ 4-29) ಎಂದು ಹೇಳುತ್ತಿದ್ದಿಲ್ಲ. ಈ ಸೂತ್ರದ ಅಭಿಪ್ರಾಯ — ಮಲಿನ ಚಿತ್ತದ ಮೇಲೆ ಉಪದೇಶರೂಪೀ ಬೀಜವು ಅಂಕುರಿಸುವುದಿಲ್ಲ, ಎಂದಾಗಿದೆ. ಇತಿಹಾಸದಲ್ಲಿ ಇದಕ್ಕೆ ಅಜನೆಂಬ ರಾಜನ ಉದಾಹರಣೆ ಇದೆ. ಯಾವ ರೀತಿಯಲ್ಲಿ ಮಲಿನವಾದ ಕನ್ನಡಿಯಲ್ಲಿ ನಮಗೆ ನಮ್ಮ ಪ್ರತಿಬಿಂಬವು ಸರಿಯಾಗಿ ಕಾಣುವುದಿಲ್ಲವೋ, ಅದೇ ರೀತಿಯಲ್ಲಿ ಅಜ್ಞಾನ, ರಾಗ ದ್ವೇಷಾದಿಗಳಿಂದ ಯುಕ್ತವಾದ ಮನಸ್ಸಿನಲ್ಲಿ ಧರ್ಮೋಪದೇಶದ ಆಭಾಸವು ಸ್ವಲ್ಪವಾದರೂ ಕಾಣುವುದಿಲ್ಲ. ಹೀಗಿರುವಾಗ, ಮನೋಬಲದಿಂದ ಮತ್ತು ತಲೆಯಮೇಲೆ ಕೈಯಿಟ್ಟ ಮಾತ್ರಕ್ಕೆ ಇನ್ನೊಬ್ಬರಿಗೆ ಸಮಾಧಿಯು ಸಿದ್ಧಿಸುವಂತೆ ಮಾಡಬಹುದೆಂಬ ಮಾತಿನಲ್ಲಿ ಏನೂ ತಿರುಳಿಲ್ಲ. ಅಯೋಗ್ಯರಿಗೆ ಶಾಸ್ತ್ರೋಪದೇಶ ಕೊಟ್ಟರೂ ಕೂಡ ಏನೂ ಪ್ರಯೋಜನವಿಲ್ಲ, ಕೇವಲ ಶಾಸ್ತ್ರೋಪದೇಶ ಕೇಳಿ ಅಯೋಗ್ಯರಲ್ಲಿ ಸಮಾಧಿಯನ್ನು ಸಿದ್ಧಿಸಿಕೊಳ್ಳುವ ಯೋಗ್ಯತೆಯು ಬರುವುದಿಲ್ಲ, ಎಂದು ಕಪಿಲಾಚಾರ್ಯರ ಸ್ಪಷ್ಟ ಮತವಾಗಿದೆ. ಇಲ್ಲದಿದ್ದರೆ, ಒಬ್ಬ ಯೋಗಿಯು ಯಾರ ತಲೆಯಮೇಲಾದರೂ ಕೈಯಿಟ್ಟರೆ ಅವರಿಗೆ ಸಮಾಧಿಯು ಲಭಿಸುತ್ತದೆ ಎಂದೇ ಇವರು ಹೇಳುತ್ತಿದ್ದರು. ಕೋಟಿಗಟ್ಟಲೆ ಜನರ ತಲೆಯಮೇಲೆ ಕೈಯಿಟ್ಟು ಅವರಿಗೆ ಸಮಾಧಿಯು ಲಭಿಸುವಂತೆ ಮಾಡಿ, ತುಂಬಾ ಲೋಕೋಪಕಾರದ ಪುಣ್ಯವನ್ನು ಇವರು ಪಡೆಯುತ್ತಿದ್ದರು; ಶಾಸ್ತ್ರವನ್ನು ರಚಿಸುವ ಆವಶ್ಯಕತೆಯೂ ಇವರಿಗೆ ಬೀಳುತ್ತಿದ್ದಿಲ್ಲ.

ಮಹಾಭಾರತದ ಕಾಲದಲ್ಲಿದ್ದ ಮಹರ್ಷಿ ವ್ಯಾಸರು ಒಬ್ಬ ದೊಡ್ಡ ಯೋಗಿಗಳಾಗಿದ್ದರು. ಭಗವಾನ್ ಶ್ರೀಕೃಷ್ಣನನ್ನು ಕೂಡ ಯೋಗಿರಾಜರೆಂದು ಆ ಕಾಲದಲ್ಲಿಯೇ ಜನರು ಒಪ್ಪಿಕೊಂಡಿದ್ದರು. ಈ ಮಾತನ್ನು ಮಹರ್ಷಿ ದಯಾನಂದರೂ ಮಾನ್ಯಮಾಡಿದ್ದಾರೆ. ಹೀಗಿರುವಾಗ, ಇಂತಹ ಮಹಾಪುರುಷರು ದುರ್ಯೋಧನನ ತಲೆಯ ಮೇಲೆ ಕೈಯಿಟ್ಟು ಅಥವಾ ತಮ್ಮ ಮನೋಬಲದಿಂದ ಅವನ ಅಜ್ಞಾನವನ್ನು ದೂರಮಾಡಿ, ಮಹಾಭಾರತದ ಭೀಕರ ಯುದ್ಧದ ಪರಿಣಾಮವಾಗಿ ಸಂಭವಿಸಿದ ಆರ್ಯಾವರ್ತದ ವಿನಾಶವನ್ನು ತಪ್ಪಿಸಬಹುದಿತ್ತಲ್ಲವೇ? ಮಹರ್ಷಿ ದಯಾನಂದರೂ

ಒಬ್ಬ ದೊಡ್ಡ ಯೋಗಿಗಳಾಗಿದ್ದರು. ಪ್ರಪಂಚದಲ್ಲಿ ತುಂಬಾ ಮಂದಿ ಜನರನ್ನು ಯೋಗಿಗಳನ್ನಾಗಿ ಮಾಡಬೇಕು ಮತ್ತು ಇವರ ಮೂಲಕ ಜಗತ್ತಿನ ಅಜ್ಞಾನ ಮತ್ತು ಅಧರ್ಮವನ್ನು ದೂರಮಾಡಬೇಕು ಎಂದು ಅವರ ಪ್ರಬಲ ಇಚ್ಛೆಯಾಗಿತ್ತು. ಆದುದರಿಂದ, ಒಂದು ವೇಳೆ ತಲೆಯ ಮೇಲೆ ಕೈಯಿಟ್ಟು ಅಥವಾ ಮನೋಬಲದಿಂದ ಇನ್ನೊಬ್ಬರಿಗೆ ಸಮಾಧಿಯನ್ನು ಒದಗಿಸುವುದು ಸಂಭವ ಎಂದಾಗಿದ್ದರೆ, ಮಹರ್ಷಿ ದಯಾನಂದರು ಖಂಡಿತವಾಗಿಯೂ ಇಂತಹ ಪದ್ಧತಿಯನ್ನು ಪ್ರಯೋಗ ಮಾಡುತ್ತಿದ್ದರು. ಇದರ ಫಲವಾಗಿ ಈಗ ನಾವು ನೋಡುತ್ತಿರುವ ಮತ್ತು ದಿನೇ ದಿನೇ ಹೆಚ್ಚುತ್ತಿರುವ ಅವಿದ್ಯೆ ಮತ್ತು ಅನ್ಯಾಯದ ವಾತಾವರಣವು ನಿರ್ಮಾಣವಾಗುತ್ತಿರಲಿಲ್ಲ. ಎಲ್ಲರೂ ಸುರಕ್ಷಿತರಾಗುತ್ತಿದ್ದರು. ಧರ್ಮ ಮತ್ತು ವಿದ್ಯೆಯು ವೃದ್ಧಿಯಾಗುತ್ತಿತ್ತು. ನಿಜವಾದ ಯೋಗಿಗಳ ಸಂಖ್ಯೆಯೂ ಹೆಚ್ಚುತ್ತಿತ್ತು. ನಿಜವಾದ ಯೋಗಿಗಳ ಸಂಖ್ಯೆಯು ಈಗ ಬಹಳ ಕಡಿಮೆ ಇರುವುದರಿಂದಲೇ ಪ್ರಪಂಚದಲ್ಲಿ ಮನುಷ್ಯರೂ ಇತರ ಅನೇಕ ಪ್ರಾಣಿಗಳೂ ದುಃಖಸಾಗರದಲ್ಲಿ ಮುಳುಗಿರುವುದನ್ನು ನಾವು ನೋಡುತ್ತಿದ್ದೇವೆ.

ಆಚಾರ್ಯಯಾಸ್ಕರು (ಋಷಿಗಳ ವಿಚಾರವನ್ನು ಈ ರೀತಿ) ಹೇಳುತ್ತಾರೆ:

**"ವಿದ್ಯಾಹವೈ ಬ್ರಾಹ್ಮಣಮಾಜಗಾಮ ಗೋಪಾಯಮಾ ಶೇವಧಿಷ್ಟೇಹಮಸ್ಮಿ।**
**ಅಸೂಯಕಾಯಾನೃಜವೇಽಯತಾಯ ನ ಮಾ ಬ್ರೂಯಾ ವೀರ್ಯವತೀ**
**ತಥಾ ಸ್ಯಾಮ್॥**

**ಯಮೇವ ವಿದ್ಯಾಃ ಶುಚಿಮಪ್ರಮತ್ತಂ ಮೇಧಾವಿನಂ ಬ್ರಹ್ಮಚರ್ಯೋಪಪನ್ನಂ।**
**ಯಸ್ತೇನ ದ್ರುಹ್ಯೇತ್ಕತಮಚ್ಚನಾಹ ತಸ್ಮೈ ಮಾ ಬ್ರೂಯಾ ನಿಧಿಪಾಯ**
**ಬ್ರಹ್ಮನ್ ॥"**

(ನಿರುಕ್ತ, ಅಧ್ಯಾಯ 2 ಪಾದ 1)

ಇಲ್ಲಿ, ಕಥಾರೂಪದಲ್ಲಿ, ಒಂದು ಮಹತ್ವಪೂರ್ಣವಾದ ಮಾತನ್ನು ತಿಳಿಸಿದ್ದಾರೆ. ಒಂದು ಬಾರಿ ವಿದ್ಯೆಯು ಬ್ರಾಹ್ಮಣನ ಬಳಿಗೆ ಹೋಗಿ ಈ ರೀತಿ ಪ್ರಾರ್ಥನೆ ಮಾಡಿಕೊಂಡಳು: "ಎಲೈ ಬ್ರಾಹ್ಮಣನೇ ! ನೀನು ನನ್ನ ರಕ್ಷಣೆಯನ್ನು ಮಾಡು. ನಾನು ಸಾಮರ್ಥ್ಯವಂತಳಾಗಿ (ಪ್ರಭಾಶಾಲಿಯಾಗಿ) ಇರಬೇಕಾಗಿದೆ. ಅದಕ್ಕೋಸ್ಕರ, ನೀನು ನಿಂದಕನೂ, ಅಭಿಮಾನಿಯೂ, ಸಂಯಮ ಇಲ್ಲದವನೂ ಆದ ವ್ಯಕ್ತಿಗೆ ನನ್ನನ್ನು ಕೊಡಬೇಡ. ಯಾವ ವ್ಯಕ್ತಿಯು ಪವಿತ್ರನೂ, ಪುರುಷಾರ್ಥಿಯೂ, ಬುದ್ಧಿವಂತನೂ, ಬ್ರಹ್ಮಚರ್ಯದ ಪಾಲನೆಯನ್ನು

ಮಾಡುವವನೂ ಅಂತಹ ವ್ಯಕ್ತಿಗೆ ಮಾತ್ರ ನನ್ನನ್ನು ಕೊಡು. ನಾನು ನಿನ್ನ ನಿಧಿಯಾಗಿದ್ದೇನೆ. ಈ ನಿಧಿಯನ್ನು ರಕ್ಷಣ ಮಾಡಲಿಕ್ಕೆ ಸಮರ್ಥನಾಗಿರುವ ಇಂತಹ ಯೋಗ್ಯವಕ್ತಿಯ ಬಳಿಯಲ್ಲಿಯೇ ನಾನು ಬೆಳೆಯಲು ಸಾಧ್ಯವಿದೆ.

ಇದರ ತಾತ್ಪರ್ಯವೇನೆಂದರೆ, ಅಯೋಗ್ಯ ವ್ಯಕ್ತಿಗೆ ವಿದ್ಯಾದಾನವನ್ನು ಮಾಡಿ ಪ್ರಯೋಜನವಿಲ್ಲ. (ಅವನು ವಿದ್ಯೆಯ ದುರುಪಯೋಗವನ್ನು ಮಾಡಬಹುದು ಅಥವಾ ಅಧ್ಯಾಪಕನ ಅಮೂಲ್ಯ ಸಮಯವನ್ನು ಹಾಳು ಮಾಡಬಹುದು). ಆದುದರಿಂದ, ಗುರುಗಳು ತಲೆಯ ಮೇಲೆ ಕೈಯಿಟ್ಟು ಸಮಾಧಿಯನ್ನು ಲಭಿಸುವ ಕಾರ್ಯವನ್ನು ಮಾಡಬಹುದೆಂಬ ಮಾತು ನಮ್ಮ ಪ್ರಾಚೀನ ಋಷಿ ಮುನಿಗಳಿಗೆ ಸರಿಯೆಂದು ತೋರುತ್ತಿದ್ದರೆ, ಯಾಸ್ಕರು ಈ ರೀತಿ ವಿದ್ಯೆಗೆ ಪಾತ್ರರು ಮತ್ತು ಅಪಾತ್ರರು ಯಾರೆಂಬ ವಿಷಯವನ್ನು ಚರ್ಚಿಸುತ್ತಿರಲಿಲ್ಲ. ಆದುದರಿಂದ, ತಲೆಯ ಮೇಲೆ ಕೈಯಿಟ್ಟು ಅಥವ ತನ್ನ ಮನೋಬಲದಿಂದ ಯೋಗಿಗಳು ಇತರ ಜನರಿಗೆ ಸಮಾಧಿಯನ್ನು ಪ್ರಾಪ್ತಿಮಾಡಿಸುತ್ತಾರೆ ಎಂಬುದು ಖಂಡಿತವಾಗಿಯೂ ಒಂದು ದೊಡ್ಡಸುಳ್ಳು ಮತ್ತು ಅಂಧ ಪರಂಪರೆಯಾಗಿದೆ.

**ಪ್ರಶ್ನೆ** :— ಈ ಅಂಧ ಪರಂಪರೆಯು ಬೆಳೆಯುವುದಕ್ಕೆ ಕಾರಣವೇನು?

**ಉತ್ತರ**:— ಇದಕ್ಕೆ ಕಾರಣಗಳು ಅನೇಕವಿವೆ. ಕೆಲವು ಕಾರಣಗಳು ಹೀಗಿವೆ:

ಪಾಖಂಡಿ ಗುರುಗಳು ತಮ್ಮ ಶಿಷ್ಯರಿಗೆ ಹೀಗೆಂದು ಹೇಳಿಕೊಡುತ್ತಾರೆ:— ನೋಡಪ್ಪಾ, ನಾನು ನಿನ್ನ ತಲೆಯ ಮೇಲೆ ಕೈಯಿಡುತ್ತೇನೆ. ನೀನು ಜನರ ಮುಂದೆ ಹೇಳಬೇಕು : "ಗುರುಗಳ ಕೃಪೆಯಿಂದ ನನಗೆ ಸಮಾಧಿಯು ಲಭಿಸುತ್ತದೆ," ಎಂದು. ಕೆಲವು ಜನರು (ಅವಿವೇಕಿಗಳು) ಇದನ್ನು ನೋಡಿ ಸತ್ಯವೆಂದು ನಂಬುತ್ತಾರೆ. ಮತ್ತು ಆ ಗುರುಗಳ ಕೈಯನ್ನು ತಮ್ಮ ತಲೆಯಮೇಲೆ ಇಡಿಸುತ್ತಾರೆ. ಗುರುಗಳು ಆಗ ಕೇಳುತ್ತಾರೆ : "ಏನಪ್ಪಾ, ನಿನಗೆ ಸಮಾಧಿಯು ಲಭಿಸಿತೆ?" ಎಂದು. ಆಗ ಶಿಷ್ಯನು ವಿಚಾರ ಮಾಡುತ್ತಾನೆ, ತನಗಂತೂ ಸಮಾಧಿಯು ಲಭಿಸಲಿಲ್ಲ. ಆದರೆ ಎಲ್ಲರ ಮುಂದೆ ನಿಜ ಹೇಳಿದರೆ ಗುರುಗಳು ಬೇಸರ ಪಟ್ಟುಕೊಳ್ಳಬಹುದು. ಮತ್ತು ತನ್ನನ್ನು ಅಯೋಗ್ಯನೆಂದೂ ತಮ್ಮ ಇತರ ಶಿಷ್ಯರ ಮುಂದೆ ಹೇಳಬಹುದು. ಆದುದರಿಂದ, ತನಗೆ ಗುರುಗಳ ಕೃಪೆಯಿಂದ ಸಮಾಧಿಯು ಲಭಿಸಿತು ಎಂದು ಹೇಳುವುದೇ ಲೇಸು ಎಂದು ಭಾವಿಸಿ, ಆತ ಹಾಗೆಯೇ ಹೇಳುತ್ತಾನೆ.

ಇದಕ್ಕೆ ಇನ್ನೊಂದು ದೃಷ್ಟಾಂತ ಕೊಡುತ್ತೇನೆ. ಒಬ್ಬ ವ್ಯಕ್ತಿಯ ಮೂಗು ಕತ್ತರಿಸಿ ಹೋಗಿತ್ತು. ಆದುದರಿಂದ ಆತ ಕುರೂಪನಾಗಿ ಕಾಣುತ್ತಿದ್ದ. ಇದರಿಂದ

ಆತನಿಗೆ ಮನಸ್ಸಿನಲ್ಲಿ ತುಂಬಾ ನೋವಾಗುತ್ತಿತ್ತು. ಒಂದು ದಿನ ಆತ ತನ್ನ ಮನಸ್ಸಿನಲ್ಲಿ ಯೋಚನೆ ಮಾಡಿದ. ತಾನೊಬ್ಬನೇ ತನ್ನ ಊರಿನಲ್ಲಿ ಮೂಗಿಲ್ಲದವನಾಗಿರುವ ತನಕ, ನನ್ನ ಸ್ಥಿತಿ ಇದೇ ರೀತಿ ಇರುತ್ತದೆ. ಎಲ್ಲರೂ ನನ್ನನ್ನು ಅಸಹ್ಯ ದೃಷ್ಟಿಯಿಂದ ನೋಡುತ್ತಾರೆ. ಆದರೆ ಈ ಊರಿನಲ್ಲಿ ಎಲ್ಲರೂ ತನ್ನಂತೆಯೇ ಮೂಗನ್ನು ಕಳೆದುಕೊಂಡವರೇ ಆಗಿ ಹೋದರೆ, ತನ್ನ ಈ ಮಾನಸಿಕ ವೇದನೆ ಹೋಗಿ ಬಿಡುತ್ತದೆ. ಇದು ಹೇಗೆ ಸಾಧ್ಯ? ಹೀಗೆಂದು ಯೋಚಿಸಿದಾಗ ಆತನಿಗೆ ಒಂದು ಉಪಾಯವು ಹೊಳೆಯಿತು. ಅದರಂತೆ ಆತ ಜನರ ಮುಂದೆ ಹೇಳಲಾರಂಬಿಸಿದ, ತನಗೆ ದೇವರ ದರ್ಶನವಾಗುತ್ತದೆ, ಯಾರು ತನ್ನಂತೆ ಮೂಗನ್ನು ಕತ್ತರಿಸಿಕೊಳ್ಳುತ್ತಾರೋ, ಅವರಿಗೆ ನನ್ನ ಹಾಗೆಯೇ ದೇವರ ದರ್ಶನವಾಗುತ್ತದೆ, ಎಂದು. ದೇವರ ದರ್ಶನದ ಆಸೆಯಿಂದ ಅನೇಕ ಜನರು ತಮ್ಮ ಮೂಗನ್ನು ಕಳೆದುಕೊಂಡನಂತರ, ಆ ಮೂಗಿಲ್ಲದವನು ಇವರ ಕಿವಿಯಲ್ಲಿ ಹೇಳಿದ : "ನೋಡಪ್ಪಾ, ನಿನ್ನ ಮೂಗಂತೂ ಕಳೆದು ಹೋಯಿತು ಅದು ಇನ್ನು ಬರುವುದಿಲ್ಲ. ಆದುದರಿಂದ, ನೀನು ನಿನಗೆ ದೇವರ ದರ್ಶನ ಆಗುತ್ತಿದೆ ಎಂದು ಹೇಳುತ್ತಾ ಹೋಗು." ಈ ರೀತಿ ಆ ಊರಿನಲ್ಲಿ ಮೂಗಿಲ್ಲದವರ ಒಂದು ಸಮುದಾಯವೇ ಬೆಳೆಯಿತು. ಇದೇ ರೀತಿಯಲ್ಲಿ ಈ ಕಪಟಿ ಗುರುಗಳು ಮೂರ್ಖರ ಒಂದು ಗುಂಪನ್ನು ತಯಾರಿಸಿ, ಅದರ ಮುಖಾಂತರ "ಗುರುಗಳ ಕೃಪೆಯಿಂದ ಸಮಾಧಿಯು ಲಭಿಸುತ್ತದೆ" ಎಂಬ ಮಾತನ್ನು ಪ್ರಚಾರಮಾಡುತ್ತಾರೆ. ಮುಂದೆ ತಮ್ಮ ಗುರುಗಳು ಹಾಗೆಯೇ ತಾವೂ ತಮ್ಮ ಶಿಷ್ಯವೃಂದವನ್ನು ತಯಾರಿಸಿ ಅದರಿಂದ ತಮ್ಮ ಪೂಜೆಯನ್ನು ಮಾಡಿಸಿಕೊಳ್ಳುತ್ತಾರೆ.

ಈ ಭ್ರಾಂತಿಯ ಪ್ರಚಾರವಾಗುವುದಕ್ಕೆ ಇನ್ನೂ ಒಂದು ಕಾರಣವಿದೆ. ಕೆಲವು ಜನರು, ಋಷಿಗಳ ಸಮಾಧಿಯ ಪದ್ಧತಿಯು ಬಹಳ ಕಠಿಣವಾಗಿದೆಯೆಂದೂ, ತಾವು ಯೋಗಸಿದ್ಧಿಯ ಒಂದು ಹೊಸ ಪದ್ಧತಿಯನ್ನು ಕಂಡು ಹುಡುಕಿದ್ದೇವೆಯೆಂದೂ, ಮತ್ತು ಈ ಪದ್ಧತಿಯಲ್ಲಿ ಯಮ-ನಿಯಮಗಳ ಪಾಲನೆಯ ಆವಶ್ಯಕತೆ ಇಲ್ಲವೆಂದೂ, ಪ್ರಚಾರ ಮಾಡುತ್ತಿದ್ದಾರೆ. ಈ ಪದ್ಧತಿಗನುಸಾರವಾಗಿ, ಜನರು ಬೇಕಾದರೆ ಶರಾಬು ಕುಡಿಯಬಹುದು, ಮಾಂಸವನ್ನು ತಿನ್ನಬಹುದು, ಸುಳ್ಳು ಹೇಳಬಹುದು, ಸದಾಚಾರದ ಪಾಲನೆಯು ಬೇಕಾಗಿಲ್ಲ, ಯಾರು ಏನು ಬೇಕಾದರೂ ಮಾಡಬಹುದು, ಬೇಕಾದಷ್ಟು ಕುಕರ್ಮ ಮಾಡಬಹುದು, ಇವರಿಗೆಲ್ಲಾ ಸಮಾಧಿಯು ಸಿದ್ಧಿಸುತ್ತದೆ, ಎಂದು.

ನಾವು ಪಕ್ಷಪಾತರಹಿತವಾದ ದೃಷ್ಟಿಯಿಂದ ನೋಡಿದರೆ ಋಷಿಗಳ ಪದ್ಧತಿಯೇ ಸರಿ, ನವೀನ ಪದ್ಧತಿಗಳೆಲ್ಲಾ ಸರಿಯಲ್ಲ ಎಂಬುದು ನಮಗೆ ಸ್ಪಷ್ಟವಾಗುತ್ತದೆ.

**"ಅರ್ಥಕಾಮೇಷ್ವಸಕ್ತಾನಾಂ ಧರ್ಮಜ್ಞಾನಂ ವಿಧೀಯತೇ"** (ಮನುಸ್ಮೃತಿ 2-13) ಎಂದು ಮಹರ್ಷಿ ಮನು ಹೇಳಿದ್ದಾರೆ. ಯಾರು ಧನಸಂಪತ್ತು ಮತ್ತು ಇಂದ್ರಿಯಗಳ ಭೋಗಗಳಲ್ಲಿ ಆಸಕ್ತರಾಗಿರುತ್ತಾರೋ, ಅವರಿಗೆ ಧರ್ಮಜ್ಞಾನವು ಲಭಿಸುವುದಿಲ್ಲ. ಈ ನವೀನ ಯೋಗಪದ್ಧತಿಗಳನ್ನು ಹೇಳಿಕೊಡುವವರೆಲ್ಲಾ ಹೆಚ್ಚಾಗಿ ಧನ-ಸಂಪತ್ತು ಮತ್ತು ವಿಷಯ-ಭೋಗಗಳಲ್ಲಿ ನಿಮಗ್ನರಾಗಿದ್ದಾರೆ. ಆದುದರಿಂದ ಇವರಿಗೆಲ್ಲಾ ಧರ್ಮಾಧರ್ಮ, ಸತ್ಯಾಸತ್ಯ, ಯೋಗ ಮತ್ತು ಅಯೋಗದ ಮಾತು ಗೊತ್ತಾಗುವುದಿಲ್ಲ. ನಮ್ಮ ಪ್ರಾಚೀನಕಾಲದ ಋಷಿಗಳು ಧನ-ಸಂಪತ್ತು ಮತ್ತು ವಿಷಯ-ಭೋಗಗಳಿಂದ ಸದಾ ದೂರವಿದ್ದು, ಯೋಗದ ವಾಸ್ತವಿಕ ಸ್ವರೂಪವನ್ನು ತಿಳಿದುಕೊಂಡಿದ್ದರು. ಆದುದರಿಂದ ಅವರು ಹೇಳಿಕೊಟ್ಟ ಪದ್ಧತಿಯನ್ನು ಸ್ವೀಕರಿಸಿ ಅದರಂತೆಯೇ ನಡೆಯುವುದು ಶ್ರೇಯಸ್ಕರವಾಗಿದೆ. ತಲೆಯ ಮೇಲೆ ಕೈಯಿಟ್ಟು ಸಮಾಧಿಯನ್ನು ಸಿದ್ಧಿಸುವಂತಹ ಸುಳ್ಳು ಮಾತುಗಳನ್ನು ಬಿಟ್ಟುಬಿಡಬೇಕು.

## 6. ದೇವರ ಜ್ಞಾನ ಇದ್ದವರು ಮತ್ತು ಇಲ್ಲದವರು

ಯೋಗದ ವಿಷಯದಲ್ಲಿ ಹರಡಿರುವ ಆರನೆಯ ಭ್ರಾಂತಿಯು ಹೀಗಿದೆ. ಯಾರು ತನಗೆ ದೇವರ ಜ್ಞಾನ ಇದೆ ಎಂದು ಹೇಳುತ್ತಾರೆಯೋ, ಅವರಿಗೆ ನಿಜವಾಗಿಯೂ ದೇವರ ಜ್ಞಾನ ಇಲ್ಲ, ಮತ್ತು ಯಾರು ತನಗೆ ದೇವರ ಜ್ಞಾನ ಇಲ್ಲವೆಂದು ಹೇಳುತ್ತಾರೆಯೋ, ಅವರಿಗೆ ನಿಜವಾಗಿಯೂ ದೇವರ ಜ್ಞಾನ ಇದೆ. ಈ ವಿಚಾರವು ತುಂಬಾ ಮಂದಿ ಜನರ ಮನಸ್ಸಿನಲ್ಲಿ ದೃಢವಾಗಿಬಿಟ್ಟಿದೆ. ಯಾರು ಎಷ್ಟು ಹೇಳಿದರೂ, ಅವರು ಅದನ್ನು ಕೇಳಲಿಕ್ಕೆ ಸಿದ್ಧರಿಲ್ಲ. ಇದರಿಂದ ತುಂಬಾ ಅನರ್ಥವಾಗಿದೆ. ಇನ್ನು ಮುಂದೆಯೂ ಜನರಿಗೆ ಇಂಥ ವಿಚಾರಗಳಿಂದ ತುಂಬಾ ಹಾನಿಯಾಗಲಿಕ್ಕಿದೆ. ಇದರಿಂದ ಜನರನ್ನು ರಕ್ಷಿಸಬೇಕೆಂಬ ಉದ್ದೇಶದಿಂದ ಕೆಳಗೆ ಇದರ ಕುರಿತಾಗಿ ನಾನು ನನ್ನ ವಿಚಾರಗಳನ್ನು ಜನರ ಮುಂದಿಡುತ್ತಿದ್ದೇನೆ.

ಪರಮಾತ್ಮನ ಜ್ಞಾನದ ಕುರಿತಾಗಿ ಈಗ ಪ್ರಪಂಚದಲ್ಲಿ ಅನೇಕ ವಿಚಾರಧಾರೆಗಳು ಪ್ರಚಲಿತವಾಗಿವೆ. ನಾವು ಪರಮಾತ್ಮನ ಅಸ್ತಿತ್ವದ ಅನುಭವ ಮಾಡಿಕೊಳ್ಳಬಹುದು, ಆದರೆ, ಅದನ್ನು ಮಾತಿನಿಂದ ಹೇಳಲಿಕ್ಕೆ ಸಾಧ್ಯವಿಲ್ಲವೆಂದು ಕೆಲವರು ಹೇಳುತ್ತಾರೆ. ಯಾರು ಪರಮಾತ್ಮನ ಸಾಕ್ಷಾತ್ಕಾರ ಮಾಡಿಕೊಂಡಿದ್ದಾರೆಯೋ, ಅವರಿಗೆ, ಇದನ್ನು ಹೇಳಲಿಕ್ಕೆ ಬರುವುದಿಲ್ಲವೆಂದು ಕೆಲವರ ಅಭಿಪ್ರಾಯ. ಜನರ ಸೇವೆ ಮಾಡುವುದೇ ದೇವರ ಜ್ಞಾನದ ಲಕ್ಷಣ, ಎಂದು ಇನ್ನು ಕೆಲವರ ವಿಚಾರವಾಗಿದೆ. ಇದೇ ರೀತಿ, ಇನ್ನೂ ಅನೇಕ ತಪ್ಪು ತಿಳುವಳಿಕೆಗಳು ಜನರಲ್ಲಿ ಇವೆ. ಇದಕ್ಕೆ ಸಿಕ್ಕಿಬಿದ್ದವರು ತಮ್ಮ ಜೀವನವನ್ನು ವ್ಯರ್ಥವಾಗಿ ಕಳೆದುಕೊಳ್ಳುತ್ತಾರೆ.

ಕೇನೋಪನಿಷತ್ತಿನಲ್ಲಿ ಈ ರೀತಿಯ ಒಂದು ಶ್ಲೋಕವು ಬರುತ್ತದೆ:

**ಯಸ್ಯಾಮತಂ ತಸ್ಯಮತಂ ಮತಂ ಯಸ್ಯನ ವೇದ ಸಃ ।**
**ಅವಿಜ್ಞಾತಂ ವಿಜಾನತಾಂ, ವಿಜ್ಞಾತಮವಿಜಾನತಾಂ ॥**

(ಕೇನೋಪನಿಷತ್11-2)

ನಾನು ಮೇಲೆ ಹೇಳಿರುವ ಭ್ರಾಂತಿಗೆ ಒಳಗಾಗಿರುವ ಜನರು ಹೆಚ್ಚಾಗಿ ಇದೇ ಶ್ಲೋಕವನ್ನು ಆಧಾರವಾಗಿಟ್ಟುಕೊಂಡಿದ್ದಾರೆ. ಆದರೆ ಬೇಸರದ ಸಂಗತಿಯೇನೆಂದರೆ, ಈ ಶ್ಲೋಕದ ನಿಜವಾದ ಅರ್ಥವನ್ನು ಅವರು ತಿಳಿದಿಲ್ಲ. ಈ ಶ್ಲೋಕದ ನಿಜವಾದ ಅರ್ಥ ಹೀಗಿದೆ: ಯಾರು ಪರಮಾತ್ಮನನ್ನು ಅನಂತ, ಆದುದರಿಂದ ಅವನನ್ನು ಸಂಪೂರ್ಣವಾಗಿ ತಿಳಿದುಕೊಳ್ಳಲು ಸಾಧ್ಯವಿಲ್ಲವೆಂದು ತಿಳಿದುಕೊಂಡಿರುವರೋ ಅವರಿಗೆ ಪರಮಾತ್ಮನ ಅರಿವು ಇದೆ, ಮತ್ತು ಯಾರು ಪರಮಾತ್ಮನು ಏಕದೇಶೀಯನು, ಅವನ ಸ್ವರೂಪವನ್ನು ಸಂಪೂರ್ಣವಾಗಿ ತಿಳಿದುಕೊಳ್ಳಬಹುದು ಎಂದು ಕೊಂಡಿದ್ದಾರೆಯೋ, ಅವರಿಗೆ ನಿಜವಾಗಿಯೂ ಪರಮಾತ್ಮನ ಸ್ವರೂಪದ ಜ್ಞಾನ ಇಲ್ಲ.

ಕೆಲವು ವರ್ಷಗಳ ಹಿಂದಿನ ಮಾತು. ಯಾರೋ ಒಬ್ಬ ವ್ಯಕ್ತಿಯು, ಒಬ್ಬ ದೊಡ್ಡ ವಿದ್ವಾಂಸರ ಮುಂದೆ ಇನ್ನೊಬ್ಬ ಯೋಗಭ್ಯಾಸಿಯ ಮಾತನ್ನು, ಎಂದರೆ, ಆತನ ತನಗೆ ದೇವರು ಪ್ರತ್ಯಕ್ಷನಾಗುತ್ತಾನೆ, ಎಂದು ಹೇಳುತ್ತಿದ್ದುದನ್ನು ತಿಳಿಸಿದ. ಈ ಮಾತನ್ನು ಕೇಳಿದ ತಕ್ಷಣವೇ, ಇದು ಸುಳ್ಳು, ಎಂದು ಆ ವಿದ್ವಾಂಸರು ತಟ್ಟನೆ ಹೇಳಿಬಿಟ್ಟರು. ಯಾಕೆಂದರೆ, ಉಪನಿಷತ್ತಿನಲ್ಲಿ ಯಾರು ತಾವು ದೇವರನ್ನು ಬಲ್ಲ ಎಂದು ಹೇಳುತ್ತಾರೆಯೋ ಅವರಿಗೆ ನಿಜವಾಗಿಯೂ ದೇವರ ಜ್ಞಾನ ಇಲ್ಲ, ಮತ್ತು ಯಾರು ತನಗೆ ದೇವರ ಜ್ಞಾನ ಇಲ್ಲವೆಂದು ಹೇಳುತ್ತಾರೆಯೋ ಅವರಿಗೆ ನಿಜವಾಗಿಯೂ ದೇವರ ಜ್ಞಾನ ಇದೆ, ಎಂದು ಹೇಳಿದೆ.

ಒಂದು ದಿನ, ಇದೇ ವಿಷಯದಲ್ಲಿ ಸಂವಾದವು ನಡೆಯುತ್ತಿತ್ತು. ದೇವರನ್ನು ಬಲ್ಲವರು ತಾವು ದೇವರನ್ನು ಬಲ್ಲೆವು, ಎಂದು ಹೇಳಿದರೆ, ಅದರಲ್ಲಿ ಏನೂ ದೋಷವಿಲ್ಲ, ಎಂದು ನಾನು ಹೇಳಿದೆ. ನನ್ನ ಮಾತನ್ನು ಕೇಳಿ, ಒಬ್ಬ ಶಾಸ್ತ್ರಿಯು, ಇದು ಸರಿಯಲ್ಲ ಎಂದು ಹೇಳಿದ. ಮೇಲೆ ಹೇಳಿದ ವಿದ್ವಾಂಸರ ಹಾಗೆ, ಈ ಶಾಸ್ತ್ರಿಯೂ ಕೂಡ ತನ್ನ ವಿಚಾರದ ಸಮರ್ಥನೆಗೆ ಕೇನೋಪನಿಷತ್ತಿನ ಪ್ರಮಾಣವನ್ನೇ ಆಧಾರವಾಗಿ ಕೊಟ್ಟ.

ಇಲ್ಲಿ ಈಗ ಪ್ರಮಾಣ ಮತ್ತು ಯುಕ್ತಿಗಳಿಂದ ಈ ವಿಷಯದ ಕುರಿತು ವಿಚಾರ ಮಾಡೋಣ.

**ಕ) ಮೊದಲನೆಯದಾಗಿ, ಕೇನೋಪನಿಷತ್ತಿನ ವಾಕ್ಯ**

**"ಯಸ್ಯಾ ಮತಂ............."** ಇದರ ಅರ್ಥವು, ಮೇಲೆ ಹೇಳಿದ ಜನರು ತಿಳಿದುಕೊಂಡಂತೆ ಇಲ್ಲ. ಇದರ ಸರಿಯಾದ ಅರ್ಥವನ್ನು ನಾನು ಮೊದಲೇ ಹೇಳಿದ್ದೇನೆ. ಪಾಠಕರು, ಅದನ್ನು ಅಲ್ಲಿಯೇ ನೋಡಬೇಕು.

ಕೇನೋಪನಿಷತ್ತಿನ **"ವೇದ ಸಃ"** ಈ ವಾಕ್ಯದ ಅರ್ಥ ಯಾರು ತನಗೆ ಗೊತ್ತಿಲ್ಲವೆಂದು ಹೇಳುತ್ತಾನೆಯೋ ಅವನಿಗೆ ಗೊತ್ತಿದೆ, ಎಂದಾದರೆ, ಉಪನಿಷತ್ತಿನ ಈ ಶ್ಲೋಕದಲ್ಲಿ ಪರಸ್ಪರ ವಿರುದ್ಧವಾದ ಮಾತುಗಳ ಇರುವಂತೆ ಕಾಣುತ್ತದೆ. ಒಂದು ವಾಕ್ಯದಲ್ಲಿ ತಾನು ದೇವರನ್ನು ಬಲ್ಲೆ ಎಂದು ಹೇಳಿದೆ. ಅಲ್ಲಿಯೇ ಮುಂದಿನ ವಾಕ್ಯದಲ್ಲಿ ಯಾವಾತನು ತನಗೆ ದೇವರ ಜ್ಞಾನ ಇಲ್ಲವೆಂದು ಹೇಳುತ್ತಾನೆಯೋ, ಅವನೇ ದೇವರನ್ನು ಬಲ್ಲ ಎಂದು ಹೇಳಿದೆ. ಈ ವಾಕ್ಯಗಳು ಪರಸ್ಪರ ವಿರುದ್ಧವಾಗಿವೆ. ಉಪನಿಷತ್ತಿನ ವಾಕ್ಯದ ಈ ರೀತಿಯ ಅರ್ಥವು ವೇದಕ್ಕೂ ವಿರುದ್ಧವಾಗಿದೆ. ಯಾಕೆಂದರೆ ವೇದದಲ್ಲಿ ಬಹಳ ಸ್ಪಷ್ಟವಾಗಿ ಹೇಳಿದೆ : "ನಾನು ದೇವರನ್ನು ಬಲ್ಲೆ." ಆ ವೇದ ವಾಕ್ಯವು ಹೀಗಿದೆ :

**"ವೇದಾಹಮೇತಂ ಪುರುಷಂ ಮಹಾಂತಮಾದಿತ್ಯವರ್ಣಂ ತಮಸಃ ಪರಸ್ತಾತ್ ।**
**ತಮೇವ ವಿದಿತ್ವಾತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇಽಯ ನಾಯ॥"**

(ಯಜುರ್ವೇದ 31-18).

ಈ ಮಂತ್ರದ ಅರ್ಥವನ್ನು, ಮಹರ್ಷಿ ದಯಾನಂದರು ತಮ್ಮ ಭಾಷ್ಯೆಯಲ್ಲಿ ಹೀಗೆಂದು ವಿವರಿಸಿದ್ದಾರೆ—

**ಪದಾರ್ಥ :** ಎಲೇ ಜಿಜ್ಞಾಸು ಪುರುಷನೇ! ನಾನು ಈ ಮೊದಲು ಹೇಳಿದ, ಉತ್ತಮೋತ್ತಮ ಗುಣಗಳಿಂದ ಯುಕ್ತನಾಗಿರುವ, ಸೂರ್ಯನಂತೆ ಪ್ರಕಾಶಸ್ವರೂಪ ನಾಗಿರುವ, ಅಂಧಕಾರ ಅಥವಾ ಅಜ್ಞಾನದಿಂದ ದೂರವಿರುವ, ತನ್ನ ನಿಜರೂಪದಲ್ಲಿ ಸರ್ವತ್ರ ಪೂರ್ಣನಾಗಿರುವ ಪರಮಾತ್ಮನನ್ನು ಬಲ್ಲೆನು. ಅವನನ್ನು ಸರಿಯಾಗಿ ಅರಿತುಕೊಂಡೇ, ದುಃಖಕರವಾದ ಮರಣದಿಂದ ಪಾರಾಗಲು ಸಾಧ್ಯ. ಮೋಕ್ಷಕ್ಕೆ ಇದಕ್ಕಿಂತ ಬೇರೆ ಯಾವ ಮಾರ್ಗವೂ ಇಲ್ಲ.

ಇದೇ ರೀತಿಯಲ್ಲಿ, ಇನ್ನೊಂದು ವೇದ ಮಂತ್ರವೂ **"ನಾನು ದೇವರನ್ನು ಬಲ್ಲೆನು"** ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತದೆ. ಆ ಮಂತ್ರವು ಹೀಗಿದೆ:

**"ವೇದಾಹಮಸ್ಯ ಭವನ ಸ್ಯ ನಾಭಿಂ........॥**

(ಯಜುರ್ವೇದ 23-60)

**ಪದಾರ್ಥ:** ಎಲೇ, ಜಿಜ್ಞಾಸುಪುರುಷನೇ! ಈ ಸಂಪೂಣ ಜಗತ್ತಿನ ಬಂಧನದ ಸ್ಥಾನವೂ, ಕಾರಣರೂಪವೂ, ಕೇಂದ್ರಭಾಗವೂ ಆಗಿರುವ ಆ ಪರಬ್ರಹ್ಮ ನನಗೆ ಗೊತ್ತು.

ಯಜುರ್ವೇದದ ಈ ಎರಡು ಮಂತ್ರಗಳಿಂದ, ಮುಖ್ಯವಾಗಿ, ವಿದ್ವಾಂಸರು, ಜಿಜ್ಞಾಸುಗಳಿಗೆ, ತಾವು ಆ ಪರಮ ಪುರುಷ ಪರಮಾತ್ಮನನ್ನು ತಿಳಿದುಕೊಂಡಿರುವ ಬಗ್ಗೆ, ತಮ್ಮ ಮಾತುಗಳಿಂದ ನಂಬಿಕೆಯನ್ನು ಹುಟ್ಟಿಸಬೇಕು, ಎಂಬುದು ಸ್ಪಷ್ಟವಾಗುತ್ತದೆ. ಒಂದು ವೇಳೆ, ಮೇಲೆ ಹೇಳಿದ ಹಾಗೆ, ಉಪನಿಷತ್ತಿನ ವಾಕ್ಯವನ್ನು ಆಧಾರವಾಗಿಟ್ಟುಕೊಂಡು, ಯಾವಾತನು ತಾನು ದೇವರನ್ನು ಬಲ್ಲೆನೆಂದು ಹೇಳುತ್ತಾನೆಯೋ, ಆತನು ನಿಜವಾಗಿಯೂ ದೇವರನ್ನು ಅರಿತುಕೊಂಡಿಲ್ಲ, ಎಂಬ ವಿಚಾರವನ್ನು ಪ್ರಚಾರಮಾಡುತ್ತಿರುವುದು ಸರಿಯೆಂದಾಗಿದ್ದಾರೆ, ವೇದದಲ್ಲಿ, ಇದರ ಖಂಡನೆ ಯಾಕೆ ಆಗಬೇಕು? **"ವೇದಾಹಮೇತಂ ಪುರುಷಂ ಮಹಾಂತಂ......"** ಎಂಬ ಮಾತು ವೇದದಲ್ಲಿ ಏಕೆ ಬರಬೇಕಿತ್ತು?

ಖ) **ನಮೋ ಬ್ರಹ್ಮಣೇ ನಮಸ್ತೇ ವಾಯೋ ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ ತ್ವಾಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ ಸತ್ಯಂ ವದಿಷ್ಯಾಮಿ ॥**

[ತೈತ್ತಿರೀಯ ಆರಣ್ಯಕ 7-1]

ಇಲ್ಲಿ, (ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ) "ನೀನು ಪ್ರತ್ಯಕ್ಷ ಬ್ರಹ್ಮನಾಗಿರುವೆ," (ತ್ವಾಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ) "ನಿನ್ನನ್ನು ನಾನು ಪ್ರತ್ಯಕ್ಷ ಬಹ್ಮನೆಂದು ಹೇಳುವೆನು", ಎಂದು ಹೇಳಿರುವುದರಿಂದ, ದೇವರ ಜ್ಞಾನವನ್ನು ಗಳಿಸಿದ ವಿದ್ವಾಂಸರು, ದೇವರನ್ನು ಸಂಬೋಧಿಸಿ, "ನೀನು ಪ್ರತ್ಯಕ್ಷ ಬ್ರಹ್ಮನಾಗಿರುವೆ", "ನಾನು ನಿನ್ನನ್ನು ಪ್ರತ್ಯಕ್ಷ ಬ್ರಹ್ಮನೆಂದು ಹೇಳುವೆನು" ಎಂದು ಹೇಳುವುದರಲ್ಲಿ ಏನೂ ದೋಷವಿಲ. ಇದು ವೇದನುಕೂಲವಾಗಿದೆ.

ಗ) **ಜಾನಾಮ್ಯಹಂಶೇವಧಿರಿತ್ಯ ನಿತ್ಯಂ ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್। ತತೋ ಮಯಾ ನಾಚಿಕೇತಶ್ಚಿತೋಽಗ್ನಿರನಿತ್ಯೈರ್ದ್ರವ್ಯೈಃಪ್ರಾಪ್ತ ವಾನಸ್ಮಿ ನಿತ್ಯಮ್ ॥**

[ಕಠೋಪನಿಷತ್ 10-2]

ಇಲ್ಲಿ ಯಮಾಚಾರ್ಯರು, ತಾನು ಅನಿತ್ಯ ದ್ರವ್ಯಗಳಿಂದ, ಎಂದರೆ, ಶರೀರ, ಇಂದ್ರಿಯ, ಮನಸ್ಸು ಇತ್ಯಾದಿ ಅನಿತ್ಯ ಸಾಧನಗಳಿಂದ ಪರಮಾತ್ಮನನ್ನು

ಪ್ರಾಪ್ತಮಾಡಿಕೊಂಡಿದ್ದೇನೆ, ಎಂದು ಹೇಳುತ್ತಿದ್ದಾರೆ. ಒಂದು ವೇಳೆ ದೇವರನ್ನು ಬಲ್ಲವರು ತಮಗೆ ದೇವರ ಜ್ಞಾನವು ಇಲ್ಲವೆಂದು ಹೇಳುತ್ತಾರೆ ಎಂದಾಗಿದ್ದರೆ, ಇಲ್ಲಿ ಋಷಿಗಳು ತಾವು ನಿತ್ಯಸಾಧನಗಳಿಂದ ನಿತ್ಯನಾಗಿರುವ ಪರಮಾತ್ಮನನ್ನು ಪ್ರಾಪ್ತಿಮಾಡಿಕೊಂಡಿದ್ದೇನೆ ಎಂದು ಯಾಕೆ ಹೇಳಿದ್ದಾರೆ?

**ಘ) ನಿಜವಾಗಿ ನೋಡಿದರೆ, ಈ ವಿಚಾರವು ಯೋಗದರ್ಶನದ ಸಿದ್ಧಾಂತಕ್ಕೂ ವಿರುದ್ಧವಾಗಿದೆ. ಏಕೆಂದರೆ, ಸತ್ಯದ ವ್ಯಾಖ್ಯೆಯನ್ನು ಮಾಡುವಾಗ ವ್ಯಾಸರು,**

**ಸತ್ಯ ಯಥಾರ್ಥಂ ವಾಙ್ಮನಸೇ ಯಥಾದೃಷ್ಟಂ**
**ಯಥಾನಾಮಿತಂ ಯಥಾಶ್ರುತಂ ವಾಙ್ಮನಶ್ಚ"**

(ಯೋಗದರ್ಶನ 2-30ರಲ್ಲಿ ವ್ಯಾಸಭಾಷ್ಯ).

ಅರ್ಥಾತ್, ಪ್ರತ್ಯಕ್ಷವಾಗಿ ಕಂಡದ್ದನ್ನು ಕಂಡಹಾಗೆ, ಅನುಮಾನದಿಂದ ಗ್ರಹಿಸಿಕೊಂಡಂತೆ, ಮನಸ್ಸು ಮತ್ತು ಮಾತಿನಲ್ಲಿ ಒಂದೇ ರೀತಿ, ಯಾವುದು ಇದೆಯೋ ಅದೇ ಸತ್ಯವಾಗಿದೆ. ಯಾರು ತನಗೆ ದೇವರ ಜ್ಞಾನ ಇಲ್ಲವೆಂದು ಹೇಳುತ್ತಾರೆಯೋ ಅವರೇ ನಿಜವಾದ ಯೋಗಿಗಳು, ಎಂದು ಹೇಳುವವರ ಮಾತು ಸರಿ ಎಂದಾದರೆ, ವ್ಯಾಸರು ಹೇಳಿದಂತೆ ಸತ್ಯ ಹೇಳುವ ವ್ಯಕ್ತಿಯು, ಸುಳ್ಳು ಹೇಳುವವನೆಂದಾಗುತ್ತದೆ. ಯಾಕೆಂದರೆ, ಈ ವ್ಯಕ್ತಿಗೆ ದೇವರ ಜ್ಞಾನ ಇಲ್ಲ ಎಂದುಕೊಳ್ಳುವ ಈತ ನೇರವಾಗಿ ತದನುಸಾರವಾಗಿಯೇ ತನಗೆ ದೇವರ ಜ್ಞಾನ ಇಲ್ಲ ಎಂದೇ ಹೇಳುತ್ತಾನೆ. ಇದರ ಬದಲಿಗೆ, ಈತ ತನ್ನ ಮನಸ್ಸಿನಲ್ಲೊಂದು, ಮತ್ತು ಮಾತಿನಲ್ಲಿ ಇನ್ನೊಂದು ಹೇಳಿದರೆ, ಕಪಟಿ ಎಂದಾಗುವುದಿಲ್ಲವೇ? ಮಹಾತ್ಮರು ಮತ್ತು ದುರಾತ್ಮರಲ್ಲಿ ಇರುವ ಭೇದ ಎಂದರೆ ಇಷ್ಟೇ— ಯಾರು ಒಂದು ಮಾತನ್ನು ತಮ್ಮ ಮನಸ್ಸಿನಲ್ಲಿ ಇದ್ದಹಾಗೆ ಬಾಯಿಮಾತಿನಲ್ಲೂ ಹೇಳುತ್ತಾರೆಯೋ ಅವರು ಮಹಾತ್ಮರು ಅಥವಾ ಯೋಗಿಗಳು, ಮತ್ತು ಯಾರ ಮನಸ್ಸಿನಲ್ಲಿ ಒಂದು, ಮಾತಿನಲ್ಲಿ ಇನ್ನೊಂದು ಇದೆಯೋ ಅವರು ದುರಾತ್ಮರು, ಎಂದು ಪ್ರಪಂಚದಲ್ಲಿ ಎಲ್ಲರಿಗೂ ಗೊತ್ತಿರುವ ವಿಷಯವಾಗಿದೆ. ಯೋಗದರ್ಶನಕಾರರು ಯೋಗಾಭ್ಯಾಸಿಗೆ 'ಯಮ'ದ ಪಾಲನೆಯನ್ನು ಪೂರ್ಣ ರೂಪೇಣ ಮಾಡಬೇಕೆಂದು ಹೇಳಿದ್ದಾರೆ. **"ಜಾತಿದೇಶಕಾಲಸಮಯಾನವಚ್ಛಿನ್ನಾಃ ಸಾರ್ವಭೌಮಾ ಮಹಾವ್ರತಂ"** ॥ (ಯೋ. ದ. 2-31) ಅರ್ಥಾತ್, ಜಾತಿ, ದೇಶ, ಕಾಲ ಮತ್ತು ಸಮಯದ ಬಂಧನ ಇಲ್ಲದೆ, ಎಲ್ಲಾ ಸ್ಥಿತಿಯಲ್ಲೂ ಯೋಗಿಯು

ಸತ್ಯವನ್ನೇ ಹೇಳಬೇಕು, ಎಂದಿಗೂ ಸುಳ್ಳನ್ನು ಹೇಳಬಾರದು. ಹೀಗಿರುವಾಗ ಒಬ್ಬ ದೇವರನ್ನು ಬಲ್ಲ ವ್ಯಕ್ತಿಯು ತನ್ನ ಜ್ಞಾನಕ್ಕೆ ವಿರುದ್ಧವಾದ ಮಾತನ್ನು ಹೇಳಿದರೆ, ಅವನು ಯೋಗಿಯಾಗಲಿಕ್ಕೆ ಹೇಗೆ ಸಾಧ್ಯ?

**ಪ್ರಶ್ನೆ :—** ಯೋಗದ ಒಂದು ಉನ್ನತಮಟ್ಟವನ್ನು ಏರಿದ ನಂತರ, ಆ ಯೋಗಿಯು ಸುಳ್ಳು ಹೇಳಬಹುದು, ಇದರಿಂದ ಏನೂ ಹಾನಿಯಿಲ್ಲ, ಎಂದು ಕೆಲವರ ಅಭಿಪ್ರಾಯ. ಇದು ಸರಿಯೇ?

**ಉತ್ತರ:—** ಈ ಅಭಿಪ್ರಾಯವು ವೇದವಿರುದ್ಧವಾಗಿರುವುದರಿಂದ ಸರಿಯಲ್ಲ. ಯಾರು ತಮ್ಮ ಸುಳ್ಳನ್ನು ಬಚ್ಚಿಡಲು ಪ್ರಯತ್ನಿಸುತ್ತಾರೆಯೋ, ಅವರೇ ಇಂತಹ ವಿಚಾರದ ಪ್ರಚಾರವನ್ನು ಮಾಡುತ್ತಿದ್ದಾರೆ. ಅಸತ್ಯವಾದ ಪ್ರಚಾರ ಮಾಡುವ ವ್ಯಕ್ತಿಯು ಯಾವಾಗಲೂ, ಸತ್ಯದ ನಿಂದೆಯನ್ನು ಮಾಡುತ್ತಾನೆ, ಎಂದು ಮಹರ್ಷಿ ದಯಾನಂದರು ಒಂದು ಕಡೆಯಲ್ಲಿ ಹೇಳಿದ್ದಾರೆ. ಆದುದರಿಂದಲೇ ಈಗಿನ ಕಾಲದ ಕೆಲವು ಢೋಂಗಿ ಯೋಗಿಗಳು ಸತ್ಯದ ಕುತ್ತಿಗೆಯನ್ನು ದಬ್ಬಿಡಲು ಪ್ರಯತ್ನಿಸುತ್ತಾರೆ. ಹೀಗಿರುವಾಗ ಜನಸಾಮಾನ್ಯರ ಮಾತೇ ಬೇರೆ. ಈ ರೀತಿ ಸುಳ್ಳು ಹೇಳುವವರು ಮತ್ತು ಇತರರಿಂದ ಸುಳ್ಳು ಹೇಳಿಸುವವರು, ಯೋಗಿಗಳು ಸುಳ್ಳು ಹೇಳಿದರೂ ಏನೂ ದೋಷವಿಲ್ಲ ಎಂಬ ವಿಚಾರವನ್ನು ಪ್ರಚಾರ ಮಾಡುತ್ತಾರೆ.

**ಪ್ರಶ್ನೆ :—** ಇಂತಹ ವಿಚಾರಗಳಿಂದ ಜನರಿಗೆ ಏನು ಹಾನಿಯಾಗಬಹುದು?

**ಉತ್ತರ:—** ಇದರಿಂದ ಜನರಿಗೆ ತುಂಬಾ ಹಾನಿಯಾಗುತ್ತದೆ. ಮೊದಲನೇಯದಾಗಿ, ವೇದ ಹಾಗೂ ವೇದಾನುಕೂಲ ಶಾಸ್ತ್ರಗಳಿಗೆ ವಿರುದ್ಧವಾಗಿದೆ. ನಾನು ಮೇಲೆ, ಒಬ್ಬ ದೇವರನ್ನು ಬಲ್ಲ ವ್ಯಕ್ತಿಯು ತಾನು ದೇವರನ್ನು ಬಲ್ಲೆನೆಂದೇ ಹೇಳುತ್ತಾನೆಯೇ ಹೊರತು, ಬೇರೆ ಏನೂ ಹೇಳುವುದಿಲ್ಲ, ಎಂದು ಸ್ಪಷ್ಟಪಡಿಸಿದ್ದೇನೆ. ಎಂದರೆ, ದೇವರ ಜ್ಞಾನ ಇದ್ದ ವ್ಯಕ್ತಿಯು ಎಂದಿಗೂ ಸುಳ್ಳು ಹೇಳುವುದಿಲ್ಲ. ಎರಡನೇಯದಾಗಿ, ದೇವರ ಜ್ಞಾನ ಇದ್ದ ವ್ಯಕ್ತಿಗಳು (ಬ್ರಹ್ಮಜ್ಞಾನಿಗಳು) ಸುಳ್ಳು ಹೇಳುತ್ತಾರೆ, ಎಂಬ ಮಾತು ಜನಸಾಮಾನ್ಯರಿಗೆ ಗೊತ್ತಾದಾಗ, ಇವರೆಲ್ಲಾ ಬೇಕಾದಷ್ಟು ಸುಳ್ಳುಹೇಳಲು ಪ್ರಾರಂಭಿಸಬಹುದು. ಇದರಿಂದ ಅವಿಶ್ವಾಸವು ಬೆಳೆಯುತ್ತದೆ. ಯಾರೂ ಯಾರನ್ನು ನಂಬುವ ಹಾಗಿಲ್ಲ. ಇದರಿಂದ ಮಾನವ ಸಮಾಜಕ್ಕೆ ತುಂಬಾ ಹಾನಿಯಾಗುತ್ತದೆ. ಇದನ್ನು ನಾವು ಈಗಲೇ ನೋಡುತ್ತಿದ್ದೇವೆ.

  

ಮೂರನೇಯದಾಗಿ, ಒಬ್ಬ ನಿಜವಾದ ಯೋಗಿಯು ತನಗೆ ಪರಮಾತ್ಮನ ಜ್ಞಾನ ಇದೆ ಎಂದಾಗ, ಜನರು ಆತನಿಗೆ ನಿಜವಾಗಿ ದೇವರ ಜ್ಞಾನ ಇಲ್ಲವೆಂದೇ ತಿಳಿದುಕೊಳ್ಳುತ್ತಾರೆ. ಹಾಗಾಗಿ, ಈ ಯೋಗಿಯಿಂದ ಜನರಿಗೆ ಲಾಭ ಪಡೆಯಲಿಕ್ಕೆ ಆಗುವುದಿಲ್ಲ. ಇದರಿಂದಲೂ ಲೋಕಕ್ಕೆ ತುಂಬಾ ಹಾನಿಯಾಗುತ್ತದೆ. ಇದೇ ರೀತಿಯು ಅಂಧಪರಂಪರೆಗೆ ಒಳಗಾಗಿ, ತುಂಬಾ ಜನರು ಮಹರ್ಷಿ ದಯಾನಂದರನ್ನು ಸರಿಯಾಗಿ ಅರಿತುಕೊಳ್ಳಲಿಲ್ಲ. ಇದರಿಂದ ಪ್ರಪಂಚಕ್ಕೆ ತುಂಬಾ ಹಾನಿಯಾಗಿದೆ.

ನಾಲ್ಕನೇಯದಾಗಿ, ಅನೇಕ ಮಂದಿ ತಮ್ಮನ್ನು ತಾವೇ ಯೋಗಾಚಾರ್ಯರೆಂದುಕೊಳ್ಳುವವರು, ಒಂದು ಮಾಯಾಜಾಲವನ್ನು ರಚಿಸಿ, ತಮಗೆ ದೇವರ ಜ್ಞಾನ ಆಗಿಲ್ಲ ಎಂದು ಹೇಳುತ್ತಾರೆ, ಮತ್ತು ಅವರ ಶಿಷ್ಯರು, ಇವರಿಗೆ ದೇವರ ಜ್ಞಾನ ಆಗಿದೆ ಎಂದು ನಂಬಿಕೊಳ್ಳುತ್ತಾರೆ. ಯಾಕೆಂದರೆ, ಇವರ ಸಿದ್ಧಾಂತಕ್ಕೆ ಅನುಸಾರವಾಗಿ, ಇದು ದೇವರನ್ನು ಬಲ್ಲವರ ಲಕ್ಷಣವಾಗಿದೆ. ಹೀಗೆ ಒಬ್ಬ ಬ್ರಹ್ಮಜ್ಞಾನ ಇಲ್ಲದವನನ್ನು ಬ್ರಹ್ಮಜ್ಞಾನಿಯೆಂದು ಜನರು ನಂಬಿಕೊಂಡು ಹೋದರೆ, ಮುಂದೆ, ಆ (ಅಜ್ಞಾನಿ) ವ್ಯಕ್ತಿಯು ಹೇಳಿದ ಮಾತನ್ನೆಲ್ಲಾ ಇವರು ವೇದವಾಕ್ಯವೆಂದುಕೊಳ್ಳುತ್ತಾರೆ. ಮತ್ತು ತದನುಸಾರವಾಗಿಯೇ ನಡೆಯುತ್ತಾರೆ. ಇದರಿಂದಲೂ ಜನತೆಗೆ ತುಂಬಾ ದುಃಖವು ಒದಗುತ್ತದೆ.

ಐದನೇಯದಾಗಿ, ನಾವು ಕೆಲವೊಮ್ಮೆ ಕಂಡಂತೆ, ಕೆಲವು ಮಂದಿ ವಿದ್ವಾಂಸರೂ, ಉಪದೇಶಕರೂ, ತಮ್ಮ ಭಾಷಣದಲ್ಲಿ, ತಮಗೆ ಪ್ರಸ್ತುತ ವಿಷಯದ ಬಗ್ಗೆ ಏನೂ ಗೊತ್ತಿಲ್ಲ, ಆದರೂ ತಾನು (ಅಧ್ಯಕ್ಷರ ಅಥವಾ ಮಂತ್ರಿಗಳ) ಅಪ್ಪಣೆಯಾಗಿದೆಯೆಂದು, ಈ ವಿಷಯದ ಕುರಿತು ಸ್ವಲ್ಪ ಹೇಳಬೇಕೆಂದಿದ್ದೇನೆ, ಎಂದು ಹೇಳುವುದುಂಟು. ಯಾಕೆಂದರೆ, ಈ ಭಾಷಣಕಾರರು ತಾವು ಈ ರೀತಿ ಹೇಳಿದರೆ ಜನರು ತಮ್ಮನ್ನು ದೊಡ್ಡ ವಿದ್ವಾಂಸರೆಂದೂ ಮತ್ತು ತಾವು ಬಹಳ ವಿನಯಶೀಲರೆಂದೂ ಹೇಳುತ್ತಾರೆ, ಎಂದು ಭಾವಿಸುತ್ತಾರೆ. ನಿಜವಾಗಿ ನೋಡಿದರೆ, ಈ ರೀತಿ ಕೃತಕ ವಿನಯಶೀಲತೆಯನ್ನು ತೋರಿಸುವವರು, ತಮ್ಮ ಮನಸ್ಸಿನೊಳಗೆ ತಮ್ಮನ್ನು ತಾವೇ ದೊಡ್ಡ ವಿದ್ವಾಂಸರೆಂದು ತಿಳಿದುಕೊಂಡಿರುತ್ತಾರೆ, ಮತ್ತು ಇವರ ಮಾತುಗಳು, ಒಳಗೊಂದು ಹೊರಗೊಂದು ಆಗಿರುತ್ತವೆ. ಅಭಿಮಾನವು ಒಳ್ಳೆಯದಲ್ಲ ಎಂದು ಉದ್ದುದ್ದ ಭಾಷಣ ಬಿಗಿಯುವವರನ್ನೂ ನಾವು ತುಂಬಾ ನೋಡಿದ್ದೇವೆ. ಆದರೆ ಒಳಗಿನಿಂದ ಇವರಲ್ಲಿ ಅಭಿಮಾನವು ತುಂಬಿರುತ್ತದೆ. ಇವರೆಲ್ಲಾ ಇಂತಹ ಅಂಧ ಪರಂಪರೆಯಲ್ಲಿ ಬೆಳೆದು ಬಂದವರಾಗಿರುತ್ತಾರೆ. ನಿಜವಾಗಿ ಹೇಳುವುದಾದರೆ, ಇದ್ದುದ್ದನ್ನು ಇದ್ದಹಾಗೇ (ನಮ್ರತೆಯಿಂದ) ಹೇಳುವುದೇ ನಿರಭಿಮಾನತೆಯ ಲಕ್ಷಣವಾಗಿದೆ ಮತ್ತು ಇದಕ್ಕೆ ವಿರುದ್ಧವಾಗಿ ಹೇಳುವುದು ಅಭಿಮಾನದ ಲಕ್ಷಣವಾಗಿದೆ.

ಇನ್ನೂ ಕೆಲವು ಜನರಲ್ಲಿ ಒಂದು ಮಿಥ್ಯಾ ಕಲ್ಪನೆ ಇದೆ. ಅದೇನೆಂದರೆ, ಯೋಗಾಭ್ಯಾಸದಿಂದ ಸಂಪಾದಿಸಿಕೊಂಡ ಸಿದ್ಧಿಯನ್ನು, ಯಾರಿಗಾದರೂ ಹೇಳಿದರೆ, ಆ ಸಿದ್ಧಿಯು ಹೊರಟು ಹೋಗುತ್ತದೆ, ಎಂದು. ಆದುದರಿಂದ, ಇಂತಹ ವಿಚಾರವನ್ನು ಇಟ್ಟುಕೊಂಡಿರುವ ಯೋಗಾಭ್ಯಾಸಿಯು ತನಗೆ ಪರಮಾತ್ಮನ ಅನುಭೂತಿಯಾದರೂ ಕೂಡ, ಅದನ್ನು ಯಾರಿಗೂ ಹೇಳುವುದಿಲ್ಲ. ಇಂತಹ ಜನರಲ್ಲಿ ನಮ್ಮ ಪ್ರಶ್ನೆ ಏನೆಂದರೆ, ಈಗಿನ ಯುಗದ ಭೌತಿಕ ಜ್ಞಾನವು ದೂರದರ್ಶನ, ಆಕಾಶವಾಣಿ ಮೊದಲಾದ ಆಧುನಿಕ ವೈಜ್ಞಾನಿಕ ಉಪಕರಣಗಳ ಮೂಲಕ ನಿತ್ಯ ಪ್ರಚಾರ ಮತ್ತು ಪ್ರಸಾರಕ್ಕೆ ಒಳಗಾದರೂ ಕೂಡ ಕಳೆದು ಹೋಗದೆ ಇರುವಾಗ, ಒಬ್ಬ ಯೋಗಿಯ ಸಿದ್ಧಿಯು, ಅದನ್ನು ಇನ್ನೊಬ್ಬರಿಗೆ ಹೇಳಿಕೊಟ್ಟಾಗ ಹೇಗೆ ಕಳೆದು ಹೋಗಬಲ್ಲದು? ಯಾವರೀತಿಯಲ್ಲಿ ಭೌತಿಕ ವಿಜ್ಞಾನದ ಆವಿಷ್ಕಾರಗಳನ್ನು ಇನ್ನೊಬ್ಬರಿಗೆ ಹೇಳಿದರೆ ಆ ಜ್ಞಾನವು ಕಳೆದು ಹೋಗುವುದಿಲ್ಲವೋ, ಅದೇ ರೀತಿ ಆತ್ಮ ಮತ್ತು ಪರಮಾತ್ಮನಿಗೆ ಸಂಬಂಧಪಟ್ಟ ಜ್ಞಾನವೂ ಕೂಡಾ, ಅದನ್ನು ಇನ್ನೊಬ್ಬರಿಗೆ ಹೇಳಿಕೊಟ್ಟಾಗ ಅದು ನಶಿಸಿಹೋಗುವುದಿಲ್ಲ. ನಿಜವಾಗಿ ಹೇಳುವುದಾದರೆ, ಆ ಜ್ಞಾನವು ಪ್ರಚಾರದೊಂದಿಗೆ ಬೆಳೆಯುತ್ತದೆ. ಆದುದರಿಂದ ಇಂತಹ ಜ್ಞಾನದ ಪ್ರಚಾರ ಮತ್ತು ಪ್ರಸರಣೆ ಖಂಡಿತವಾಗಿ ಎಲ್ಲಾ ಕಡೆಗಳಲ್ಲಿಯೂ ಆಗಬೇಕು.

ಈ ರೀತಿ, ಈ ಲೇಖನದಲ್ಲಿ "ಯಾರು ತಾನು ದೇವರನ್ನು ಬಲ್ಲೆನೆಂದು ಹೇಳುತ್ತಾರೆಯೋ ಅವರಿಗೆ ದೇವರ ವಿಷಯ ಏನೂ ಗೊತ್ತಿರುವುದಿಲ್ಲ, ಮತ್ತು ಯಾರು ತಮಗೆ ಪರಮಾತ್ಮನ ಜ್ಞಾನ ಏನೂ ಇಲ್ಲ, ಎಂದು ಹೇಳುತ್ತಾರೆಯೋ, ಅವರೇ ನಿಜವಾಗಿ ದೇವರನ್ನು ಬಲ್ಲವರು," ಎಂಬಂತಹ ಭ್ರಾಂತಿಯುಕ್ತವಾದ ವಿಚಾರಗಳನ್ನು ಪ್ರಮಾಣ ಮತ್ತು ಯುಕ್ತಿಯಿಂದ ಖಂಡನೆ ಮಾಡಲಾಗಿದೆ. ಆದುದರಿಂದ ಇಂತಹ ವಿಚಾರಗಳು ಬೆಳೆಯುವುದಕ್ಕೆ ಯಾರೂ ಎಲ್ಲಿಯೂ ಎಡೆಕೊಡಬಾರದು ಎಂದು ಸಜ್ಜನರಲ್ಲಿ ನನ್ನ ವಿನಂತಿ.

## 7. ಪೂರ್ಣಯೋಗಿ ಮತ್ತು ಪರಮಾತ್ಮ

ಯೋಗವಿದ್ಯೆಯ ಕ್ಷೇತ್ರದಲ್ಲಿ ಹಬ್ಬಿರುವ ಏಳನೆಯ ಭ್ರಾಂತಿ ಏನೆಂದರೆ, ಒಬ್ಬ ಯೋಗಿಯು ಪರಮಾತ್ಮನಂತೆ ಸರ್ವಜ್ಞನಾಗುತ್ತಾನೆ, ಎಂಬ ನಂಬಿಕೆ ಯೋಗ ಸಾಧನೆಯಲ್ಲಿ ಮುಂದುವರಿಯುತ್ತಾ ಹೋದಂತೆ, ಆತನ ಕೊನೆಗೆ ಒಂದು ಇಂತಹ ಉನ್ನತಿ ಸ್ಥಿಯನ್ನು ಹೊಂದುತ್ತಾನೆ, ಎಂದರೆ, ಆ ಸ್ಥಿತಿಯಲ್ಲಿ ಆತ ಪರಮಾತ್ಮನಿಗೆ ಸದೃಶನಾಗಿ ಸರ್ವಜ್ಞತೆಯ ಗುಣವನ್ನು ಪಡೆಯುತ್ತಾನೆ, ಎಂದು ಕೆಲವು ಜನರು ಹೇಳುತ್ತಾರೆ. ಇವರ ವಿಚಾರಕ್ಕನುಸಾರವಾಗಿ ಯಾವರೀತಿಯಲ್ಲಿ ಪರಮಾತ್ಮನು

ಒಂದೇ ಕಾಲದಲ್ಲಿ ಸೃಷ್ಟಿಯ ಎಲ್ಲಾ ವಸ್ತುಗಳ ಗುಣ, ಕರ್ಮ ಮತ್ತು ಸ್ವಭಾವಗಳನ್ನು ತಿಳಿದುಕೊಂಡಿರುತ್ತಾನೆಯೋ, ಅದೇ ರೀತಿಯಲ್ಲಿ ಒಬ್ಬ ಯೋಗಿಯೂ ಕೂಡ, ಏಕಕಾಲದಲ್ಲಿ ಪ್ರಪಂಚದ ಎಲ್ಲಾ ಪದಾರ್ಥಗಳ ಗುಣ, ಕರ್ಮ ಮತ್ತು ಸ್ವಭಾವಗಳನ್ನು ಅರಿತುಕೊಳ್ಳಲು ಸಮರ್ಥನಾಗಿರುತ್ತಾನೆ.

ಈ ವಿಚಾರವು ಎಷ್ಟು ಸರಿ ಎಂಬುದನ್ನು ಹೇಳುವುದರ ಮೊದಲು, ನಾನಿಲ್ಲಿ, ಪರಮಾತ್ಮನು ಸರ್ವಜ್ಞ ಎಂಬ ಮಾತಿನ ತಾತ್ಪರ್ಯ ಏನು ಎಂಬುದನ್ನು ಮೊದಲು ಸ್ಪಷ್ಟಪಡಿಸಲು ಇಚ್ಛಿಸುತ್ತೇನೆ. ಪರಮಾತ್ಮನು ಸರ್ವಜ್ಞನು ಎಂದರೆ, ವಿಶ್ವದಲ್ಲಿ ವರ್ತಮಾನ ಸಮಯದಲ್ಲಿ ಏನೆಲ್ಲಾ ಪದಾರ್ಥಗಳು ಇವೆಯೋ, ಅವುಗಳ ಗುಣ, ಕರ್ಮ ಮತ್ತು ಸ್ವಭಾವಗಳ ಸಂಪೂರ್ಣ ಜ್ಞಾನವು ಆತನಿಗೆ ಏಕಕಾಲದಲ್ಲಿ ಇರುತ್ತದೆ, ಮಾತ್ರವಲ್ಲ, ಭೂತಕಾಲದಲ್ಲಿ ಏನೆಲ್ಲಾ ಇತ್ತೋ ಮತ್ತು ಭವಿಷ್ಯತ್ಕಾಲದಲ್ಲಿ ಏನೆಲ್ಲಾ ಇರಬಹುದೋ, ಅದೆಲ್ಲಾ ಅವನಿಗೆ ಸರಿಯಾಗಿ ಗೊತ್ತಿರುತ್ತದೆ.

**ಪ್ರಶ್ನೆ** :— ಜೀವಾತ್ಮರು ಭವಿಷ್ಯತ್ಕಾಲದಲ್ಲಿ ಏನೆಲ್ಲಾ ಮಾಡಲಿರುವರೋ, ಮತ್ತು ಅವರು ಯಾವ ಹೊತ್ತಿನಲ್ಲಿ ಏನು ಮಾಡುವರೋ, ಅದು ಕೂಡ ಪರಮಾತ್ಮನಿಗೆ ಗೊತ್ತಿದೆ, ಎಂದು ಕೆಲವರು ಹೇಳುತ್ತಾರೆ, ಇದು ಸರಿಯೇ?

**ಉತ್ತರ**:— ಈ ಮಾತಿನಲ್ಲಿ ಸ್ವಲ್ಪ ಭ್ರಾಂತಿಯಿದೆ. ಯಾವ ವಿಚಾರವು ಜೀವಾತ್ಮರ ಗಮನಕ್ಕೆ ಇಷ್ಟರ ತನಕ ಬರಲಿಲ್ಲವೋ, ಮತ್ತು ಆ ವಿಚಾರವು ಮುಂದೆ ಬರಲಿರುವ ಸೃಷ್ಟಿಯ ಮಧ್ಯಕಾಲದಲ್ಲಿ (ಮುಂದಿನ ಶತಮಾನದಲ್ಲಿ ಅಥವಾ ಮುಂದಿನ ಯುಗದಲ್ಲಿ) ಅವರ ಮನಸ್ಸಿನಲ್ಲಿ ಹೊಳೆಯುವುದಾದರೆ, ಪರಮಾತ್ಮನಿಗೆ ಅದು ಹೇಗೆ ಗೊತ್ತಾಗಬೇಕು? ಈ ವಿಷಯದಲ್ಲಿ "ದಯಾನಂದ ಸಂದೇಶ", (ಡಿಲ್ಲಿಯಿಂದ ಹೊರಡುತ್ತಿರುವ ಹಿಂದಿ ಮಾಸಪತ್ರಿಕೆ) ಇದರಲ್ಲಿ ನನ್ನ ಲೇಖನವು ಪ್ರಕಾಶಿತವಾಗಿದೆ. ಹೆಚ್ಚಿಗೆ ತಿಳಿದುಕೊಳ್ಳಬೇಕೆಂದು ಬಯಸುವವರು, ಅದನ್ನು ನನ್ನಿಂದ ತರಿಸಿ ಓದಿ ತಿಳಿದುಕೊಳ್ಳಬಹುದು.

ಈಗ, ಒಬ್ಬ ಯೋಗಿಯು ಪರಮಾತ್ಮನಂತೆ ಸರ್ವಜ್ಞನಾಗಲಿಕ್ಕೆ ಸಾಧ್ಯ ಇಲ್ಲ ಮತ್ತು ಇದು ಯಾಕೆ ಎಂಬುದನ್ನು ಹೇಳುತ್ತೇನೆ.

ಸತ್ಯಾರ್ಥ ಪ್ರಕಾಶದ ಒಂಭತ್ತನೆಯ ಸಮುಲ್ಲಾಸದಲ್ಲಿ ಮಹರ್ಷಿ ದಯಾನಂದರು "ಜೀವಾತ್ಮನು ಮುಕ್ತಿಯನ್ನು ಪಡೆದಮೇಲೆ, ತನ್ನ ಶುದ್ಧ

ಸ್ವರೂಪದಲ್ಲಿ ಇರುತ್ತಾನೆ. ಆದರೆ, ಈ ಸ್ಥಿತಿಯಲ್ಲಿಯೂ ಕೂಡ ಅವನು ಅಲ್ಪಜ್ಞ, ಮತ್ತು ಪರಿಮಿತ ಗುಣ, ಕರ್ಮ ಮತ್ತು ಸ್ವಭಾವ ಉಳ್ಳವನಾಗಿರುತ್ತಾನೆಯೇ ಹೊರತು, ಅವನು ಎಂದಿಗೂ ಪರಮಾತ್ಮನಿಗೆ ಸದೃಶನಾಗುವುದಿಲ್ಲ. ಪುನಃ ಅದೇ ಗ್ರಂಥದಲ್ಲಿ ಹದಿನೆಂಟನೆಯ ಸಮುಲ್ಲಾಸದಲ್ಲಿ ದಯಾನಂದರು, "ಜೀವನು ಎಷ್ಟು ಬೇಕಾದರೂ ತನ್ನ ಜ್ಞಾನ ಮತ್ತು ಸಾಮರ್ಥ್ಯವನ್ನು ಬೆಳೆಸಿಕೊಳ್ಳಬಹುದು, ಆದರೂ ಕೂಡ ಜೀವಾತ್ಮನ ಜ್ಞಾನ ಮತ್ತು ಸಾಮರ್ಥ್ಯವು ಒಂದು ಪರಿಮಿತಿಯೊಳಗೇ ಇರುತ್ತದೆ", ಎಂದು ಹೇಳಿದ್ದಾರೆ.

ಸಂಪೂರ್ಣ ವಿಶ್ವದ ಮಾತಂತೂ ಇರಲಿ, ಜೀವಾತ್ಮನಿಗೆ ತನ್ನ ಶರೀರದ ಜ್ಞಾನವೂ ಪೂರ್ಣವಾಗಿ ಇರುವುದಿಲ್ಲ. "ನೋಡಿ, ಒಬ್ಬ ವ್ಯಕ್ತಿಯು ಎಷ್ಟು ಬೇಕಾದರೂ ಸಾಧನೆಮಾಡಲಿ, ಆದರೂ ಕೂಡ ಅವನು ತನ್ನ ಶರೀರಾದಿಗಳ ರಚನೆಯ ರಹಸ್ಯವನ್ನು ಸಂಪೂರ್ಣವಾಗಿ ತಿಳಿದುಕೊಳ್ಳುವ ಸಾಮರ್ಥ್ಯವು ಅವನಲ್ಲಿ ಇರುವುದಿಲ್ಲ." ಎಂದು ಇದೇ ಪ್ರಕರಣದಲ್ಲಿ ದಯಾನಂದರು ಸ್ಪಷ್ಟಪಡಿಸಿದ್ದಾರೆ. ಮುಂದೆ ಯುಕ್ತಿಯನ್ನು ಕೊಡುತ್ತಾ, ಯಾರು ಅಲ್ಪನೂ ಮತ್ತು ಅಲ್ಪಜ್ಞನಾಗಿಯೂ ಇರುತ್ತಾನೆಯೋ, ಅವನು ಎಂದಿಗೂ ಸರ್ವವ್ಯಾಪಕ ಮತ್ತು ಸರ್ವಜ್ಞನಾಗಲಿಕ್ಕೆ ಸಾಧ್ಯವೇ ಇಲ್ಲ, ಯಾಕೆಂದರೆ, ಜೀವಾತ್ಮನು ಏಕದೇಶೀಯನಾಗಿದ್ದಾನೆ, ಮತ್ತು ಅವನ ಗುಣ ಕರ್ಮ ಮತ್ತು ಸ್ವಭಾವಕ್ಕೆ ಒಂದು ಸೀಮೆ ಇದೆ, ಎಂದು ದಯಾನಂದರು ವಾದಿಸಿದ್ದಾರೆ. ಈ ಕಾರಣ ದಿಂದಲೇ, ದಯಾನಂದರು ಹೇಳಿರುವಂತೆ, ಜೀವಾತ್ಮನು ಎಂದೆಂದಿಗೂ ಎಲ್ಲಾ ವಿದ್ಯೆ ಗಳನ್ನು ತಿಳಿದುಕೊಂಡು, ಎಲ್ಲಾ ರೀತಿಯಲ್ಲಿ ಯಥಾರ್ಥ ವಕ್ತಾ, ಎಂದಾಗಲಿಕ್ಕೆ ಸಾಧ್ಯವೇ ಇಲ್ಲ. ಆದುದರಿಂದ, ಜೈನರ ತೀರ್ಥಂಕರರು ,ಎಂದಿಗೂ ಪರಮಾತ್ಮ ನಾಗಲಿಕ್ಕೆ ಸಾಧ್ಯವಿಲ್ಲ.

ಜೈನರು, ಜೀವಾತ್ಮರನ್ನು ಬಿಟ್ಟು ಬೇರೆ ಯಾವುದೇ ಒಬ್ಬ ಸರ್ವವ್ಯಾಪಕ ಮತ್ತು ಸರ್ವಜ್ಞನಾದ ಪರಮಾತ್ಮನು ಇದ್ದಾನೆ ಎಂಬುದನ್ನು ಒಪ್ಪಿಕೊಳ್ಳುವುದಿಲ್ಲ. ಇವರ ಸಿದ್ಧಾಂತಕ್ಕನುಸಾರವಾಗಿ, ಜೀವಾತ್ಮನು ಸಾಧನೆ ಮಾಡುತ್ತಾ ಹೋಗಿ, ಕೊನೆಗೆ ಸರ್ವಜ್ಞನಾಗುತ್ತಾನೆ. ಅವನನ್ನೇ ಇವರು ಈಶ್ವರ ಎಂದು ನಂಬುತ್ತಾರೆ. ಜೈನರ ಈ ಸಿದ್ಧಾಂತವು ನಿರಾಧಾರವಾಗಿದೆ. ಇದನ್ನು ಖಂಡಿಸುತ್ತಾ, ದಯಾನಂದರು ಈ ರೀತಿ ಬರೆದಿದ್ದಾರೆ: **"ಕ್ಲೇಶಕರ್ಮವಿಪಾಕಾಶಯೈ..........॥"** (ಯೋ.ದ. 1-14), ಎಂದರೆ, ಅವಿದ್ಯಾದಿ ಐದು ಪ್ರಕಾರದ ಕ್ಲೇಶಗಳು, ಉತ್ತಮ ಮತ್ತು ಕೆಟ್ಟ ಕಾರ್ಯಗಳಿಂದ ಉತ್ಪನ್ನವಾಗುವ ಸಂಸ್ಕಾರಗಳು, ಇವುಗಳಿಂದ ಸದಾ ದೂರವಾಗಿ ರುವವನೂ, ಬಂಧನರಹಿತನೂ, ಆದ ಪೂರ್ಣಪುರುಷನನ್ನೇ ಪರಮಾತ್ಮನೆಂದು ಹೇಳುತ್ತಾರೆ. ಆ ಪರಮಾತ್ಮನು ಹೇಗಿದ್ದಾನೆ? ಎಂದು ಕೇಳುವಿರಾದರೆ, ಅವನಿಗಿಂತ ಅಧಿಕ ಅಥವಾ ಅವನಿಗೆ ಸಮಾನವಾದ ಯಾವುದೇ ವಸ್ತುವು ವಿಶ್ವದಲ್ಲಿ ಇಲ್ಲ

ಮತ್ತು ಅವನು ಸಚ್ಚಿದಾನಂದನು, ಜ್ಞಾನ ಸ್ವರೂಪನು, ಸರ್ವಶಕ್ತನು, ಎಂದು ಹೇಳಬಲ್ಲೆ. ಇಂತಹ ಶ್ರೇಷ್ಠ ಗುಣಗಳಿಂದ ಯುಕ್ತವಾದವನನ್ನೇ ನಾವು ಪರಮಾತ್ಮನೆಂದು ಕರೆಯುತ್ತೇವೆ. ಯಾಕೆಂದರೆ, **(ತತ್ರ ನಿರತಿಶಯಂ........॥** ಯೋ.ದ. 1-15) ಯಾರಲ್ಲಿ ನಿತ್ಯ ಸಂಪೂರ್ಣ ಜ್ಞಾನವಿದೆಯೋ, ಮತ್ತು ಯಾರ ಜ್ಞಾನದಿ ಗುಣಗಳು ಅನಂತವಾಗಿವೆಯೋ, ಅವನೇ ಪರಮಾತ್ಮನು. ಜೀವಾತ್ಮರ ಸಾಮರ್ಥ್ಯವು ಎಷ್ಟು ಸೀಮಿತವಾಗಿದೆ, ಎಂಬುದನ್ನು ನಾವು ಪ್ರತ್ಯಕ್ಷ ನೋಡುತ್ತಿದ್ದೇವೆ." (ಋಗ್ವೇದಾದಿ ಭಾಷ್ಯ ಭೂಮಿಕೆ, ಉಪಾಸನಾ ವಿಷಯ).

ಮಹರ್ಷಿ ದಯಾನಂದರ ಈ ವಾಕ್ಯಗಳಿಂದ, ಜೀವಾತ್ಮರ ಸರ್ವಜ್ಞತೆಯ ಖಂಡನೆಯಾಗುತ್ತದೆ. ಕೇವಲ ಪರಮಾತ್ಮನ ಜ್ಞಾನಾದಿ ಗುಣಗಳು ಅನಂತವಾಗಿವೆ. ಯಾರಲ್ಲಿ ಜ್ಞಾನದಿ ಗುಣಗಳ ಪರಾಕಾಷ್ಠವು ಕಾಣುತ್ತದೆಯೋ, ಯಾರ ಸಾಮರ್ಥ್ಯಕ್ಕೆ ಮಿತಿ ಇಲ್ಲವೋ ಅವನೇ ಪರಮಾತ್ಮನಾಗಿದ್ದಾನೆ. ಜೀವರ ಸಾಮರ್ಥ್ಯಕ್ಕೆ ಮಿತಿ ಇದೆ. ಎಂದರೆ, ಇವರ ಜ್ಞಾನಾದಿ ಗುಣಗಳು ಎಂದಿಗೂ ಅಪರಿಮಿತವಾಗಲಿಕ್ಕೆ ಸಾಧ್ಯವಿಲ್ಲ. ಇದು ನಮಗೆ ಪ್ರತ್ಯಕ್ಷ ಕಂಡುಬರುವ ವಿಷಯವಾಗಿದೆ.

**"ತತ್ರ ನಿರತಿಶಯಂ ಸರ್ವಜ್ಞಬೀಜಂ"** (ಯೋ.ದ. 1-25), ಈ ಸೂತ್ರದ ಭಾಷ್ಯೆಯಲ್ಲಿ, ವ್ಯಾಸರು ಈ ರೀತಿ ಬರೆದಿದ್ದಾರೆ:

**"ಯತ್ರ ಕಾಷ್ಠಾಪ್ರಾಪ್ತಿರ್ಜ್ಞಾನಸ್ಯ ಸ ಸರ್ವಜ್ಞಃ ಸ ಚ ಪುರುಷ ವಿಶೇಷ ಇತಿ"**, ಎಂದರೆ, ಯಾರು ಅನಂತ ಜ್ಞಾನ ನಿಧಿಯಾಗಿದ್ದಾನೆಯೋ, ಅವನೇ ಸರ್ವಜ್ಞ ಮತ್ತು ಪುರುಷ ವಿಶೇಷನಾಗಿದ್ದಾನೆ.

ಒಂದು ವೇಳೆ, ಒಬ್ಬ ಯೋಗಿಯು ಪರಮಾತ್ಮನಂತೆ ಸರ್ವಜ್ಞನಾಗಬಹುದು, ಎಂಬುದು ವ್ಯಾಸರ ಅಭಿಪ್ರಾಯವಾಗಿದ್ದರೆ, ಅವರು ಯಾರು ಜ್ಞಾನದ ಅನಂತ ನಿಧಿಯಾಗಿದ್ದಾನೆಯೋ, ಅವನೇ ಸರ್ವಜ್ಞ ಮತ್ತು ಪುರುಷ ವಿಶೇಷನಾಗಿರುವ ಪರಮಾತ್ಮ ಎಂದು ಹೇಳುತ್ತಿರಲಿಲ್ಲ. ಯೋಗಾಭ್ಯಾಸದಿಂದ ಒಬ್ಬ ಯೋಗಿಯು ಪರಮಾತ್ಮನಂತೆ ಸರ್ವಜ್ಞನಾಗಬಹುದಾದರೆ, ಯಾರು ಬೇಕಾದರೂ ಈ ರೀತಿ ಸರ್ವಜ್ಞನಾಗಬಹುದು. ಆದರೆ, ಅವನನ್ನು ನಾವು ಒಬ್ಬ ಪುರುಷವಿಶೇಷನೆಂದು ಹೇಳಲಿಕ್ಕೆ ಸಾಧ್ಯವಿಲ್ಲ. ಯಾಕೆಂದರೆ, ಇಂತಹ ಸರ್ವಜ್ಞರು ಅನೇಕಮಂದಿ ಹುಟ್ಟಬಹುದು, ಇದು ನಿಜವಲ್ಲ. ಆದುದರಿಂದ, ವ್ಯಾಸರ ದೃಷ್ಟಿಯಲ್ಲಿಯೂ ಒಬ್ಬ ಯೋಗಿಯು ಪರಮಾತ್ಮನಂತೆ ಸರ್ವಜ್ಞನಾಗಲಿಕ್ಕೆ ಸಾಧ್ಯವಿಲ್ಲ.

ಮಹರ್ಷಿ ದಯಾನಂದರು, ಸತ್ಯಾರ್ಥ ಪ್ರಕಾಶದಲ್ಲಿ 'ಸ್ವಮಂತವ್ಯಾಮಂತವ್ಯ ಪ್ರಕಾಶ'ದೊಳಗೆ, "ಬ್ರಹ್ಮಾದಿ ಮಹರ್ಷಿಗಳು ವೇದಗಳ ವ್ಯಾಖ್ಯಾನ ರೂಪದಲ್ಲಿ ರಚಿಸಿದ ಒಂದು ಸಾವಿರದ ನೂರ ಇಪ್ಪತ್ತೇಳು ಶಾಖಾ ಗ್ರಂಥಗಳಿವೆ. ಇವೆಲ್ಲಾ

ಪರತಃ ಪ್ರಮಾಣಗಳು, ಎಂದರೆ, ವೇದಗಳಿಗೆ ಅನುಕೂಲವಾಗಿರುವುದರಿಂದ ಪ್ರಮಾಣ ಗ್ರಂಥಗಳಾಗಿವೆ. ಮತ್ತು ಇವುಗಳಲ್ಲಿ ಯಾವುದೆಲ್ಲಾ ವೇದವಿರುದ್ಧವಾಗಿವೆಯೋ, ಅವುಗಳನ್ನೆಲ್ಲಾ, ಪ್ರಮಾಣ ಗ್ರಂಥಗಳಾಗಿ ಸ್ವೀಕರಿಸಲು ಸಾಧ್ಯವಿಲ್ಲ" ಎಂದು ಹೇಳಿದ್ದಾರೆ.

ನಮ್ಮ ದೇಶದಲ್ಲಿ ಮಹರ್ಷಿ ಬ್ರಹ್ಮ ಮೊದಲಾದ ಅನೇಕ ಮಂದಿ ಋಷಿಗಳು ಹುಟ್ಟಿದ್ದಾರೆ, ಇವರೆಲ್ಲಾ ಯೋಗಿಗಳಾಗಿದ್ದರು. ಇವರಲ್ಲಿ ಅನೇಕ ಮಂದಿ ವೇದಗಳ ಅಂಗೋಪಾಂಗಗಳ ರಚನೆ ಮಾಡಿದ್ದಾರೆ. ಮಹರ್ಷಿ ದಯಾನಂದರು ವ್ಯಾಸರನ್ನು ಯೋಗಿಗಳೆಂದು ಹೇಳಿದ್ದಾರೆ. ವ್ಯಾಸರು ವೇದಾಂತ ದರ್ಶನದ ರಚನೆಯನ್ನು ಮಾಡಿದ್ದಾರೆ. ಇದೇ ರೀತಿಯಲ್ಲಿ ಇನ್ನೂ ತುಂಬಾ ಮಂದಿ ಸಿದ್ಧಯೋಗಿಗಳು ಗ್ರಂಥಗಳ ರಚನೆ ಮಾಡಿದ್ದಾರೆ. ಒಂದು ವೇಳೆ, ಇಂಥ ಸಿದ್ಧಯೋಗಿಗಳು ಪರಮಾತ್ಮನಂತೆ ಸರ್ವಜ್ಞರು ಎಂಬ ಮಾತು ನಿಜವಾಗಿದ್ದರೆ, "ವೇದಗಳಿಗೆ ಅನುಕೂಲವಾಗಿರುವುದರಿಂದ ಪ್ರಮಾಣ, ಮತ್ತು ಇವುಗಳಲ್ಲಿ ಕಂಡು ಬರುವ ವೇದ-ವಿರುದ್ಧ ವಚನಗಳು ಅಪ್ರಮಾಣಗಳಾಗಿವೆ" ಎಂದು ದಯಾನಂದರು ಬರೆಯುತ್ತಿರಲಿಲ್ಲ. ಯೋಗಿಗಳು ಪರಮಾತ್ಮನಂತೆ ಸರ್ವಜ್ಞರೆಂಬ ಮಾತು ನಿಜವಾಗಿದ್ದರೆ, ಅವರು ಬರೆದ ಗ್ರಂಥಗಳಲ್ಲಿ ವೇದ-ವಿರುದ್ಧ ಮಾತುಗಳು ಕಂಡು ಬರಲಿಕ್ಕೆ ಸಾಧ್ಯ ಇದ್ದಿಲ್ಲ. ದಯಾನಂದರು ಆ ಗ್ರಂಥಗಳನ್ನೆಲ್ಲಾ ವೇದಗಳಂತೆಯೆ ಸ್ವತಃ ಪ್ರಮಾಣಗಳ ರೂಪದಲ್ಲಿ ಸ್ವೀಕರಿಸುತ್ತಿದ್ದರು. ಆದುದರಿಂದ, ಒಬ್ಬ ವ್ಯಕ್ತಿಯು ಎಷ್ಟು ದೊಡ್ಡ ಸಿದ್ಧ ಯೋಗಿಯೇ ಆಗಿರಲಿ, ಅವನು ಎಂದಿಗೂ ಪರಮಾತ್ಮನಂತೆ ಸರ್ವಜ್ಞನಾಗಲಿಕ್ಕೆ ಸಾಧ್ಯವಿಲ್ಲ ಎಂದು ಸಿದ್ಧವಾಗುತ್ತದೆ.

**ಪ್ರಶ್ನೆ :—** ಒಬ್ಬ ಜೀವಾತ್ಮನು ಪರಮಾತ್ಮನಂತೆ ಸರ್ವಜ್ಞನಾಗಲು ಯಾಕೆ ಸಾಧ್ಯವಿಲ್ಲ?

**ಉತ್ತರ:—** ಜೀವಾತ್ಮನು ಏಕದೇಶೀಯನಾಗಿರುವುದರಿಂದ ಪರಮಾತ್ಮನಂತೆ ಸರ್ವಜ್ಞನಾಗಲಿಕ್ಕೆ ಸಾಧ್ಯವಿಲ್ಲ. ಈ ಮಾತನ್ನು ಮಹರ್ಷಿ ದಯಾನಂದರು ಈ ರೀತಿಯಲ್ಲಿ ಸ್ಪಷ್ಟಮಾಡಿದ್ದಾರೆ:

**ಪ್ರಶ್ನೆ:—** ಜೀವಾತ್ಮನು ಶರೀರದಲ್ಲಿ ಭಿನ್ನ, ವಿಭು ಅಥವಾ ಪರಿಚ್ಛಿನ್ನನಾಗಿರುವನೇ?

**ಉತ್ತರ:—** ಜೀವಾತ್ಮನು ಶರೀರದಲ್ಲಿ ಪರಿಚ್ಛಿನ್ನನಾಗಿದ್ದಾನೆ. ಒಂದು ವೇಳೆ, ಜೀವಾತ್ಮನು ವಿಭುವಾಗಿರುತ್ತಿದ್ದರೆ, ಅವನಿಗೆ ಜಾಗ್ರತ, ಸ್ವಪ್ನ, ಸುಷುಪ್ತಿ, ಮರಣ, ಜನ್ಮ, ಸಂಯೋಗ, ವಿಯೋಗ ಮತ್ತು ಗಮನಾಗಮನ, ಇವು ಸಾಧ್ಯವಿದ್ದಿಲ್ಲ." (ಸತ್ಯಾರ್ಥ ಪ್ರಕಾಶ, ಸಪ್ತಮ ಸಮುಲ್ಲಾಸ).

ಎಂದರೆ, ಜೀವಾತ್ಮನು ಪರಮಾತ್ಮನಂತೆ ಸರ್ವವ್ಯಾಪಕನಾಗಿದ್ದರೆ, ನಾವೀಗ ನೋಡುತ್ತಿರುವಂತೆ, ಅವನಿಗೆ ಜಾಗೃತ, ಸ್ವಪ್ನ, ಸುಷುಪ್ತಿ ಮೊದಲಾದ ಸ್ಥಿತಿಗಳನ್ನು ಹೊಂದಲು ಸಾಧ್ಯವಿಲ್ಲ. ಯಾಕೆಂದರೆ, ಸುಷುಪ್ತಿಯ ಸ್ಥಿತಿಯಲ್ಲಿ ಮನಸ್ಸು ಮತ್ತು ಇಂದ್ರಿಯಗಳಿಂದ ಜೀವಾತ್ಮನ ಸಂಬಂಧವು ಕಡಿದು ಹೋಗುತ್ತದೆ; ಈ ರೀತಿ ಸಂಬಂಧವು ಕಡಿದು ಹೋಗುವ ಕಾರಣದಿಂದ, ಜೀವಾತ್ಮನಿಗೆ ಬಾಹ್ಯ ಪ್ರಪಂಚದ ಜ್ಞಾನವು ಇರುವುದಿಲ್ಲ. ಒಂದು ವೇಳೆ, ಜೀವಾತ್ಮನು ಸರ್ವವ್ಯಾಪಕನಾಗಿದ್ದರೆ, ಮನಸ್ಸು ಮತ್ತು ಇಂದ್ರಿಯಗಳೊಂದಿಗೆ ಅವನ ಸಂಬಂಧವು ಕಡಿದುಹೋಗಲು ಸಾಧ್ಯವಿಲ್ಲ; ಅವನಿಗೆ ಎಲ್ಲಾ ಸಮಯದಲ್ಲಿಯೂ ಎಲ್ಲಾ ವ್ಯವಹಾರಗಳ ಜ್ಞಾನವೂ ಇದ್ದಕ್ಕಿದ್ದ ಹಾಗೆ ಇರಬೇಕಿತ್ತು. ಆದರೆ, ಸುಷುಪ್ತಿಯ ಸ್ಥಿಯಲ್ಲಿ ಯಾವ ಜೀವಕ್ಕೂ ಬಾಹ್ಯ ಪ್ರಪಂಚದ ಅರಿವು ಇರುವುದಿಲ್ಲ. ಆದುದರಿಂದ, ಸೃಷ್ಟಿಯಲ್ಲಿ ಪರಮಾತ್ಮನಂತೆ, ಜೀವಾತ್ಮನು ಸರ್ವತ್ರ ವ್ಯಾಪಕನಾಗಿರುವುದಿಲ್ಲ, ಎಂದು ಸಿದ್ಧವಾಗುತ್ತದೆ. ಇದೇ ರೀತಿ ಜನ್ಮ, ಮೃತ್ಯು, ಸಂಯೋಗ, ವಿಯೋಗ, ಗಮನಾಗಮನಾದಿ ವ್ಯವಹಾರಗಳು ಸರ್ವವ್ಯಾಪಕನಲ್ಲಿ ಇರುವುದಿಲ್ಲ.

ಜೀವಾತ್ಮನು ಸರ್ವವ್ಯಾಪಕನೆಂಬ ಮಾತು ನಿಜವಾದರೆ ಅದರಲ್ಲಿ ಇನ್ನೂ ಒಂದು ದೋಷವು ಕಂಡು ಬರುತ್ತದೆ. ಭಾರತದಲ್ಲಿ ಇರುವ ಒಬ್ಬ ಜೀವಾತ್ಮನಿಗೆ ಅಮೇರಿಕಾದಲ್ಲಿರುವ ಜೀವಾತ್ಮನ ಸುಖ, ದುಃಖ ಇತ್ಯಾದಿಗಳ ಅರಿವು ಇರುವುದಿಲ್ಲ. ಜೀವಾತ್ಮನು ಸರ್ವವ್ಯಾಪಕನಾಗಿದ್ದರೆ, ಅವನು ಅಮೆರಿಕಾದಲ್ಲಿರುವ ಜೀವಾತ್ಮನ ಮನಸ್ಸು ಮತ್ತು ಶರೀರದಲ್ಲಿಯೂ ವ್ಯಾಪಕನಾಗಿರುವುದರಿಂದ ಅವನಿಗೆ ಆ ದೂರ ದೇಶದ ವ್ಯಕ್ತಿಯ ಮನಸ್ಸಿನ ಸುಖ-ದುಃಖ ಮೊದಲಾದ ಭಾವನೆಗಳ ಅರಿವು ಆಗಲೇ ಬೇಕು. ಆದರೆ, ಅದು ಹಾಗೆ ಆಗುವುದಿಲ್ಲ. ಇದರಿಂದ ಜೀವಾತ್ಮನು ಸರ್ವವ್ಯಾಪಕನಲ್ಲ ಎಂದು ಸಿದ್ಧವಾಗುತ್ತದೆ. ಹೀಗೆ ಜೀವಾತ್ಮನು ಸರ್ವವ್ಯಾಪಕನಾಗಿರದಿರುವುದರಿಂದ ಅವನು ಸರ್ವಜ್ಞನಾಗಿರಲಿಕ್ಕೂ ಸಾಧ್ಯವಿಲ್ಲ.

ಕೆಲವು ಕಡೆಗಳಲ್ಲಿ ಜೀವಾತ್ಮನನ್ನು ಸರ್ವಜ್ಞನೆಂದು ವರ್ಣಿಸಿರುವುದರಿಂದ, ಜೀವಾತ್ಮನು, ಸರ್ವಜ್ಞ ಎಂಬ ಭ್ರಮೆಯು ಜನರಲ್ಲಿ ಹರಡಿದೆ. ನ್ಯಾಯದರ್ಶನದ, ವಾತ್ಸಾಯನ ಭಾಷೆಯಲ್ಲಿ, **"ತತ್ರಾತ್ಮಾ ಸರ್ವಸ್ಯ ದ್ರಷ್ಟಾ ಸರ್ವಸ್ಯಭೋಕ್ತಾ ಸರ್ವಜ್ಞ ಸರ್ವಾನುಭವೀ"** (ನ್ಯಾಯದರ್ಶನ 1-1-9) ಎಂದಿದೆ. ಇಲ್ಲಿ ಜೀವಾತ್ಮನನ್ನು ಸರ್ವಜ್ಞನೆಂದು ಹೇಳಿದ್ದಾರೆ. ಇದು ನಿಜ. ಆದರೆ, ಇಲ್ಲಿ 'ಸರ್ವಜ್ಞ' ಶಬ್ದವು ಸೀಮಿತ ಅರ್ಥದಲ್ಲಿ ಪ್ರಯುಕ್ತವಾಗಿದೆ. ಇಲ್ಲಿ, 'ಸರ್ವಜ್ಞ' ಎಂದರೆ, ಸಂಪೂರ್ಣ ವಿಶ್ವದ ಜ್ಞಾನ ಉಳ್ಳವನೆಂಬ ತಾತ್ಪರ್ಯವಲ್ಲ. ತನ್ನ ಇಂದ್ರಿಯ ಮತ್ತು ಮನಸ್ಸಿನ ಎಲ್ಲಾ

ವ್ಯವಹಾರಗಳನ್ನು ಜೀವಾತ್ಮನು ತಿಳಿದುಕೊಂಡಿರುತ್ತಾನೆ, ಎಂದು ವಾತ್ಸಾಯನರ ಅಭಿಪ್ರಾಯವಾಗಿದೆ. ಎಂದರೆ, ಇಂದ್ರಿಯಗಳ ವಿಷಯಗಳು ಎಷ್ಟಿವೆ, ಯಾವ ಇಂದ್ರಿಯಗಳಿಗೆ ಯಾವ ವಿಷಯಗಳು, ಈ ಶರೀರವು ಯಾವ ರೀತಿಯಲ್ಲಿ ವಿಷಯ ಭೋಗಗಳ ಆಯತನ(=ಆಶ್ರಯಸ್ಥಾನ)ವಾಗಿದೆ, ಈ ಎಲ್ಲಾ ಮಾತುಗಳು ಜೀವಾತ್ಮನಿಗೆ ಗೊತ್ತಿರುತ್ತದೆ. ಈ ದೃಷ್ಟಿಯಲ್ಲಿ ಜೀವಾತ್ಮನನ್ನು ಸರ್ವಜ್ಞನೆಂದು ವಾತ್ಸಾಯನರು ಹೇಳಿದ್ದಾರೆ.

ಯೋಗ ದರ್ಶನಯದಲ್ಲಿಯೂ ಇಂತಹ ಪ್ರಯೋಗಗಳು ಕಂಡುಬರುತ್ತವೆ. ಯಥಾ:

(ಕ) **ಸತ್ಪುರುಷಾನ್ಯತಾಖ್ಯಾತಿ ಮಾತ್ರಸ್ಯ**
**ಸರ್ವಭಾವಾಧಿಷ್ಠಾತೃತ್ವಂ ಸರ್ವಜ್ಞಾನತೃತ್ವಂ ಚ ॥**

(ಯೋಗ ದರ್ಶನ 3-49)

ಇಲ್ಲಿ **'ಸರ್ವಜ್ಞಾತೃತ್ವ'** ಶಬ್ದವು ಬಂದಿದೆ. ಇದರ ಅಭಿಪ್ರಾಯ, ಶಾಂತ, ಉದಿತ, ಅವ್ಯಪದೇಶ್ಯಧರ್ಮದ ಗುಣಗಳು ಜ್ಞಾನವು ಜೀವಾತ್ಮನಿಗೆ ಇರುತ್ತದೆ, ಎಂದಾಗುತ್ತದೆ. ಸತ್ವ, ರಜಸ್ಸು ಮತ್ತು ತಮೋ ಗುಣಗಳ ವ್ಯಾಪಾರವನ್ನು ಜೀವಾತ್ಮನು ಚೆನ್ನಾಗಿ ತಿಳಿದುಕೊಳ್ಳುತ್ತಾನೆ. ಈ ಜ್ಞಾನದ ಉದಯವು ಅವನಿಗೆ ಆದಾಗ, ತನ್ನನ್ನು ತಾನೇ ಆತನು ಪ್ರಕೃತಿಯಿಂದ ಭಿನ್ನವೆಂದು ತಿಳಿದುಕೊಂಡು, ಅವನು ಸತ್ವಾದಿ ಗುಣಗಳ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿಕೊಳ್ಳುತ್ತಾನೆ. ಆದುದರಿಂದ, ಇಲ್ಲಿ, **'ಸರ್ವಜ್ಞಾತೃತ್ವ'** ಎಂದರೆ, ಗುಣತ್ರಯಗಳ ಎಲ್ಲಾ ವ್ಯವಹಾರಗಳನ್ನು ತಿಳಿದುಕೊಳ್ಳುವ ಯೋಗ್ಯತೆ, ಎಂದಾಗುತ್ತದೆ. ಈ ಶಬ್ದದ ಸರಿಯಾದ ಅರ್ಥವನ್ನು ತಿಳಿದುಕೊಳ್ಳ ಬೇಕಾದರೆ, ಮೊದಲು ಪೂರ್ವಾಪರ ಪ್ರಸಂಗವನ್ನು ತಿಳಿದುಕೊಳ್ಳಬೇಕಾಗುತ್ತದೆ. ಒಂದು ವೇಳೆ, ಈ ಸೂತ್ರದಲ್ಲಿ ಬಂದಿರುವ **'ಸರ್ವಜ್ಞಾತೃತ್ವ'** ಎಂಬ ಶಬ್ದದ ಅರ್ಥವು, ಒಬ್ಬ ಯೋಗಿಯು ಪರಮಾತ್ಮನಂತೆ ಸರ್ವಜ್ಞನಾಗುತ್ತಾನೆ, ಎಂದಾಗಿದ್ದರೆ, ಸೂರಕಾರರು, ಈ ಸರ್ವಜ್ಞತೆಯನ್ನು ಬಿಟ್ಟುಕೊಡಬೇಕೆಂಬ ಅಭಿಪ್ರಾಯದಿಂದ ಇನ್ನೊಂದು ಸೂತ್ರವನ್ನು ಬರೆಯುತ್ತಿರಲಿಲ್ಲ.

**"ತದ್ವೈರಾಗ್ಯದಪಿ ದೋಷಬೀಜಕ್ಷಯೇ ಕೈವಲ್ಯಂ"** (ಯೋಗ ದರ್ಶನ 3-50). ಅರ್ಥಾತ್, ಈ ಸರ್ವಜ್ಞಾತೃತ್ವದ ಮೇಲೆಯೂ ವೈರಾಗ್ಯವೂ ಬಂದಾಗ ಮತ್ತು ದೋಷಬೀಜವು ನಶಿಸಿಹೋದಾಗ, ಜೀವಾತ್ಮನಿಗೆ ಮೋಕ್ಷವು ಒದಗುತ್ತದೆ.

ಒಂದು ವೇಳೆ, ಈ ಸರ್ವಜ್ಞಾತೃತ್ವವು, ಪರಮಾತ್ಮನ ಸರ್ವಜ್ಞತೆಯಂತೆಯೆ ಆಗಿದ್ದರೆ, ಅದರ ಮೇಲೆ ವೈರಾಗ್ಯವು ಉತ್ಪನ್ನವಾಗುವ ಪ್ರಶ್ನೆಯೇ ಹುಟ್ಟುವುದಿಲ್ಲ.

**(ಖ) ಯೋಗದರ್ಶನದಲ್ಲಿ ಒಂದು ಕಡೆ 'ಆನಂತ್ಯ' ಎಂಬ ಶಬ್ದವೂ ಬಂದಿದೆ. ಯಥಾ:—**

**"ತದಾ ಸರ್ವಾವರಣ ಮಲಾಪೇತಸ್ಯ ಜ್ಞಾನಸ್ಯಾನಂತ್ಯಾಜ್‌ಜ್ಞೇಯಮಲ್ಪಂ"**

(ಯೋ.ದ. 4-31).

ಇದರಿಂದಲೂ ಕೆಲವರಿಗೆ, ಯೋಗಿಯೂ ಪರಮಾತ್ಮನಂತೆ ಅನಂತನಾಗುತ್ತಾನೆ, ಎಂಬ ಭ್ರಾಂತಿಯಾಗಿದೆ. ನಿಜಸಂಗತಿ ಏನೆಂದರೆ, **'ಆನಂತ್ಯ'** ಶಬ್ದಕ್ಕೆ ಇಲ್ಲಿ ಪ್ರಾಸಂಗಿಕವಾಗಿ **'ಅಧಿಕ'** ಎಂದಷ್ಟೇ ಅರ್ಥವಾಗುತ್ತದೆ. ಒಬ್ಬ ಯೋಗಿಯು ವಿಭಿನ್ನ ಸಾಧನಗಳ ಅನುಷ್ಠಾನವನ್ನು ಮಾಡುತ್ತಾ ಹೋದಂತೆ, ಒಂದು ಸಮಯದಲ್ಲಿ, ಬಹಳ ಉನ್ನತ ಸ್ಥಿತಿಯನ್ನು ಹೊಂದುತ್ತಾನೆ. ಆಗ ಅವನಿಗೆ ಇಷ್ಟು ಜ್ಞಾನವೃದ್ಧಿಯಾಗಿರುತ್ತದೆ, ಎಂದರೆ, ಅವನು ಏನೆಲ್ಲಾ ತಿಳಿದುಕೊಳ್ಳಬೇಕೆಂದು ಭಾವಿಸುತ್ತಾನೆಯೋ, ಅವೆಲ್ಲಾ ಅವನಿಗೆ ಬಹಳ ಸುಲಭವಾಗಿ ತಿಳಿದುಬರುತ್ತವೆ. ಲೋಕದಲ್ಲಿ ನಾವು ನಿತ್ಯ ನೋಡುವ ಒಂದು ಮಾತು; ಯಾವ ಕಾರ್ಯವನ್ನು ಒಬ್ಬ ಸಾಮಾನ್ಯ ವ್ಯಕ್ತಿಯು ಬಹಳ ಕಷ್ಟಪಟ್ಟು ಮಾಡುತ್ತಾನೆಯೋ ಅದೇ ಕಾರ್ಯವನ್ನು ಇನ್ನೊಬ್ಬ ಬಲಶಾಲಿಯಾದ ವ್ಯಕ್ತಿಯು ಬಹಳ ಸುಲಭವಾಗಿ ಮಾಡುತ್ತಾನೆ. ಸಾಮಾನ್ಯ ಜನರಿಗೂ, ಒಬ್ಬ ಯೋಗಿಗೂ ಇದೇ ರೀತಿಯ ವ್ಯತ್ಯಾಸವಿದೆ. ಸಾಮಾನ್ಯ ಜನರಿಗೆ ಒಂದು ವಿಷಯವನ್ನು ತಿಳಿದುಕೊಳ್ಳಬೇಕಾದರೆ, ಬಹಳ ಕಷ್ಟವಾಗುತ್ತದೆ. ಆದರೆ, ಅದೇ ವಿಷಯವು ಒಬ್ಬ ಯೋಗಿಗೆ ಬಹಳ ಸುಲಭವಾಗಿ ಗೊತ್ತಾಗುತ್ತದೆ. ಹೇಯ, ಹೇಯ ಹೇತು, ಹಾನ ಮತ್ತು ಹಾನೋಪಾಯ— ಇವುಗಳನ್ನು ಯೋಗಿಯು ತಿಳಿದುಕೊಳ್ಳಬೇಕಾಗುತ್ತದೆ. ಸಾಮಾನ್ಯ ಜನರಿಗೆ ಇದು ಬಹಳ ಕಠಿಣವಾಗಿದೆ. ಆದರೆ, ಯೋಗಿಗೆ ಇದು ಅಷ್ಟು ಕಠಿಣವಲ್ಲ; ಸ್ವಲ್ಪ ಪ್ರಯಾಸವೇ ಸಾಕಾಗುತ್ತದೆ. ಯೋಗದರ್ಶನದಲ್ಲಿ, ಮೇಲೆ ಹೇಳಿದ ಸೂತ್ರದಲ್ಲಿ ಬಂದಿರುವ **'ಆನಂತ್ಯ'** ಶಬ್ದವೂ ಇದೇ ರೀತಿಯಲ್ಲಿ ಪ್ರಸಂಗಕ್ಕನುಸಾರವಾಗಿ ಸೀಮಿತ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಪ್ರಶ್ನೆ :** ಒಬ್ಬ ಯೋಗಿಯನ್ನು ಯಾರಾದರೂ, ಒಂದು ವೇಳೆ, ಪರಮಾತ್ಮನಿಗೆ ಸಮಾನನೆಂದು ತಿಳಿದುಕೊಂಡರೆ, ಅದರಿಂದ ಹಾನಿಯೇನು?

**ಉತ್ತರ :** ಲೋಕದಲ್ಲಿ ಒಂದು ಸುಳ್ಳು ಸಿದ್ಧಾಂತವನ್ನು ಒಂದು ಸಾರಿ ಸ್ವೀಕರಿಸಿಕೊಂಡ ನಂತರ, ಅದನ್ನು 'ಸರಿ' ಎಂದು ಸಿದ್ಧಪಡಿಸುವುದಕ್ಕೋಸ್ಕರ ಇನ್ನೊಂದು ಸುಳ್ಳು ಸಿದ್ಧಾಂತವನ್ನು ಮುಂದೆ ತರಬೇಕಾಗುತ್ತದೆ. ಉದಾಹರಣೆಗಾಗಿ ಹೇಳುವುದಾದರೆ, ಯಾರೋ ಒಬ್ಬ ವಿದ್ವಾಂಸನು ಜಗತ್ತಿನಲ್ಲಿ ಬ್ರಹ್ಮನ ಹೊರತು ಬೇರೆ ಏನೂ ಇಲ್ಲ, ಎಂಬ ಒಂದು

ಸುಳ್ಳು ಸಿದ್ಧಾಂತವನ್ನು ಪ್ರಚಾರ ಮಾಡಿದನು. ಬಳಿಕ, ಈ ಸಿದ್ಧಾಂತವು ಸರಿ ಎಂದು ಸಿದ್ಧಪಡಿಸುವುದಕ್ಕಾಗಿ ಅನೇಕ ನಿರಾಧಾರ ಸಿದ್ಧಾಂತಗಳನ್ನು ಆತ ಮುಂದೆ ತಂದನು. ಅನೇಕ ಗ್ರಂಥಗಳನ್ನು ಬರೆದನು. ಲಕ್ಷಾಂತರ ಜನರನ್ನು ಈ ಭ್ರಮೆಯ ಜಾಲದಲ್ಲಿ ಸಿಕ್ಕಿಸಿ ಹಾಕಿ, ಅವರು ತಮ್ಮ ಅಮೂಲ್ಯ ಮಾನವ ಜೀವನವನ್ನು ವ್ಯರ್ಥವಾಗಿ ಕಳೆದುಕೊಳ್ಳುವ ಹಾಗೆ ಮಾಡಿದನು. ಕೆಲವು ಜನರು ಯೋಗಿಗಳನ್ನು ಸರ್ವಜ್ಞರೆಂದು ನಂಬಿಕೊಂಡರು, ಬಳಿಕ ಅವರ ಪೂಜೆಯನ್ನು ಮಾಡಿದರು. ಈಗ ಪ್ರಪಂಚದಲ್ಲಿ ಕೇವಲ ತಮ್ಮ ಗುರುಗಳ ಉಪಾಸನೆಯನ್ನು ಮಾಡುವವರು ತುಂಬಾ ಮಂದಿ ಇದ್ದಾರೆ. ಇದರಿಂದಲೇ ತಮಗೆ ಮುಕ್ತಿಯು ಲಭಿಸುತ್ತದೆ ಎಂದು ಇವರ ನಂಬಿಕೆಯಾಗಿದೆ.

ಕೆಲವರು, ತಮ್ಮ ಗುರುಗಳಿಗೆ ಯೋಗವು ಸಿದ್ಧವಾದಾಗ ಅವರನ್ನು ದೇವರೆಂಡೇ ಭಾವಿಸುತ್ತಾರೆ. ಇಂತಹ ಜನರು ಪರಮಾತ್ಮನ ಅಸ್ತಿತ್ವವನ್ನು ಸ್ವೀಕರಿಸುವುದಿಲ್ಲ. ಸಾಧನೆ ಮಾಡುತ್ತಾ ಮಾಡುತ್ತಾ ಹೋಗಿ, ಒಂದು ದಿನ ಜೀವಾತ್ಮನೇ ಪರಮಾತ್ಮನಾಗುತ್ತಾನೆ, ಎಂದು ಇವರ ನಂಬಿಕೆ. ಜೀವಾತ್ಮನನ್ನು ಸರ್ವಜ್ಞನೆಂದು ನಂಬಿದರೆ, ಆಗುವ ಪರಿಣಾಮವೇ ಇದಾಗಿದೆ. ಇಂತಹ ಗುರುಗಳು ತಮ್ಮ ಶಿಷ್ಯರಿಂದ ತಮ್ಮ ಪೂಜೆಯನ್ನು ಮಾಡಿಸಿಕೊಳ್ಳುತ್ತಾರೆ. ಇವರು ತಾವಂತೂ ಅಜ್ಞಾನಾಂಧಕಾರದಲ್ಲಿ ಬಿದ್ದಿರುತ್ತಾರೆ. ತಮ್ಮ ಶಿಷ್ಯರನ್ನೂ ಕೂಡ, ಅವಿದ್ಯಾರೂಪೀ ಅಂಧಕಾರದಿಂದ ಹೊರಗೆ ಬರಲಿಕ್ಕೆ ಬಿಡುವುದಿಲ್ಲ. ಯೋಗಿಗಳನ್ನು ಪರಮಾತ್ಮನೆಂದು ನಂಬಿದರೆ ಇಂತಹ ಅನರ್ಥಗಳಾಗುತ್ತವೆ. ಆದುದರಿಂದ, ವಿದ್ಯೆಯ ವೃದ್ಧಿ ಮತ್ತು ಅವಿದ್ಯೆಯ ನಾಶಕ್ಕಾಗಿ, ಸಜ್ಜನರು ಇಂತಹ ನಿರಾಧಾರವಾದ ಸಿದ್ಧಾಂತಗಳನ್ನು ಬಿಟ್ಟುಬಿಡಬೇಕು ಮತ್ತು ಸತ್ಯವನ್ನು ಒಪ್ಪಿಕೊಳ್ಳಬೇಕು.

## 8. ಖಡ್ಗಾದಿಗಳಿಂದ ಯೋಗಿಯ ಅಂಗಗಳನ್ನು ಕಡಿದರೆ ನೋವು ಆಗುವುದಿಲ್ಲವೆ, ಎಂಬ ಪ್ರಶ್ನೆ

ಯೋಗ ವಿದ್ಯೆಯ ಕ್ಷೇತ್ರದಲ್ಲಿ ಎಂಟನೇಯ ಭ್ರಾಂತಿ ಎಂದರೆ, ಸಮಾಧಿಸ್ಥನಾಗಿ ಕುಳಿತ ಒಬ್ಬ ಯೋಗಿಯ ಕೈಕಾಲುಗಳನ್ನು ಖಡ್ಗಾದಿಗಳಿಂದ ಯಾರಾದರೂ ಕಡಿದು ಹಾಕಿದರೂ ಕೂಡ, ಆತನಿಗೆ ಏನು ನೋವು, ಅಥವಾ ಕಷ್ಟದ ಅನುಭವವು ಆಗುವುದಿಲ್ಲ, ಎಂಬ ಮಾತು. ಅನೇಕ ವರ್ಷಗಳಿಂದ ನಾನು ಇಂತಹ ಮಾತುಗಳನ್ನು ಕೇಳುತ್ತಾ ಬಂದಿದ್ದೇನೆ. ಅದನ್ನೀಗ ಇಲ್ಲಿ ಲೇಖನದ ರೂಪದಲ್ಲಿ ಕೆಳಗೆ ಕೊಡುತ್ತಿದ್ದೇನೆ.

ಇದು ಸಮಾಧಿಗೆ ಸಂಬಂದಪಟ್ಟ ವಿಷಯವಾದುದರಿಂದ, ಮೊದಲು ಸಮಾಧಿಯ ಕುರಿತಾಗಿಯೇ ಸ್ವಲ್ಪ ವಿಚಾರಿಸೋಣ. ಇಂದು ಲೋಕದಲ್ಲಿ ಸಮಾಧಿಯ ಕುರಿತಾಗಿ ಅನೇಕ ಅಜ್ಞಾನ ಜನ್ಯ ಕಲ್ಪನೆಗಳು ಮತ್ತು ನಂಬಿಕೆಗಳು ಪ್ರಚಲಿತವಾಗಿವೆ. ಭೂಮಿಯನ್ನು ಅಗೆದು, ಹೊಂಡ ಮಾಡಿ ಅದರಲ್ಲಿ ಅನೇಕ ದಿನಗಳ ತನಕ ಅನ್ನ-ನೀರು ಮುಟ್ಟದೆ ಕುಳಿತು ಕೊಂಡಿರುವುದಕ್ಕೆ ಸಮಾಧಿಯೆಂದು ಕೆಲವರು ಹೇಳುತ್ತಾರೆ. ಇನ್ನು ಕೆಲವರು, ಒಂದೆರಡು ವಾರಗಳತನಕ, ಅನ್ನ ನೀರಿಲ್ಲದೆ ಹಸಿವೆ ಮತ್ತು ಬಾಯಾರಿಕೆಗಳನ್ನು ತಡೆದು, ಯಾವುದೋ ಒಂದು ನಾಮದ ಜಪ ಮಾಡುತ್ತಾ ಇರುವುದಕ್ಕೆ ಕೂಡ ಸಮಾಧಿಯೆಂದು ಹೇಳುತ್ತಾರೆ. ಮತ್ತು ಕೆಲವರು ವನ ಅಥವಾ ಪರ್ವತಗಳಿಗೆ ಹೋಗಿ, ಏಕಾಂತದಲ್ಲಿದ್ದು ಮೌನವಾಗಿ ಇದ್ದುಕೊಳ್ಳುವುದಕ್ಕೂ ಸಮಾಧಿ ಎನ್ನುತ್ತಾರೆ. ಉಸಿರನ್ನು ತಡೆದು, ನಾಡಿಗಳ ಸ್ಪಂದನವನ್ನು ನಿಲ್ಲಿಸಿ ದೀರ್ಘಕಾಲ ಹಾಗೆಯೇ ಇರುವುದಕ್ಕೆ ಸಮಾಧಿ ಎಂದು ಇತರ ಕೆಲವರ ಅಭಿಪ್ರಾಯ ವಾಗಿದೆ. ಸಮಾಧಿಯ ಸ್ಥಿತಿಯಲ್ಲಿ ಜೀವನು ಬ್ರಹ್ಮನಾಗುತ್ತಾನೆ, ಎಂದರೆ, ಜೀವಾತ್ಮನು ತನ್ನ ಪ್ರತ್ಯೇಕ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾನೆ, ಎಂದು ಹೇಳುವವರೂ ಇದ್ದಾರೆ. ಈ ರೀತಿ ಸಮಾಧಿಯ ವಿಷಯದಲ್ಲಿ ತುಂಬಾ ನಿರಾಧಾರ ಮಾತುಗಳು ಲೋಕದಲ್ಲಿ ಪ್ರಚಾರದಲ್ಲಿವೆ. ಇಂತಹ ಪ್ರಚಾರಗಳ ಬಲೆಗೆ ಸಿಕ್ಕಿಕೊಳ್ಳದೆ, ಬದುಕಿಕೊಂಡು ನಿಜವಾದ ಸಮಾಧಿಯನ್ನು ಹೊಂದುವುದು ಬಹಳ ಕಷ್ಟವಾಗಿದೆ. ಯೋಗದರ್ಶನದ ಋಷಿಗಳು ಮಾನವ ಪ್ರಜೆಗಳ ಹಿತಕ್ಕಾಗಿ ಸಮಾಧಿಯ ನಿಜವಾದ ಸ್ಥಿತಿಯನ್ನು ಸ್ಪಷ್ಟವಾಗಿ ಹೇಳಿಕೊಟ್ಟಿದ್ದಾರೆ ಅದನ್ನೇ ಇಲ್ಲಿ ಈಗ ಹೇಳುತ್ತಿದ್ದೇನೆ —

**ತದೇವಾರ್ಥ ಮಾತ್ರನಿರ್ಭಾಸಂ ಸ್ವರೂಪಶೂನ್ಯಮಿವ ಸಮಾಧಿಃ॥**

(ಯೋಗ ದರ್ಶನ 3-3)

ಮಹರ್ಷಿ ದಯಾನಂದರು ಈ ಸೂತ್ರದ ಅರ್ಥವನ್ನು ಈ ರೀತಿ ವಿವರಿಸಿ ಹೇಳಿದ್ದಾರೆ."ಯಾವರೀತಿಯಲ್ಲಿ ಅಗ್ನಿಯ ಮಧ್ಯದಲ್ಲಿ ಇಟ್ಟ ಕಬ್ಬಿಣವು, ಅಗ್ನಿಯ ರೂಪವನ್ನು ತಾಳುತ್ತದೆಯೋ, ಅದೇ ರೀತಿಯಲ್ಲಿ ಒಬ್ಬ ಯೋಗಿಯು ಪರಮಾತ್ಮನ ಜ್ಞಾನದಿಂದ ಪ್ರಭಾವಿತನಾಗಿ ತಾನೂ ಪ್ರಕಾಶಮಯನಾಗಿ ಪರಮಾತ್ಮನ ಪ್ರಕಾಶ ಸ್ವರೂಪವಾದ ಆನಂದ ಮತ್ತು ಜ್ಞಾನ ಮತ್ತು ಆನಂದದ ಉಪಲಬ್ಧಿಯಾಗಿ, ಅದರಲ್ಲಿಯೇ ನಿಮಗ್ನನಾಗಿ ತನ್ನನ್ನು ತಾನೇ ಮರೆತು ಬಿಡುತ್ತಾನೆ ಮತ್ತು ಅವನು ತನಗೆ ಎಷ್ಟು ಕಷ್ಟ ಬಂದರೂ ಅದನ್ನು ಸಹಿಸಿಕೊಳ್ಳುತ್ತಾನೆಯೆ ಹೊರತು ಎಂದಿಗೂ ಹೆದರುವುದಿಲ್ಲ". ಇದರಿಂದ, ಕಷ್ಟ ಮತ್ತು ಅದರ ಅನುಭವವು ಯೋಗಿಗೂ ಆಗುತ್ತದೆ, ಎಂದು ಸ್ಪಷ್ಟವಾಗುತ್ತದೆ. ಆದರೆ, ಯೋಗಿಯಲ್ಲಿ ಧೈರ್ಯ ಮತ್ತು

ಸಹನೆಯ ಶಕ್ತಿ ಅಧಿಕವಾಗಿರುವುದರಿಂದ, ಇಂತಹ ಕಷ್ಟ ಮತ್ತು ಕಷ್ಟದ ಅನುಭವವು, ಅವನಿಗೆ ಇತರರಿಗಿಂತ ಬಹಳ ಕಡಿಮೆಯಾಗುತ್ತದೆ. ಮಹರ್ಷಿ ದಯಾನಂದರ ಜೀವನ ಚರಿತ್ರೆಯನ್ನು ಓದಿದಾಗ ನಮಗಿದು ಇನ್ನು ಸ್ಪಷ್ಟವಾಗುತ್ತದೆ. ಅವರು ತಮ್ಮ ಜೀವನದಲ್ಲಿ ಸಾವಿರಾರು ಕಷ್ಟಗಳನ್ನು ಅನುಭವಿಸಿದರು, ಮತ್ತು ತನ್ನನ್ನು ಕೊಲ್ಲಲಿಕ್ಕೆ ಬಂದವರಿಗೂ ಕಲ್ಯಾಣದ ಉಪದೇಶವನ್ನು ಕೊಟ್ಟಿದ್ದರು. ಇವರು ಅತ್ಯಂತ ರುಗ್ಣಾವಸ್ಥೆಯಲ್ಲಿರುವಾಗಲೂ, ಒಬ್ಬ ಉತ್ತಮ ಆರೋಗ್ಯವಂತ ವ್ಯಕ್ತಿಯಂತೆ ಕಾಣುತ್ತಿದ್ದರೆಂಬುದನ್ನು ಕೇಳಿದ್ದೇನೆ. ಒಬ್ಬ ಯೋಗಿಗೂ ಮತ್ತು ಇನ್ನೊಬ್ಬ ಯೋಗಿ ಅಲ್ಲದವನಿಗೂ ಇರುವ ವ್ಯತ್ಯಾಸವು ಇದೇ ಆಗಿದೆ.

ಒಬ್ಬ ಸಾಮಾನ್ಯ ಮನುಷ್ಯನೂ ಕೂಡ, ಯಾವುದಾದರೊಂದು ವಿಶೇಷ ಕಾರ್ಯದಲ್ಲಿ ಮಗ್ನನಾಗಿರುವಾಗ ಅವನಿಗೆ ಎಲ್ಲಾದರೂ ಒಂದು ಸಣ್ಣ ಮುಳ್ಳು ತಾಗಿದರೆ, ಅಥವಾ ಯಾವುದಾದರೂ ಒಂದು ಕೀಟ ಇಲ್ಲವೇ ಒಂದು ಸೊಳ್ಳೆಯು ಕಚ್ಚಿದರೆ ಗೊತ್ತೇ ಆಗುವುದಿಲ್ಲ. ಆದರೆ, ಅದೇ ಸ್ಥಿತಿಯಲ್ಲಿ ಅವನಿಗೆ ಒಂದು ವಿಷಜಂತುವಾಗಿರುವ ಚೇಳು ಕಚ್ಚಿದರೆ, ಆಗ ಅವನು ಬೊಬ್ಬೆಹೊಡೆಯುತ್ತಾನೆ. ಇದೇ ರೀತಿಯಲ್ಲಿ ಒಬ್ಬ ಯೋಗಿಗೆ, ಆತನು ಸಮಾಧಿಸ್ಥಿತಿಯಲ್ಲಿ ಕುಳಿತುಕೊಂಡಿರುವಾಗ, ಆತನಿಗೆ ಒಂದು ವೇಳೆ ಯಾವುದಾದರೂ ಕೀಟ ಅಥವಾ ಸೊಳ್ಳೆಯು ಕಚ್ಚಿದರೆ, ಈ ಸಾಧಾರಣ ದುಃಖಪ್ರದವಾದ ಘಟನೆಯಿಂದ, ಅವನು ವಿಚಲಿತನಾಗದೆ ಇರಬಹುದು. ಆದರೆ ಅವನ ಕೈಕಾಲು ತಲೆ ಮೊದಲಾದ ಅಂಗಗಳನ್ನು ಯಾರಾದರೂ ಕಡಿದರೆ, ಆಗ ಅವನಿಗೆ ಅದರ ನೋವಿನ ಅನುಭವವು ಆಗದೆ ಇರಲಿಕ್ಕೆ ಸಾಧ್ಯವೇ ಇಲ್ಲ.

ಮೇಲೆ ಹೇಳಿದಂತೆ, ಸಮಾಧಿಸ್ಥಿತಿಯಲ್ಲಿ ಮಗ್ನನಾಗಿರುವ ಯೋಗಿಗೆ, ಇಂತಹ ಸಾಮಾನ್ಯ ಘಟನೆಗಳು ನಡೆದಾಗ ಅದು ಗೋಚರವಾಗದೆ ಇರಬಹುದು. ಆದರೆ, ವಿಶೇಷವಾಗಿ ಏನಾದರೂ ಆಘಾತವಾದಾಗ, ಆತನು ತನ್ನ ಮನಸ್ಸು ಮತ್ತು ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಂಡು ಆ ಕಷ್ಟಕರವಾದ ನೋವನ್ನು ಸಹಿಸಿಕೊಳ್ಳುತ್ತಾನೆ, ಇದು ಬೇರೆ ಮಾತು. ಆದರೆ, ಆತನು ಸಮಾಧಿಸ್ಥನಾಗಿರುವಾಗ, ಖಡ್ಗ ಅಥವಾ ಇತರ ಯಾವುದೇ ಒಂದು ಹರಿತವಾದ ಶಸ್ತ್ರದಿಂದ ಆತನ ಕೈ, ಕಾಲು, ತಲೆ ಇತ್ಯಾದಿಗಳನ್ನು ಕತ್ತರಿಸಿದರೆ, ಇದರ ನೋವನ್ನು ಸಹಿಸಲು ಅವನು ಅಸಮರ್ಥನಾಗಬಹುದು. ಅಂತೂ, ಈ ವೇದನೆಯನ್ನು ಆತನು ಮೌನವಾಗಿ ಸಹಿಸಿಕೊಳ್ಳಬಹುದು. ಆದರೆ, ಒಬ್ಬ ಸಮಾಧಿಸ್ಥನಾಗಿರುವ ಯೋಗಿಯ ತಲೆಯನ್ನು ಕಡಿದು, ಅದನ್ನು ಆತನ ಶರೀರದಿಂದ ಬೇರ್ಪಡಿಸಿದರೆ, ಆತನಿಗೆ ತಾನೆಲ್ಲಿರುವೆನು

ಮತ್ತು ಪರಮಾತ್ಮನು ಎಲ್ಲಿರುವನು ಎಂಬುದರ ಪರಿಜ್ಞಾನವೇ ಇರಲಿಕ್ಕಿಲ್ಲ. ಸಮಾಧಿಯ ಆನಂದವು ಇನ್ನು ದೂರದ ಮಾತು.

**ಪ್ರಶ್ನೆ :–** ಸಮಾಧಿಯ ಸ್ಥಿತಿಯಲ್ಲಿ, ಒಬ್ಬ ಯೋಗಿಯ ಸಂಬಂಧವು ಆತನ ಶರೀರ, ಮನಸ್ಸು, ಇಂದ್ರಿಯಗಳು ಮತ್ತು ಪ್ರಕೃತಿಯಿಂದ ಕಡಿದು ಹೋಗುತ್ತದೆ, ಆದುದರಿಂದ ಆತನ ಅಂಗಗಳನ್ನು ಕಡಿದರೂ ಕೂಡ ಆತನಿಗೆ ಕಷ್ಟ ಮತ್ತು ನೋವಿನ ಅನುಭವವು ಆಗುವುದಿಲ್ಲ, ಎಂದು ನಾವು ಏಕೆ ಒಪ್ಪಿಕೊಳ್ಳಬಾರದು?

**ಉತ್ತರ :–** ಸಮಾಧಿಯ ಸ್ಥಿತಿಯಲ್ಲಿ ಕೆಲವರು ಹೇಳುವಂತೆ ಒಬ್ಬ ಯೋಗಿಯ ಸಂಬಂಧವು ಆತನ ಶರೀರ, ಮನಸ್ಸು, ಇಂದ್ರಿಯಗಳು ಮತ್ತು ಪ್ರಕೃತಿಯಿಂದ ಸಂಪೂರ್ಣವಾಗಿ ಕಡಿದುಹೋಗುವುದಿಲ್ಲ. ಏಕೆಂದರೆ, ಸಮಾಧಿಸ್ಥನಾಗಿರುವ ಯೋಗಿಯ ಶರೀರದಲ್ಲಿ, ಆತನು ಸೇವಿಸುವ ಅನ್ನ, ಜಲಾದಿಗಳು ರಸವಾಗಿ ಪರಿಣಮಿಸುತ್ತವೆ. ಇದರಿಂದ ಅನ್ಯಧಾತುಗಳ ನಿರ್ಮಾಣವೂ ಆಗುತ್ತದೆ. ಮಲ, ಮೂತ್ರಗಳೂ ಉತ್ಪನ್ನವಾಗುತ್ತವೆ. ಶ್ವಾಸೋಚ್ಛ್ವಾಸಗಳ ಪ್ರಕ್ರಿಯೆಯೂ ನಿಯಮ ಪೂರ್ವಕವಾಗಿ ನಡೆಯುತ್ತಿರುತ್ತದೆ. ಒಂದು ವೇಳೆ, ಸಮಾಧಿಸ್ಥನಾಗಿ ಕುಳಿತ ಯೋಗಿಯ ಸಂಬಂಧವು ಆತನ ಶರೀರಾದಿಗಳಿಂದ ಕಡಿದು ಹೋಗುವುದು ನಿಜವಾಗಿದ್ದರೆ, ಇವೆಲ್ಲಾ ನಡೆಯಲು ಸಾಧ್ಯವಿರುತ್ತಿದ್ದಿಲ್ಲ. ಆತನ ಶರೀರವು ಕೊಳೆತು ನಶಿಸಿ ಹೋಗುತ್ತಿತ್ತು. ಒಬ್ಬ ಗಾಢ ನಿದ್ರೆಯಲ್ಲಿ ಮಲಗಿರುವ ವ್ಯಕ್ತಿಗೆ ಸ್ವಲ್ಪ ಏಟುತಾಗಿದರೆ ಏನೂ ಗೊತ್ತಾಗುವುದಿಲ್ಲ. ಆದರೆ ಅವನ ಕೈ, ಕಾಲುಗಳನ್ನು ಕಡಿದರೆ ಅವನಿಗೆ ತುಂಬಾ ವೇದನೆಯಾಗುತ್ತದೆ. ಅವನ ನಿದ್ದೆಯೂ ಓಡಿಹೋಗುತ್ತದೆ. ಸುಷುಪ್ತಿಯ ಸ್ಥಿತಿಯಲ್ಲಿಯೂ ಮನುಷ್ಯನ ಮನಸ್ಸು ಮತ್ತು ಇಂದ್ರಿಯಗಳಿಗೆ ಬಾಹ್ಯವಿಷಯಗಳ ಜ್ಞಾನವು ಇರುವುದಿಲ್ಲ. ಇದೇ ರೀತಿಯಲ್ಲಿ ಸಮಾಧಿಯ ಸ್ಥಿತಿಯಲ್ಲಿಯೂ ಯೋಗಿಗೆ ಬಾಹ್ಯ ವಿಷಯಗಳ ಜ್ಞಾನವು ಇರುವುದಿಲ್ಲ. ಆದರೆ ಆತನ ಶರೀರದ ಅಂಗಗಳನ್ನು ಕತ್ತರಿಸಿದರೆ, ಖಂಡಿತವಾಗಿಯೂ ಆತನಿಗೆ ವೇದನೆಯು ಆಗಲೇಬೇಕು.

ಸಮಾಧಿಸ್ಥ ಯೋಗಿಯ ಸಂಬಂಧವು ಪ್ರಕೃತಿಯಿಂದ ಸಂಪೂರ್ಣವಾಗಿ ಕಡಿದು ಹೋಗುವುದಿಲ್ಲ, ಎಂಬುದಕ್ಕೆ ಪ್ರಮಾಣವು ಇದೆ. ಮಹರ್ಷಿವ್ಯಾಸರು, ಯೋಗದರ್ಶನ(1-1)ದ ಭಾಷ್ಯದಲ್ಲಿ, ಚಿತ್ತದ ಐದು ಸ್ಥಿತ್ಯಂತರಗಳನ್ನು

ಹೇಳಿಕೊಟ್ಟಿದ್ದಾರೆ. ಯಥಾ — **"ಕ್ಷಿಪ್ತಂ ಮೂಢಂ ವಿಕ್ಷಿಪ್ತಮೇಕಾಗ್ರಂ ನಿರುದ್ಧಮಿತಿ ಚಿತ್ತಭೂಮಯಃ"**. ಕ್ಷಿಪ್ತ, ಮೂಢ, ವಿಕ್ಷಿಪ್ತ, ಏಕಾಗ್ರತೆ ಮತ್ತು ನಿರುದ್ಧ ಇವು ಚಿತ್ತದ ಐದು ಸ್ಥಿತ್ಯಂತರಗಳು. ಇವುಗಳಲ್ಲಿ ಕೊನೆಯ ಎರಡು, ಏಕಾಗ್ರ ಮತ್ತು ನಿರುದ್ಧ, ಇವು ಸಮಾಧಿಯ ಸ್ಥಿತಿಯಲ್ಲಿ ಕಂಡುಬರುತ್ತವೆ. ಚಿತ್ತವು ಪ್ರಕೃತಿಯ ವಸ್ತುವಾಗಿದೆ. ಸಮಾಧಿಯ ಸ್ಥಿತಿಯಲ್ಲಿಯೂ ಈ ಚಿತ್ತವು ತನ್ನ ಅಸ್ತಿತ್ವವನ್ನು ಇಟ್ಟುಕೊಂಡಿರುತ್ತದೆ. ಇದರಿಂದ ಸಮಾಧಿ ಸ್ಥಿತಿಯಲ್ಲಿಯೂ ಪ್ರಕೃತಿಯಿಂದ ಯೋಗಿಯ ಸಂಬಂಧವು ಕಳೆದುಹೋಗುವುದಿಲ್ಲ, ಅದು ಹಾಗೆಯೇ ಇರುತ್ತದೆ, ಎಂದು ಸಿದ್ಧವಾಗುತ್ತದೆ. ನಿಜವಾಗಿ ನೋಡಿದರೆ, ಸಮಾಧಿಯ ಸ್ಥಿತಿಯಲ್ಲಿ, ಜೀವಾತ್ಮನು ಪರಮಾತ್ಮನ ಆನಂದದಲ್ಲಿ ಮಗ್ನನಾಗಿರುವಾಗ, ಆತನು ಪ್ರಕೃತಿಯ ಉಪಾಸನೆಯನ್ನು ಬಿಟ್ಟುಬಿಡುತ್ತಾನೆ. ಆದರೆ ಸಾಧನದ ರೂಪದಲ್ಲಿ ಆತನು ಪ್ರಕೃತಿಯನ್ನು ಉಪಯೋಗಿಸಿಕೊಂಡಿರುತ್ತಾನೆ. ಸಮಾಧಿಸ್ಥಿತಿಯಿಂದ ಹೊರಗೆ ಬಂದಾಗ ಈ ಸ್ಥಿತಿಯು ಬದಲಾಗುತ್ತದೆ. ಇಲ್ಲಿ ಜೀವಾತ್ಮನು ಶರೀರ, ಮನಸ್ಸು ಇತ್ಯಾದಿಗಳ ಮೂಲಕ ವ್ಯವಹರಿಸುತ್ತಾನೆ, ಮತ್ತು ಇವುಗಳ ವಶವರ್ತಿಯಾಗಿ ಪ್ರಕೃತಿಯ ಉಪಾಸನೆಯನ್ನು ಮಾಡುತ್ತಾನೆ. ಸಮಾಧಿಯ ಸ್ಥಿತಿಯಲ್ಲಿ ಶರೀರ, ಮನಸ್ಸು ಇತ್ಯಾದಿಗಳನ್ನು ತನ್ನ ವಶದಲ್ಲಿಟ್ಟುಕೊಂಡು, ಜೀವಾತ್ಮನು ಪರಮಾತ್ಮನ ಉಪಾಸನೆಯನ್ನು ಮಾಡುತ್ತಾನೆ.

ಕೆಲವು ಜನರು ಯೋಗದ ವಿಷಯದಲ್ಲಿ ತುಂಬಾ ವಿಚಿತ್ರ ಮಾತುಗಳನ್ನು ಹೇಳುತ್ತಾರೆ. ಈ ಮಾತುಗಳನ್ನು ಕೇಳಿ ಮರುಳಾಗಿ, ಅನೇಕ ಜನರು ಇವರ ಶಿಷ್ಯರಾಗುತ್ತಾರೆ, ಮತ್ತು ಇವರು ತಾವು ಗುರುಗಳಾಗಿ ಮೋಜು ಮಾಡುತ್ತಾರೆ. ಇಂತಹ ಒಂದು ಮಾತನ್ನು ನಾನು ಕೇಳಿದ್ದೇನೆ. ಅದನ್ನಿಲ್ಲಿ ಹೇಳುವುದು ಒಳ್ಳೆಯದು ಎಂದು ನನಗೆ ಕಾಣುತ್ತದೆ. ಯಾರೋ ಒಬ್ಬ ವ್ಯಕ್ತಿಯು, ಒಂದು ದಿನ ತಾನು ಇನ್ನೊಬ್ಬ ಯೋಗಾಭ್ಯಾಸ ಮಾಡುವ ವ್ಯಕ್ತಿಯನ್ನು ಸಮಾಧಿಯ ಸ್ಥಿತಿಯಲ್ಲಿ ನೋಡಿದ್ದೇನೆ ಎಂದೂ, ಮತ್ತು ಆ ಸಮಾಧಿಸ್ಥಿತಿಯಲ್ಲಿ ಕುಳಿತ ಯೋಗಭ್ಯಾಸಿಯು, ತನ್ನ ಸಮಾಧಿಯ ಸ್ಥಿತಿಯನ್ನು ವರ್ಣಿಸುತ್ತಾ ಹೋದ, ಮತ್ತು ತಾನು ಅದನ್ನು ಕೇಳುತ್ತಾ ಹೋದೆ, ಎಂದೂ ಹೇಳಿದ. ಆ ಯೋಗಾಭ್ಯಾಸಿ ಸಂನ್ಯಾಸಿಯು, ತನ್ನ ಅನುಭವವನ್ನು ಹೇಳುತ್ತಾ, ಮುಂದೆ "ಒಂದು ದಿನ ನಾನು ಸಮಾಧಿ ಸ್ಥಿತಿಯಲ್ಲಿ ಮಗ್ನನಾಗಿರುವಾಗ ಯಾರೋ ಒಬ್ಬ ವ್ಯಕ್ತಿಯು ತನ್ನ ಬಳಿಗೆ ಬಂದು ನನ್ನ ಮೊಣಕಾಲಿಗೆ ಒಂದು ಆಣಿಯನ್ನು ಹೊಡೆದುಬಿಟ್ಟ. ಆದರೆ ನನಗೆ ಇದರಿಂದ ಸ್ವಲ್ಪವೂ ನೋವಾಗಲಿಲ್ಲ" ಎಂದು ಹೇಳಿದನು. ಈ ರೀತಿ ಆ ವ್ಯಕ್ತಿಯ ಮುಖಾಂತರ, ಒಬ್ಬ ಯೋಗಿ ಸಂನ್ಯಾಸಿಯ ವಿಚಿತ್ರ ಅನುಭವದ ಮಾತುಗಳನ್ನು ಕೇಳಿ, ನಾನೆಂಥ:

"ಸಮಾಧಿಯ ಸ್ಥಿತಿಯಲ್ಲಿ ಆ ಸಂನ್ಯಾಸಿಯ ಮೊಣಕಾಲಿನ ಮೇಲೆ ಆಣಿ ಹೊಡೆದ ಚಿಹ್ನೆ ಅಥವಾ ಕಲೆಯನ್ನಾದರೂ ತಾವು ನೋಡಿದಿರಾ?" ಇದಕ್ಕೆ ಆ ವ್ಯಕ್ತಿಯು ಉತ್ತರ ಕೊಡಲಿಲ್ಲ. ಈ ರೀತಿ ಕೆಲವರ ಸ್ಥಿತಿಯು ಬಹಳ ಹಾಸ್ಯಾಸ್ಪದವಾಗಿರುತ್ತದೆ. ಅವರೆಲ್ಲಾ ಯೋಗದ ಪ್ರಚಾರ ಮಾಡುವ ಉದ್ದೇಶದಿಂದ ಯೋಗದ ಪ್ರಶಂಸೆ ಮಾಡುತ್ತಾ ಅದರ ಕುರಿತಾಗಿ ಬಹಳ ವಿಚಿತ್ರವಾದ ಮಾತುಗಳನ್ನು ಹೇಳುತ್ತಾರೆ. ಇದರಿಂದ ನಿಜವಾಗಿಯೂ ನೋಡಿದರೆ, ಯೋಗದ ನಿಂದೆಯೇ ಆಗಿ, ಪ್ರಚಾರದ ಬದಲು ಅಪಪ್ರಚಾರವೇ ಆಗುತ್ತದೆ.

ಯೋಗಾಬ್ಯಾಸದಿಂದ ಏನೆಲ್ಲಾ ಉತ್ತಮಗುಣಗಳು ಒಬ್ಬ ವ್ಯಕ್ತಿಯಲ್ಲಿ ಬರಬಹುದೋ ಅದನ್ನು ಹೇಳುವುದು ಯೋಗದ ಸ್ತುತಿಯಾಗಿದೆ ಮತ್ತು ಯೋಗದ ಬಗ್ಗೆ ಅಸಂಭವವಾದ ಮಾತುಗಳನ್ನು ಹೇಳುವುದು ಯೋಗದ ನಿಂದೆಯಾಗಿದೆ, ಎಂಬುದನ್ನು ಜನರು ತಿಳಿದುಕೊಳ್ಳಬೇಕು.

ಯಾವ ರೀತಿಯಲ್ಲಿ ಕೆಲವು ಜನರು ಶ್ರೀಕೃಷ್ಣ ಮತ್ತು ಶ್ರೀರಾಮನನ್ನು ಪರಮಾತ್ಮನ ಅವತಾರವೆಂದು ಹೇಳಿ, ಆ ಮಹಾಪುರುಷರ ಸ್ತುತಿಯ ಬದಲಿಗೆ, ನಿಂದೆ ಮಾಡುತ್ತಾ ಬಂದಿರುವರೋ, ಅದೇ ರೀತಿಯಲ್ಲಿ ಕೆಲವರು ಯೋಗದ ಬಗ್ಗೆ ವಿಚಿತ್ರ ಮತ್ತು ಅಸಂಭವವಾದ ಮಾತುಗಳ ಪ್ರಚಾರ ಮಾಡಿ, ಅದರ ಸ್ತುತಿಯ ಬದಲಿಗೆ, ನಿಂದೆ ಮಾಡುತ್ತಾ ಬಂದಿದ್ದಾರೆ. ಇದರಿಂದ ಲೋಕಕ್ಕೆ ತುಂಬಾ ಹಾನಿಯಾಗಿದೆ.

ಒಂದು ದಿನ ನಾನು ಕರ್ನಾಲ್ ನಗರದಲ್ಲಿ ಒಬ್ಬ ವ್ಯಕ್ತಿಯೊಡನೆ ಮಾತನಾಡುತ್ತಿದ್ದೆ. ಆತನು ಯೋಗದ ಬಗ್ಗೆ ಚರ್ಚೆ ಪ್ರಾರಂಭ ಮಾಡಿದ. ಮೊದಲು ಆತ, ನಾವು ಆಗಾಗ ಕೇಳುತ್ತಿರುವ ಒಂದು ಮಾತನ್ನೇ ಹೇಳಿದ. ಆರ್ಯ ಸಮಾಜದಲ್ಲಿ ಒಬ್ಬರೂ ನಿಜವಾದ ಯೋಗಿಯು ಇಲ್ಲ, ಬೇರೆ ಮತ ಸಂಪ್ರದಾಯಗಳಲ್ಲಿ ನಿಜವಾದ ಯೋಗಿಗಳಿದ್ದಾರೆ. ಈ ಮಾತಿನ ಖಂಡನೆಯನ್ನು ನಾನು ಬೇರೆ ಒಂದು ಲೇಖನದಲ್ಲಿ ಮಾಡಿದ್ದೇನೆ. ಯಾವ ಮನುಷ್ಯನು ತ್ರೈತವಾದವನ್ನು ಅಥವಾ ಮಹರ್ಷಿ ದಯಾನಂದರು ಪ್ರತಿಪಾದಿಸಿದ ಸಿದ್ಧಾಂತಗಳನ್ನು ಒಪ್ಪುವುದಿಲ್ಲವೋ, ಆ ಮನುಷ್ಯನು ಎಂದಿಗೂ ನಿಜವಾದ ಯೋಗಿಯಾಗಲಿಕ್ಕೆ ಸಾಧ್ಯವೇ ಇಲ್ಲ. ನಾನು ಆ ವ್ಯಕ್ತಿಯನ್ನು ಕೇಳಿದೆ. "ನಿಮ್ಮ ದೃಷ್ಟಿಯಲ್ಲಿ ಒಬ್ಬ ನಿಜವಾದ ಯೋಗಿಯ ಲಕ್ಷಣಗಳೇನು? ನಿಜವಾದ ಯೋಗಿಯು ಅಗ್ನಿಯನ್ನು ಶೀತಲವನ್ನಾಗಿ ಮಾಡಬಲ್ಲನೆ?" ಇದಕ್ಕೆ ಅವನು ಹೌದೆಂದು ಉತ್ತರಕೊಟ್ಟನು.

ಈ ಮಾತು ಋಷಿಗಳು ಹೇಳಿಕೊಟ್ಟ ಸಿದ್ಧಾಂತಕ್ಕೆ ವಿರುದ್ಧವಾಗಿದೆ, ಮತ್ತು ಅಜ್ಞಾನ-ಕಲ್ಪಿತವಾಗಿದೆ. ಅಗ್ನಿ ಮೊದಲಾದ ಪದಾರ್ಥಗಳಲ್ಲಿ ಯಾವ ಸ್ವಾಭಾವಿಕ ಗುಣಗಳು ಇವೆಯೋ ಅವುಗಳನ್ನು ಪರಮಾತ್ಮನಿಗೂ ಕೂಡ ಬದಲಾಯಿಸುವುದಕ್ಕೆ ಸಾಧ್ಯವಿಲ್ಲ, ಎಂದು ಮಹರ್ಷಿ ದಯಾನಂದರು ಹೇಳಿದ್ದಾರೆ.

**ಪ್ರಶ್ನೆ** :– ಇಂತಹ ಭ್ರಾಂತಿಗಳು ಹರಡುವುದಕ್ಕೆ ಕಾರಣವೇನು?

**ಉತ್ತರ** :– ಇದಕ್ಕೆ ಕಾರಣಗಳು ತುಂಬಾ ಇವೆ. ಯಥಾ-ನಿಜವಾಗಿಯೂ ಜೀವನ್ಮುಕ್ತ ಯೋಗಿಗಳ ಅಭಾವ, ವೇದ-ವೇದಾಂಗಗಳ ಪಠಣ ಮತ್ತು ಪಾಠನವನ್ನು ಬಿಟ್ಟು ಅನಾರ್ಷ ಗ್ರಂಥಗಳ ಪಠನ ಮತ್ತು ಪಾಠನದ ಪ್ರಚಾರ, ವೇದ-ವಿದ್ಯೆಗೆ ವಿರೋಧಿಯಾಗಿರುವ ರಾಜರ ಶಾಸನ, ಯೋಗದ ಗುಣಗಾನ ಮಾಡುವವರು ಯಮ-ನಿಯಮಾದಿಗಳ ಪಾಲನೆ ಮಾಡದಿರುವುದು, ಇತ್ಯಾದಿ.

**ಪ್ರಶ್ನೆ** :– ಇಂತಹ ಮಾತುಗಳನ್ನು ನಂಬಿದರೆ ಏನು ಹಾನಿಯಾಗಬಹುದು?

**ಉತ್ತರ** :– ಒಂದನೆಯದಾಗಿ, ಒಬ್ಬ ನಿಜವಾದ ಯೋಗಿಯು ಸಮಾಧಿಯ ಸ್ಥಿತಿಯಲ್ಲಿ ಕುಳಿತುಕೊಂಡಿರುವಾಗ, ಯಾರೋ ಒಬ್ಬ ದುಷ್ಟನು ಅವನ ಬಳಿಗೆ ಬಂದು, ಅವನ ತಲೆಯನ್ನು ಹೊಡೆದು, ಬಳಿಕ ಅವನನ್ನು, ಏನು ನೋವಾಯಿತೇ, ಎಂದು ಕೇಳಿದಾಗ, ಅವನು ಹೌದೆಂದು ಉತ್ತರ ಕೊಟ್ಟರೆ, ಇಂತಹ ಭ್ರಾಂತಿಯನ್ನು ಇಟ್ಟುಕೊಂಡವರ ದೃಷ್ಟಿಯಲ್ಲಿ ಅವನು ಯೋಗಿಯೇ ಅಲ್ಲ ಎಂದಾಗುತ್ತದೆ. ಎರಡನೆಯದಾಗಿ, ಒಂದು ಸುಳ್ಳನ್ನು ಸತ್ಯವೆಂದು ಸಿದ್ಧಪಡಿಸುವುದಕ್ಕೆ, ಮುಂದೆ ಕೆಲವಾರು ಸುಳ್ಳು ಮಾತುಗಳನ್ನು ಹೇಳಬೇಕಾಗುತ್ತದೆ. ಮೂರನೆಯದಾಗಿ, ಇದು ಪ್ರತ್ಯಕ್ಷ ಪ್ರಮಾಣಕ್ಕೆ ವಿರುದ್ಧವಾದ ಮಾತಾಗಿದೆ. ಯಾಕೆಂದರೆ, ಒಬ್ಬ ಸಮಾಧಿಸ್ಥನಾಗಿರುವ ಯೋಗಿಯ ಶಿರವನ್ನು ಕಡಿದು ಬಿಟ್ಟರೆ, ಅವನಿಗೆ ಸಮಾಧಿಯ ಆನಂದವು ಸಿಗುವುದು ದೂರದ ಮಾತು, ಅವನಿಗೆ ತಾನು ಎಲ್ಲಿರುವೆನು ಎಂಬುದೂ ಗೊತ್ತಿರುವುದಿಲ್ಲ.

ಈ ರೀತಿ, ಈ ಲೇಖನದಲ್ಲಿ, ಸಮಾಧಿಸ್ಥನಾಗಿ ಕುಳಿತ ಯೋಗಿಯ ಅಂಗಗಳನ್ನು ಕತ್ತರಿಸಿ ಹಾಕಿದರೂ ಕೂಡ, ಅವನಿಗೆ ಸ್ವಲ್ಪವೂ ನೋವಿನ ಅನುಭವವಾಗುವುದಿಲ್ಲ, ಎಂಬ ಮಾತನ್ನು ಖಂಡಿಸಿದ್ದೇವೆ. ಜನರಲ್ಲಿರುವ ಇಂತಹ ನಿರಾಧಾರವಾದ ನಂಬಿಕೆಗಳನ್ನು ದೂರಮಾಡಲಿಕ್ಕೆ ವೇದಾದಿ ಶಾಸ್ತ್ರಗಳ

ಅಧ್ಯಯನ-ಅಧ್ಯಾಪನ ಮತ್ತು ಯೋಗದ ಯಮ-ನಿಯಮಾದಿ ಎಂಟು ಅಂಗಗಳನ್ನು ಮನಸಾ, ವಾಚಾ ಮತ್ತು ಕರ್ಮಣಾ, ಆಚರಣೆಗೆ ತರುವುದು ಬಹಳ ಅಗತ್ಯವಾಗಿದೆ.

## 9. ಕೇವಲ ವಾಯುಸೇವನೆಯಿಂದ ಯೋಗಿಯು ಬದುಕಲು ಸಾಧ್ಯವೆ?

ಒಬ್ಬ ಯೋಗಿಯು ಕೇವಲ ವಾಯು ಸೇವನೆಮಾಡಿಕೊಂಡು ಪೂರ್ಣ ಆಯುಷ್ಯದ ತನಕ ಬಾಳಲಿಕ್ಕೆ ಸಾಧ್ಯವಿದೆ, ಎಂದು ಕೆಲವರು ಹೇಳುತ್ತಾರೆ. ಇವರ ವಿಚಾರಕ್ಕನುಸಾರವಾಗಿ, ಅವನಿಗೆ ಅನ್ನ, ಹಾಲು, ಫಲವಸ್ತುಗಳು, ನೀರು ಇತ್ಯಾದಿಗಳ ಸೇವನೆಯ ಆವಶ್ಯಕತೆ ಇರುವುದಿಲ್ಲ. ಆದರೂ ಕೂಡ ಆತನು ಇತರ ಸ್ವಸ್ಥ ಮತ್ತು ಬಲಶಾಲಿ ವ್ಯಕ್ತಿಗಳಂತೆ ಭಾಷಣ, ಭ್ರಮಣ, ಯಾತ್ರೆ, ಪ್ರಾಣಾಯಾಮ ಇತ್ಯಾದಿ ಎಲ್ಲಾಕಾರ್ಯಗಳನ್ನೂ ಮಾಡುತ್ತಿರಬಹುದು.

ಇಂತಹ ನಂಬಿಕೆಯು ಪ್ರಪಂಚದಲ್ಲಿ ತುಂಬಾ ಕಡೆಗಳಲ್ಲಿ ಕಂಡು ಬರುತ್ತದೆ. ಈ ವಿಷಯದಲ್ಲಿ ಒಬ್ಬರು ಒಂದು ಜೀವನ ಚರಿತ್ರೆಯನ್ನು ಬರೆದಿದ್ದಾರೆ. ಪುಸ್ತಕದ ಹೆಸರು "ಮಹಾಯೋಗಿನೀ ಶ್ರೀ ಮಾಣಿಕೇಶ್ವರೀ ಮಾತಾಜೀ ಕಾ ಜೀವನ-ಚರಿತ್ರ" (ಮಹಾಯೋಗಿನೀ ಶ್ರೀ ಮಾಣಿಕೇಶ್ವರೀ ಮಾತೆಯ ಜೀವನ ಚರಿತ್ರೆ) ಎಂದು. ಇದರ ಪ್ರಕಾಶಕರು "(ಮಹಾಯೋಗೀ ಶ್ರೀ ಮಾಣಿಕೇಶ್ವರೀ ಟ್ರಸ್ಟ್ ಪ್ರೈವೇಟ್)", ಮುಕ್ಕಾಮ್ ಪೋಸ್ಟ್, ಮಾಣಿಕಾಗೋರೀ, ವಯಾ ಗುರು ಮಿಟಕಲ್, ಜಿಲ್ಲೆ ಗುಲ್ಬರ್ಗಾ, ಕರ್ನಾಟಕ ರಾಜ್ಯ. ಇದರ ಲೇಖಕರು ಶಂಕರದೇವ ವೇದಾಲಂಕಾರ, ಎಂಬುವರು. ಈ ಜೀವನ ಚರಿತ್ರೆಯಲ್ಲಿ ಪ್ರಮಾಣ-ವಿರುದ್ಧ ಮತ್ತು ಕಪೋಲ-ಕಲ್ಪಿತ ಮಾತುಗಳು ತುಂಬಾ ಇವೆ. ಮಾಣಿಕೇಶ್ವರೀ ಮಾತೆಯು ಹದಿನೈದು ವರ್ಷಗಳಿಂದ ಕೇವಲ ವಾಯು ಸೇವನೆ ಮಾಡಿಕೊಂಡು ಬಾಳಿದ್ದಾಳೆ ಮತ್ತು ಇಷ್ಟು ಸಮಯದಿಂದ ಮಲಮೂತ್ರ ವಿಸರ್ಜನೆಗೂ ಆಕೆ ಹೋಗಲಿಲ್ಲ ಎಂದು ಈ ಪುಸ್ತಕ ಬರೆದಿದೆ.

ಈ ಮಾತೆಯು ಬಾವಿಯ ಕುಡಿಯುವ ನೀರನ್ನು, ಕೇವಲ ತನ್ನ ಕೈಯಿಂದ ಸ್ಪರ್ಷಮಾಡಿ, ಅದನ್ನು ತೈಲವನ್ನಾಗಿ ಪರಿವರ್ತಿಸುತ್ತಾಳೆ. ಮತ್ತು ಅದನ್ನು ಸುಡುತ್ತಾಳೆ; ತನ್ನ ಯೋಗದ ಶಕ್ತಿಯಿಂದ ಕೇವಲ ಮನಸ್ಸಿನಲ್ಲಿ ಸಂಕಲ್ಪಮಾಡಿ ಕಲ್ಲು ಮತ್ತು ಸಿಮೆಂಟಿನಿಂದ ಮಾಡಿದ ಗೋಡೆಯನ್ನು ಆಕೆ ಕೆಳಗೆ ಬೀಳಿಸುತ್ತಾಳೆ; ಒಂದು ದಿನ ಮಾಣಿಕೇಶ್ವರಿಯು ಹೇಳುತ್ತಾಳೆ; "ನಾನು ಒಂದು ಕೋಣೆಯೊಳಗೆ ಬಾಗಿಲು ಹಾಕಿ ಕುಳಿತು ಕೊಳ್ಳುವೆನು, ನೀವು ಸಿಮೆಂಟು ಮತ್ತು ಕಲ್ಲುಗಳಿಂದ ಕೋಣೆಯ ಬಾಗಿಲನ್ನು ಮುಚ್ಚಬೇಕು; ದೇವರಿಗೆ ಇಚ್ಛೆಇದ್ದರೆ, ಅವನೇ ನನ್ನನ್ನು ಹೊರಗೆ ತರಬಹುದು......................" ಇತ್ಯಾದಿ.

ಈಗ ಮುಖ್ಯ ವಿಷಯದ ಕುರಿತಾಗಿ ಪ್ರಮಾಣ ಮತ್ತು ಯುಕ್ತಿಗಳಿಂದ ವಿಚಾರ ಮಾಡೋಣ. ಮೇಲೆ ಹೇಳಿದಂತೆ ಲೇಖಕರು ಒಬ್ಬ ಯೋಗಿಯು ಕೇವಲ ವಾಯುಸೇವನೆಯಿಂದ ಜೀವಿಸಿಕೊಂಡಿರಬಹುದು, ಎಂಬ ಮಾತನ್ನು ಸಿದ್ಧಮಾಡುವುದಕ್ಕಾಗಿ, ಯೋಗದರ್ಶನದ ಒಂದು ಸೂತ್ರವನ್ನು ಪ್ರಮಾಣವಾಗಿ ಕೊಡುತ್ತಾರೆ. ಆ ಸೂತ್ರವು ಹೀಗಿದೆ:

**ಕಂಠ ಕೂಪೇ ಕ್ಷುತ್ಪಿಪಾಸಾನಿವೃತ್ತಿಃ ॥** (ಯೋಗ ದರ್ಶನ 3-30)

ಶ್ರೀ ಶಂಕರದೇವರು, "ಕಂಠಕೂಪದಲ್ಲಿ ಪ್ರಾಣವನ್ನು ತಡೆದಿಟ್ಟರೆ ಹಸಿವೆ ಮತ್ತು ಬಾಯಾರಿಕೆಯು ದೂರವಾಗುತ್ತದೆ" ಎಂದು ಈ ಸೂತ್ರದ ಅರ್ಥ ಹೇಳಿದ್ದಾರೆ. ಶ್ರೀ ಶಂಕರದೇವರ ಈ ಸೂತ್ರಾರ್ಥವು ಯೋಗದರ್ಶನದ ಪ್ರಕರಣಕ್ಕೆ ವಿರುದ್ಧವಾಗಿದೆ. ಯಾಕೆಂದರೆ, ಇಲ್ಲಿ, ಮೂರನೇ ಪಾದದಲ್ಲಿ ಸಂಯಮದ ವಿಷಯವು ನಡೆಯುತ್ತಿದೆ. ಇಲ್ಲಿ ಪ್ರಾಣದ ಚರ್ಚೆ ಇಲ್ಲ. ಸಂಯಮವೆಂದರೆ, ಧಾರಣೆ, ಧ್ಯಾನ ಮತ್ತು ಸಮಾಧಿಯ ವಿಷಯೈಕ್ಯತೆಯಾಗಿದೆ.

**ತದೇತದ್ಧಾರಣಾಧ್ಯಾನ ಸಮಾಧಿತ್ರಯ ಮೇಕತ್ರ ಸಂಯಮಃ।**
**ಏಕವಿಷ ಯಾಣಿ ತ್ರೀಣಿಸಾಧನಾನಿ ಸಂಯಮ ಇತ್ಯುಚ್ಯತೇ ॥**

(ಯೋಗ ದರ್ಶನ 3–4 ಇಲ್ಲಿ ವ್ಯಾಸ ಭಾಷ್ಯ)

ಸಾಧನತ್ರಯಗಳ ವಿಷಯವು ಒಂದೇ ಆಗುವುದಕ್ಕೆ ಸಂಯಮವೆಂದು ಹೆಳುತ್ತಾರೆ. ಆದುದರಿಂದ, ಸೂತ್ರದ ನಿಜವಾದ ಅರ್ಥವು ಹೀಗಾಗಬೇಕು :— ಕಂಠ ಕೂಪದಲ್ಲಿ ಧಾರಣೆ, ಧ್ಯಾನ ಮತ್ತು ಸಮಾಧಿಯ ಅಭ್ಯಾಸವಾದಾಗ ಹಸಿವೆ ಬಾಯಾರಿಕೆ ಗಳು ದೂರವಾಗುತ್ತವೆ. ಆದುದರಿಂದ ಶಂಕರದೇವರ, ಪ್ರಾಣವನ್ನು ಕಂಠಕೂಪದಲ್ಲಿ ತಡೆದಿಡುವ ಮಾತು, ಪ್ರಕರಣಕ್ಕೆ ಸರಿಯಾಗಿ ಇಲ್ಲ. ಈ ಮಾತು ಕಾಲ್ಪನಿಕವಾಗಿದೆ.

ಈ ಸೂತ್ರದ ಭಾಷೆಯಲ್ಲಿ ವ್ಯಾಸರು ಹೀಗೆಂದು ಬರೆದಿದ್ದಾರೆ :— **"ತತ್ರ ಸಂಯಮಾತ್ ಕ್ಷುತ್ಪಿಪಾಸೇ ನ ಭಾಧೇತೇ"** ಅರ್ಥಾತ್ ಕಂಠಕೂಪದಲ್ಲಿ ಸಂಯಮ ಮಾಡಿದರೆ, ಹಸಿವೆ-ಬಾಯಾರಿಕೆಗಳು ಕಷ್ಟ ಕೊಡುವುದಿಲ್ಲ. ವ್ಯಾಸರು ಇಲ್ಲಿ ಹಸಿವೆ-ಬಾಯಾರಿಕೆಗಳು ಎಂದೆಂದಿಗೂ ಆಗುವುದಿಲ್ಲವೆಂದು ಹೇಳಲಿಲ್ಲ. ಸೂತ್ರಕಾರರ ಅಭಿಪ್ರಾಯವು ಇದಲ್ಲ. ನಿಜವಾಗಿ ಈ ಸೂತ್ರದ ಅಭಿಪ್ರಾಯವೇನೆಂದರೆ, ಕಂಠಕೂಪದಲ್ಲಿ ಸಂಯಮ ಮಾಡಿದರೆ ಸ್ವಲ್ಪಕಾಲದ ತನಕ ಹಸಿವೆ-ಬಾಯಾರಿಕೆಗಳು ಯೋಗಿಯನ್ನು ಬಾಧಿಸುವುದಿಲ್ಲ. ಯಾವ ರೀತಿಯಲ್ಲಿ ಸೂತ್ರಕಾರರು **"ತತೋ**

  

**ದ್ವಂದ್ವಾನಭಿಘಾತಃ**" (ಯೋಗ ದರ್ಶನ 2-48) ಎಂದರೆ, ಆಸನವು ಸಿದ್ಧಿಸಿದ ನಂತರ, ಯೋಗಿಗೆ ಶೀತೋಷ್ಣಾದಿದ್ವಂದ್ವಗಳಿಂದ ಕಷ್ಟವಾಗುವುದಿಲ್ಲ, ಎಂದು ಹೇಳಿ, ಆಸನದ ಪ್ರಯೋಜನವನ್ನು ತಿಳಿಸಿದ್ದಾರೆಯೋ, ಅದೇ ರೀತಿಯಲ್ಲಿ ಇಲ್ಲಿ ಸಂಯಮದ ಪ್ರಯೋಜನವನ್ನು ಹೇಳಿದ್ದಾರೆ. ಇಲ್ಲಿ ಶೀತೋಷ್ಣಾದಿ ದ್ವಂದ್ವಗಳು ಯೋಗಿಯನ್ನು ಬಾಧಿಸುವುದಿಲ್ಲ, ಎಂಬುದರ ಅರ್ಥ, ಅಗ್ನಿಯು ಅವನ ಶರೀರವನ್ನು ಸುಡುವುದಿಲ್ಲ ಎಂದಾಗುವುದಿಲ್ಲ. ಒಂದು ವೇಳೆ ಈ ರೀತಿ ಯಾರಾದರೂ ಅವನನ್ನು ಬೆಂಕಿಯಲ್ಲಿ ಹಾಕಿಬಿಟ್ಟರೆ ಅಥವಾ ಉರಿಯುತ್ತಿರುವ ಇಟ್ಟಿಗೆಯ ಕುಲುಮೆಯಲ್ಲಿ ಕುಳ್ಳಿರಿಸಿದರೆ, ಬಹಳ ಅನರ್ಥವಾದೀತು. ಎಷ್ಟೇ ದೊಡ್ಡ ಆಸನ ಸಿದ್ಧಿಯಾದವನಿರಲಿ, ಪ್ರಜ್ವಲಿತವಾದ ಬೆಂಕಿ ಅವನನ್ನು ಸುಡಲೇಬೇಕು. ಆದುದರಿಂದ, ಆಸನವು ಸಿದ್ಧವಾದ ಒಬ್ಬ ಯೋಗಾಭ್ಯಾಸಿಗೆ ಶೀತ ಅಥವಾ ಉಷ್ಣತೆಯು ಒಂದು ಸೀಮೆಯತನಕ ಕಷ್ಟವನ್ನು ಕೊಡುವುದಿಲ್ಲ, ಎಂದಿಷ್ಟೇ ತಿಳಿದುಕೊಳ್ಳಬೇಕು. ಇದೇ ರೀತಿಯಲ್ಲಿ ಕಂಠಕೂಪದಲ್ಲಿ ಸಂಯಮಮಾಡಿದರೆ, ಸ್ವಲ್ಪಕಾಲದ ತನಕ ಯೋಗಿಗೆ ಹಸಿವೆ ಅಥವಾ ಬಾಯಾರಿಕೆಯ ಕಷ್ಟವು ಆಗುವುದಿಲ್ಲ, ಎಂದು ಅರ್ಥಮಾಡಿಕೊಳ್ಳಬೇಕು.

ಶ್ರೀಶಂಕರದೇವರ ವಿಚಾರವು ಆಯುರ್ವೇದದ ಸಿದ್ಧಾಂತಕ್ಕೂ ವಿರುದ್ಧವಾಗಿದೆ. ಆಯುರ್ವೇದದಲ್ಲಿ ಒಬ್ಬ ಆರೋಗ್ಯವಂತ ಪುರುಷನ ಲಕ್ಷಣವನ್ನು ಹೀಗೆ ವರ್ಣಿಸಿದ್ದಾರೆ:—

**ಸಮಧೋಷಃ ಸಮಾಗ್ನಿಶ್ಚ ಸಮಧಾತುಮಲಕ್ರಿಯಃ ।**
**ಪ್ರಸನ್ನಾತ್ಮೇಂದ್ರಿಯ ಮನಾಃ ಸ್ವಸ್ಥ ಇತ್ಯಭಿಧೀಯತೇ ॥** (ಸುಶ್ರುತ)

ಅರ್ಥಾತ್, ಯಾರ ವಾತ, ಪಿತ್ತ ಮತ್ತು ಕಫ ಎಂಬ ಮೂರು ದೋಷಗಳು ಸಮರೂಪದಲ್ಲಿವೆಯೋ, ಯಾರ ಜಠರಾಗ್ನಿಯು ಸರಿಯಾಗಿ ಕೆಲಸಮಾಡುತ್ತದೋ, ಯಾರ ಶರೀರದಲ್ಲಿ ರಸ ಇತ್ಯಾದಿ ಸಪ್ತಧಾತುಗಳು ಸಮಾನವಾಗಿ ಇರುತ್ತವೆಯೋ, ಯಾರ ಶರೀರದಿಂದ ಮಲ-ಮೂತ್ರಾದಿಗಳು ಸಮಯಕ್ಕೆ ಸರಿಯಾಗಿ ಹೊರಗೆ ಬೀಳುತ್ತವೆಯೋ ಮತ್ತು ಯಾರ ಆತ್ಮ ಇಂದ್ರಿಯ ಮತ್ತು ಮನಸ್ಸು ಪ್ರಸನ್ನವಾಗಿವೆಯೋ ಅವನೇ ಸ್ವಸ್ಥ ಎಂದರೆ ಆರೋಗ್ಯವಂತನಾದ ಮನುಷ್ಯನಾಗಿದ್ದಾನೆ.

ಯಾವ ಮನುಷ್ಯನು ಕೇವಲ ವಾಯುಸೇವನೆ ಮಾಡುತ್ತಿರುತ್ತಾನೆಯೋ, ಅವನ ಶರೀರದಲ್ಲಿ ಕಫವು ಹೇಗೆ ಉತ್ಪನ್ನವಾಗಬೇಕು? ಅವನ ಶರೀರದಲ್ಲಿ ರಸ, ರಕ್ತ ಮೊದಲಾದ ಧಾತುಗಳು ಹೇಗೆ ಉತ್ಪನ್ನವಾಗಬೇಕು? ಅವನ ಶರೀರದಲ್ಲಿ ಮಲಕ್ರಿಯೆಯು ಹೇಗೆ ನಡೆಯಬೇಕು? ಕೇವಲ ವಾಯು ಸೇವನೆಯಿಂದ ಮಲ-ಮೂತ್ರಗಳ ಉತ್ಪತ್ತಿಯು ಅಸಂಗತವಾಗಿದೆ. ಯಾವ ವ್ಯಕ್ತಿಗೆ ಅನ್ನ, ಫಲ ವಸ್ತುಗಳು, ಹಾಲು, ನೀರು ಮೊದಲಾದ ಆಹಾರಗಳು ಸಿಗುವುದಿಲ್ಲವೋ, ಯಾರಿಗೆ

ಕೇವಲ ಗಾಳಿಯ ವಾಸನೆ ಮಾತ್ರ ಸಿಗುತ್ತದೆಯೋ, ಆ ವ್ಯಕ್ತಿಯ ಆತ್ಮ, ಇಂದ್ರಿಯಗಳು ಮತ್ತು ಮನಸ್ಸು ಪ್ರಸನ್ನವಾಗಿರುವುದು, ಬಹಳ ದೂರದ ಮಾತು. ಅವನು ದುಃಖ ಸಾಗರದಲ್ಲಿ ಮುಳುಗಿರುತ್ತಾನೆ. ಧೀರ್ಘಕಾಲ ಕೇವಲ ವಾಯು ಮಾತ್ರ ಸೇವನೆ ಮಾಡುತ್ತಾ ಇದ್ದರೆ, ಅಂತಹ ವ್ಯಕ್ತಿಯು ಖಂಡಿತವಾಗಿಯೂ ಮೃತ್ಯುವಿನ ದವಡೆಯನ್ನು ಪ್ರವೇಶಮಾಡುತ್ತಾನೆ. ಆದುದರಿಂದ, ಕೇವಲ ವಾಯು ಸೇವನೆ ಮಾತ್ರ ಮಾಡುತ್ತಿದ್ದು ಯಾರಿಗೂ ಯೋಗಾಭ್ಯಾಸ ಮಾಡಲಿಕ್ಕೆ ಸಾಧ್ಯವಿಲ್ಲ. ಈ ರೀತಿ ಯಾರೂ ಯೋಗಿಯಾಗಲು ಸಾಧ್ಯವಿಲ್ಲ.

ಆಯುರ್ವೇದವು ಹೀಗೆಂದು ಹೇಳುತ್ತಿದೆ :—

**"ಧರ್ಮಾರ್ಥಕಾಮ ಮೋಕ್ಷಾಣಾಮಾರೋಗ್ಯಂ ಮೂಲಮುತ್ತಮಂ।**
**ರೋಗಸ್ತಸ್ಯಾಪಹರ್ತಾರಃ ಶ್ರೇಯಸೋ ಜೀವಿತಸ್ಯ ಚ॥"**

(ಚರಕ-ಸೂತ್ರಸ್ಥಾನ ಅಂ 1-15)

ಅರ್ಥಾತ್, ಧರ್ಮ, ಅರ್ಥ ಕಾಮ ಮತ್ತು ಮೋಕ್ಷದ ಉತ್ತಮ ಆಧಾರವು ಆರೋಗ್ಯವಾಗಿದೆ. ರೋಗವು ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷ ಮತ್ತು ಮನುಷ್ಯ ಜೀವನದ ಶತ್ರುವಾಗಿದೆ. ಆದುದರಿಂದ, ಕೇವಲ ವಾಯುಸೇವನೆಯಿಂದ ಯಾರೂ ಸ್ವಸ್ಥವಾಗಿರಲು ಮತ್ತು ಜೀವಿಸಿಕೊಂಡಿರಲು ಸಾಧ್ಯವಿಲ್ಲ. ಹೀಗಿರುವಾಗ ಸ್ವಸ್ಥಜೀವನದ ಅಭಾವದಲ್ಲಿ ಯಾರಿಗೂ ಯೋಗಿಯಾಗಿ, ಧರ್ಮಾರ್ಥ ಕಾಮಮೋಕ್ಷಗಳನ್ನು ಸಿದ್ಧಿಸಲು ಸಾಧ್ಯವಾಗಲಾರದು.

**ಪ್ರಶ್ನೆ** :— ಸಾಮಾನ್ಯ ಮನುಷ್ಯರಿಗೆ, ಭೋಜನಾದಿಗಳಿಂದ ಹೇಗೆ ಶಕ್ತಿಯು ಲಭಿಸುತ್ತದೆಯೋ, ಹಾಗೆಯೇ ಒಬ್ಬ ಯೋಗಿಗೆ ಈ ಶಕ್ತಿಯು ವಾಯು ಸೇವನೆಯಿಂದ ಸಿಗುತ್ತದೆ ಎಂದು ಕೆಲವರು ಹೇಳುತ್ತಾರೆ.

**ಉತ್ತರ** :— ಈ ಮಾತು ಕೂಡ, ಪ್ರಮಾಣ ಮತ್ತು ತರ್ಕಕ್ಕೆ ವಿರುದ್ಧವಾಗಿರುವುದರಿಂದ, ನಂಬುವುದಕ್ಕೆ ಯೋಗ್ಯವಾಗಿಲ್ಲ. ಕೇವಲ ಬಾಯಿಮಾತಿನಿಂದ ವ್ಯಕ್ತಪಡಿಸಿದ ವಿಚಾರವು ಸತ್ಯವೆಂದು ಸ್ವೀಕರಿಸಲು ಯೋಗ್ಯವಾಗಿರುವುದಿಲ್ಲ. ಹಾಗೆಯೇ ಅದನ್ನು ಅಸತ್ಯವೆಂದು ಹೇಳಲೂ ಬರುವುದಿಲ್ಲ. ಯಾವುದೇ ಒಂದು ಸಿದ್ಧಾಂತವನ್ನು ಸ್ವೀಕರಿಸುವ ಮೊದಲು ಅದನ್ನು ಪ್ರಮಾಣ ಮತ್ತು ತರ್ಕದಿಂದ ಪರೀಕ್ಷಿಸಲೇಬೇಕು.

ಮೇಲೆ ಹೇಳಿದ ಶಂಕರದೇವವಿದ್ಯಾಲಂಕಾರರು, ಈ ರೀತಿ ವಿಚಾರ ಮಾಡದೆಯೇ ಒಪ್ಪಿಕೊಂಡಿದ್ದಾರೆ. ಆದರೆ ಇದಕ್ಕೆ ಪ್ರಮಾಣ ಮತ್ತು ತರ್ಕದ ಆಧಾರ

ಇಲ್ಲದಿರುವುದರಿಂದ ಇದು ಸರ್ವಥಾ ತಿರಸ್ಕರಿಸಲು ಯೋಗ್ಯವಾಗಿದೆ. ಶ್ರೀ ಶಂಕರದೇವರು ಮಾತೆ ಮಾಣಿಕೇಶ್ವರೀಯನ್ನು ಮಹಾಯೋಗಿನೀ ಎಂದು ನಂಬಿಕೊಂಡಿದ್ದಾರೆ. ಕಳೆದ ಹದಿನೈದು ವರ್ಷಗಳಿಂದ ಕೇವಲ ವಾಯುಸೇವನೆ ಮಾಡಿಕೊಂಡೇ ಆಕೆ ಸುಖವಾಗಿ ಜೀವನವನ್ನು ಸಾಗಿಸಿಕೊಂಡು ಬಂದಿದ್ದಾಳೆ ಎಂದೂ ಇವರು ಬರೆದಿದ್ದಾರೆ. ಕಳೆದ ಹದಿನೈದು ವರ್ಷಗಳಿಂದ ಆಕೆಯ ಶರೀರದಿಂದ ಮಲ-ಮೂತ್ರಗಳೂ ಹೊರಗೆ ಬರುವುದಿಲ್ಲ. ಇಲ್ಲಿ ನಾನು ಶ್ರೀ ಶಂಕರದೇವರ ಮುಂದೆ ಇಡುವ ಪ್ರಶ್ನೆ ಏನೆಂದರೆ, ತಾವು ಕಳೆದ ಏಳೆಂಟು ವರ್ಷಗಳಿಂದ ಈ ಮಾತೆಯ ಸಂಪರ್ಕದಲ್ಲಿ ಇದ್ದೀರಿ. ಹೀಗಿರುವಾಗ, ತಾವು ಯಾಕೆ ಕೇವಲ ವಾಯು ಸೇವನೆಯಿಂದ ಜೀವನ ನಿರ್ವಾಹ ಮಾಡುವುದಿಲ್ಲ? ಈ ತಾಯಿಯು ಎಲ್ಲರ ಕಲ್ಯಾಣವನ್ನು ಬಯಸುತ್ತಾಳೆ ತಾನೆ? ಆಕೆಯಿಂದ ಈ ವಿಧಿಯನ್ನು ತಾವು ಕಲಿತು, ಮತ್ತು ಎಲ್ಲರಿಗೂ ಅದನ್ನು ಕಲಿಸಿ, ವಿಶ್ವದ ಅನ್ನದ ಸಮಸ್ಯೆಯನ್ನು ಬಗೆಹರಿಸಲು ಯಾಕೆ ಪ್ರಯತ್ನಿಸುತ್ತಿಲ್ಲ? ಪರರಾಷ್ಟ್ರಗಳ ಮುಂದೆ ಈಗ ಭಾರತಕ್ಕೆ ಜೋಳಿಗೆ ಮುಂದಿಟ್ಟು ಬೇಡಬೇಕಾಗಿ ಬಂದಿದೆ. ಈ ಕಷ್ಟವನ್ನು ದೂರ ಮಾಡಲಿಕ್ಕೆ ನೀವೆಲ್ಲಾ ಯಾಕೆ ಪ್ರಯತ್ನಮಾಡುವುದಿಲ್ಲ? ಈ ತಾಯಿಯು ಈಗ ಜೀವಿಸುತ್ತಿದ್ದಾಳೆ. ಅವಳಿಂದ ಈಗಲೇ ಜೀವನಯಾತ್ರೆಯ ನಿಯಮಗಳನ್ನು ಕೇಳಿ ತಿಳಿದುಕೊಳ್ಳಿರಿ, ಮತ್ತು ಅನ್ನ, ಫಲವಸ್ತುಗಳು, ಹಾಲು, ನೀರು, ಬೆಂಕಿ ಇತ್ಯಾದಿಗಳ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಿರಿ. ಪ್ರಪಂಚದಲ್ಲಿ ಈಗ ತುಂಬಾ ಜನರು ದುಃಖ ಸಂತಪ್ತರಾಗಿದ್ದಾರೆ. ಇಲ್ಲಿ ಈಗ ಎಲ್ಲಾ ವಸ್ತುಗಳ ಅಭಾವವು ಕಂಡುಬರುತ್ತಿದೆ. ಆದರೆ, ಗಾಳಿ ಮಾತ್ರ ಸಾಕಷ್ಟು ಇದೆ. ತಮ್ಮ ಈ ವಿಧಿಯ ಪ್ರಚಾರವಾದರೆ, ಕೇವಲ ವಾಯು ಸೇವನೆಯಿಂದಲೇ ಮನುಷ್ಯ ಜೀವನವು ಸಫಲವಾಗಬಹುದಲ್ಲವೆ?

ಲೇಖಕ ಮಹೋದಯರು, ತಾವು ಇಂತಹ ಮಿಥ್ಯಾ ವಿಚಾರಗಳನ್ನು ಬರೆಯುವಾಗ ಇದರಿಂದ ಲೋಕಕ್ಕೆ ಎಷ್ಟು ಹಾನಿಯಾಗಬಹುದು ಎಂಬುದನ್ನು ಸ್ವಲ್ಪ ವಿಚಾರಿಸಬಹುದಿತ್ತಲ್ಲವೆ? ಇವರು, ಯೋಗಿಯ ಸಂಕಲ್ಪ ಶಕ್ತಿಯ ಬಗ್ಗೆ ಬರೆಯುತ್ತಾ, "ಇಲ್ಲಿ ನಾನು ಇಷ್ಟೇ ಹೇಳಿಬಿಟ್ಟು, ಮುಂದೆ ಸಾಗಬೇಕೆಂದು ಇಚ್ಛಿಸುತ್ತೇನೆ, ಅದು ಏನೆಂದರೆ ಒಬ್ಬ ಯೋಗಿಯ ಸಂಕಲ್ಪಶಕ್ತಿಯಿಂದ ಎಲ್ಲವೂ ಸಂಭವವಾಗುತ್ತದೆ." (ಮಹಾಯೋಗಿನೀ ಶ್ರೀಮಾಣಿಕೇಶ್ವರೀ ಮಾತೆಯ ಜೀವನ ಚರಿತ್ರೆ, ಪುಟ 31)

ಇಲ್ಲಿ ನನ್ನ ಪ್ರಶ್ನೆ ಏನೆಂದರೆ, ಒಬ್ಬ ಯೋಗಿಯ ಸಂಕಲ್ಪಶಕ್ತಿಯಿಂದ, ಕಾರಣವಿಲ್ಲದೆ ಕಾರ್ಯವು ಉತ್ಪನ್ನವಾಗಬಹುದೆ? ಮಣ್ಣು ಇಲ್ಲದೆ ಮಡಿಕೆಯನ್ನು, ಚಿನ್ನ-ಬೆಳ್ಳಿ ಇತ್ಯಾದಿ ಇಲ್ಲದೆ ಆಭರಣಗಳನ್ನು ಮಾಡಲು ಸಾಧ್ಯವೆ? ಯೋಗಿಯ ಸಂಕಲ್ಪ ಶಕ್ತಿಯಿಂದ ಬೆಂಕಿಯು ಉಷ್ಣತೆಯನ್ನು ಕಳೆದುಕೊಳ್ಳಬಹುದೆ? ಯೋಗಿಯು

ಸಂಕಲ್ಪಮಾತ್ರದಿಂದ, ಭಾವದಿಂದ ಅಭಾವ, ಅಭಾವದಿಂದ ಭಾವವನ್ನು ನಿರ್ಮಾಣ ಮಾಡಬಲ್ಲನೆ? ಈ ಪ್ರಶ್ನೆಗಳಿಗೆ ಲೇಖಕ ಮಹೋದಯರ ಬಳಿಯಲ್ಲಿ ಉತ್ತರ ಇರಲಿಕ್ಕಿಲ್ಲ, ಎಂದು ನಾನು ನಂಬುತ್ತೇನೆ. ಈ ಎಲ್ಲಾ ವಿಷಯಗಳನ್ನು ಕೇವಲ ಸಾಧನೆಯಿಂದಲೇ ತಿಳಿದುಕೊಳ್ಳಲಿಕ್ಕೆ ಸಾಧ್ಯ ಎಂದು ಹೇಳಿ, ಮಾನ್ಯ ಲೇಖಕರು ತಮ್ಮನ್ನು ಕೃತಕೃತ್ಯರೆಂದು ತಿಳಿದುಕೊಂಡಿದ್ದಾರೆ. ಆದರೆ ಲೇಖಕರು ತಾವು ಇಂತಹ ಸಾಧನೆಯನ್ನು ಮಾಡುತ್ತಿಲ್ಲ. ಈ ಮಾತುಗಳನ್ನು ಸತ್ಯವೆಂದು ಸಿದ್ಧಪಡಿಸುವುದಕ್ಕೆ ತಮ್ಮಲ್ಲಿ ಯಾವ ಪ್ರಮಾಣವೂ ಇಲ್ಲ. ವಸ್ತುಸ್ಥಿತಿ ಹೀಗಿರುವಾಗ, ಇಂತಹ ನಿರಾಧಾರ ಮಾತುಗಳನ್ನು ಬರೆದು ಪ್ರಚಾರ ಮಾಡುವುದು, ಅತ್ಯಂತ ಹಾನಿಕಾರಕವಾಗಿದೆ.

ಈ ವಿಚಾರವು ಪ್ರತ್ಯಕ್ಷ ಪ್ರಮಾಣಕ್ಕೆ ವಿರುದ್ಧವಾಗಿದೆ. ಅದು ಹೇಗೆಂದರೆ, ಲೋಕದಲ್ಲಿ ಯಾರು ಶುದ್ಧ ಅನ್ನಪಾನೀಯಗಳ ಸೇವನೆ ಮಾಡುತ್ತಿರುತ್ತಾರೆಯೋ, ಅವರು ಸ್ವಸ್ಥ ಮತ್ತು ಬಲಶಾಲಿಗಳಾಗಿರುವುದನ್ನು ನಾವು ನೋಡುತ್ತಿದ್ದೇವೆ. ಯಾರಿಗೆ ಇಂತಹ ಪದಾರ್ಥಗಳು ಸಿಗುವುದಿಲ್ಲವೋ ಅವರು ಬಲಶಾಲಿಗಳಾಗುವುದಂತೂ ಇರಲಿ, ಅವರು ಬಾಳುವುದೂ ಕಷ್ಟವಾಗಿದೆ. ಈ ಪ್ರತ್ಯಕ್ಷ ಸತ್ಯವನ್ನು ಯಾರಿಗೂ ತಮ್ಮ ವಾಗ್ಜಾಲದಿಂದ ಅಸತ್ಯವೆಂದು ಸಿದ್ಧಪಡಿಸಲಿಕ್ಕೆ ಸಾಧ್ಯವಿಲ್ಲ.

ಶ್ರೀ ಶಂಕರದೇವರು, ತಮ್ಮ ಪುಸ್ತಕದಲ್ಲಿ, ಮಹಾತ್ಮಗಾಂಧೀಜಿಯವರು ಒಂದು ಬಾರಿ ಇಪ್ಪತ್ತೊಂದು ದಿನ ಉಪವಾಸಮಾಡಿದ್ದರು, ಆಗ ಅವರ ಶರೀರ ಭಾರವು ಮೊದಲಿಗಿಂತ ಹೆಚ್ಚಾಗಿತ್ತು, ಎಂದು ಬರೆದಿದ್ದಾರೆ.

ಈ ಮಾತು ಕೂಡ ಪ್ರತ್ಯಕ್ಷ ಪ್ರಮಾಣಕ್ಕೆ ವಿರುದ್ಧವಾಗಿರುವುದರಿಂದ ಅಸತ್ಯವಾಗಿದೆ. ಯಾವನೇ ಒಬ್ಬ ಆರೋಗ್ಯವಂತನಾದ ವ್ಯಕ್ತಿಯು ಉಪವಾಸ ಮಾಡಿದರೆ, ಅವನು ನಿರ್ಬಲನಾಗುತ್ತಾನೆ ಮತ್ತು ಅವನ ಶರೀರದ ಭಾರವು ಕಡಿಮೆಯಾಗುತ್ತದೆ. ಇದನ್ನು ನಾವು ಪ್ರತ್ಯಕ್ಷವಾಗಿ ನೋಡಬಹುದು. ಒಂದು ವೇಳೆ ಉಪವಾಸದ ಪರಿಣಾಮವಾಗಿ ಗಾಂಧೀಜೀಯವರ ಭಾರವು ಹೆಚ್ಚಾಗಿತ್ತು ಎಂಬ ಮಾತು ನಿಜವಾಗಿದ್ದರೆ, ಅವರಿಗೆ ಹಾಲು ಕುಡಿಯುವ ಆವಶ್ಯಕತೆಯು ಇರಲಿಲ್ಲ. ಅವರಲ್ಲಿ ಇಂತಹ ವಿದ್ಯೆಯು ಇರುತ್ತಿದ್ದರೆ, ಅವರು ಭಾರತದ ಅನ್ನದ ಸಮಸ್ಯೆಯನ್ನು ಯಾಕೆ ಬಗೆಹರಿಸಲಿಲ್ಲ? ಉಪವಾಸದಿಂದ ಬಲ ಮತ್ತು ಭಾರದ ವೃದ್ಧಿಯಾಗುವ ಮಾತಂತಿರಲಿ, ಒಂದು ವೇಳೆ ಗಾಂಧೀಜೀಯವರು ಅನ್ನ, ಹಾಲು ಇತ್ಯಾದಿಗಳ ಸೇವನೆಯನ್ನು ಮಾಡದೆ ಇರುತ್ತಿದ್ದರೆ, ಅವರು ತಾವು ಗುಂಡಿನ ಏಟಿಗೆ ಬಲಿಯಾಗುವ ಕೆಲವು ವರ್ಷಗಳ ಮುಂಚೆಯೇ ಪರಲೋಕಕ್ಕೆ ಹೋಗುತ್ತಿದ್ದರು. ಆದುದರಿಂದ, ಉಪವಾಸದಿಂದ ಶರೀರದ ಭಾರವು ಹೆಚ್ಚುತ್ತದೆ ಎಂಬ ಮಾತು ಕೇವಲ ಅಜ್ಞಾನ ಕಲ್ಪಿತವಾಗಿದೆ.

ಈಗ ನಾನು, ಮೇಲೆ ಹದಿನೈದು ವರ್ಷಗಳಿಂದ ಬರೀ ಗಾಳಿಯ ಸೇವನೆ ಮಾಡಿಕೊಂಡು ಜೀವಿಸಿರುವ ಯಾವ ತಾಯಿಯ ಚರ್ಚೆಯನ್ನು ಮಾಡಿರುತ್ತೇನೆಯೋ, ಆಕೆಯ ಬಳಿಗೆ ಹೋಗಿ ನಾನು ಏನೆಲ್ಲಾ ಪ್ರತ್ಯಕ್ಷವಾಗಿ ನೋಡಿದ್ದೇನೆಯೋ ಮತ್ತು ನನ್ನ ಮನಸ್ಸಿನ ಮೇಲೆ ಇದರಿಂದ ಏನು ಪ್ರಭಾವವು ಬಿದ್ದಿತ್ತೋ, ಅದನ್ನಿಲ್ಲಿ ಜನರಿಗೆ ಲಾಭವಾಗಲಿ ಎಂಬ ಭಾವನೆಯಿಂದ ಬರೆಯುತ್ತಿದ್ದೇನೆ.

ಒಂದು ಬಾರಿ ನಾನು, ಪ್ರಚಾರ ಮತ್ತು ಭ್ರಮಣದ ಉದ್ದೇಶದಿಂದ ಹೈದರಾಬಾದಿಗೆ ಹೋಗಿದ್ದೆನು. ಅಲ್ಲಿ ಈ 'ಮಾತಾಜೀ'ಯ ಪ್ರಸಿದ್ಧಿಯು ನನ್ನ ಕಿವಿಗೆ ಬಿತ್ತು. ಆಕೆಯು ಒಬ್ಬ ದೊಡ್ಡ ಯೋಗಿನಿ ಎಂದು ಜನರು ಹೇಳುತ್ತಿದ್ದರು. ನಾನು ಮತ್ತು ನನ್ನ ಮಿತ್ರರು ಎರಡು ಮೋಟಾರ್ ಕಾರುಗಳಲ್ಲಿ ಕುಳಿತುಕೊಂಡು ಆಕೆಯ ಆಶ್ರಮಕ್ಕೆ ಹೋಗಿ ತಲುಪಿದೆವು. ಮತ್ತು ಅಲ್ಲಿ ಆಕೆಯನ್ನು ಭೆಟ್ಟಿಮಾಡಿ ಯೋಗದ ವಿಷಯದಲ್ಲಿ ಆಕೆಯ ವಿಶೇಷತೆ ಏನು ಎಂಬುದನ್ನು ತಿಳಿದುಕೊಳ್ಳುವ ಅಭಿಲಾಷೆಯಿಂದ ಪ್ರತೀಕ್ಷೆಮಾಡಿಕೊಂಡು ಕುಳಿತೆವು. ತುಂಬಾ ಹೊತ್ತುಕಾದ ನಂತರ, ಆಕೆಯು ಗುಹೆಯಿಂದ ಹೊರಗೆ ಬಂದಳು, ಮತ್ತು ಆಕೆಯ ದರ್ಶನಾಭಿಲಾಷಿಗಳು ದರ್ಶನಕ್ಕಾಗಿ ಬರಬಹುದು ಎಂದು ಸೂಚನೆಯು ಸಿಕ್ಕಿತು. ನಾವು ಆಕೆಯ ಆಶ್ರಮವನ್ನು ಪ್ರವೇಶಿಸಿದೆವು, ಮತ್ತು ಒಳಗೆ ಒಂದು ಕೋಣೆಯ ಮಾಡಿನ ಮೇಲೆ ಕುಳಿತಿರುವ ಆ 'ಮಾತಾಜೀ'ಯನ್ನು ನೋಡಿದೆವು. ಎಲ್ಲಾ ಸ್ತ್ರೀ-ಪುರುಷರು ತಮ್ಮ ತಮ್ಮ ರೀತಿಯಲ್ಲಿ ಆಕೆಗೆ ಪ್ರಣಾಮ ಮಾಡುತ್ತಿದ್ದರು. ನಾವು ಕೂಡ ನಮಸ್ತೇ ಮಾಡಿದೆವು. ಆದರೆ, ನಮ್ಮ ನಮಸ್ತೇಗೆ ಉತ್ತರವಾಗಿ, ಆಕೆಯ ಕಡೆಯಿಂದ ಬನ್ನಿರಿ, ಕುಳಿತುಕೊಳ್ಳಿರಿ, ಯಾಕೆ ಬಂದಿರಿ, ಎಂಬ ಮಾತಿನ ಯಾವ ಸಂಕೇಥವೂ ನಮಗೆ ಸಿಗಲಿಲ್ಲ. ಈ ದೃಶ್ಯವನ್ನು ನೋಡಿ, ಯಾರಿಗೆ ಕುಳಿತುಕೊಳ್ಳುವ, ಏಳುವ (ಜನರನ್ನು ಭೆಟ್ಟಿ ಮಾಡುವ) ಶಿಷ್ಟಾಚಾರವೇ ಗೊತ್ತಿಲ್ಲವೋ, ಆಕೆಯು ಮಹಾಯೋಗಿನೀ ಆಗಿರಲು ಹೇಗೆ ಸಾಧ್ಯ, ಎಂದು ನಾನು ನನ್ನ ಮನಸ್ಸಿನಲ್ಲಿಯೇ ಎಣಿಸಿಕೊಂಡೆ. ಯಾಕೆಂದರೆ, ಸನ್ಯಾಸಿಗಳು, ಉಪದೇಶಕರು, ವೃದ್ಧರು ಎಲ್ಲಾ ಕೆಳಗೆ ನಿಂತಿರುತ್ತಾರೆ. ಆಕೆ ಕಾಗೆಯ ಹಾಗೆ? ತನ್ನ ಕೋಣೆಯ ಮಾಡಿನ ಮೇಲೆ ಕುಳಿತಿದ್ದಾಳೆ. ಶಿಷ್ಟಾಚಾರದ ದೃಷ್ಟಿಯಿಂದಾದರೂ ಕೆಳಗೆ ಇಳಿದು ಬಂದು, ಎಲ್ಲರನ್ನೂ ಕುಳಿತುಕೊಳ್ಳಲಿಕ್ಕೆ ಹೇಳುವ ಮತ್ತು ಒಂದೆರಡು ಔಪಚಾರಿಕತೆಯ ಮಾತುಗಳನ್ನು ಹೇಳುವ ಕಷ್ಟವನ್ನು ಆಕೆಯು ಮಾಡಲಿಲ್ಲ. ನಾವೆಲ್ಲಾ ತುಂಬಾ ಹೊತ್ತು ಕೆಳಗೆ ನಿಂತು ಕೊಂಡಿದ್ದೆವು. ಆಕೆಯು ತನ್ನ ಕಾರ್ಯಕರ್ತರೊಂದಿಗೆ ಮಾತನಾಡುತ್ತಾ ಇದ್ದಳು. ನಾನು ಜನರನ್ನು

ವಿಚಾರಿಸಿದೆನು. ಯಾವ ವಿಷಯದ ಬಗ್ಗೆ ಚರ್ಚೆಮಾಡುತ್ತಿದ್ದಾಳೆ ಎಂದು. ಆಶ್ರಮದ ದುರವಸ್ಥೆಯ ಬಗ್ಗೆ ಆಕೆ ಚರ್ಚೆ ಮಾಡುತ್ತಿದ್ದಾಳೆ, ಎಂದು ಯಾರೋ ಹೇಳಿದರು. ಇದನ್ನು ನೋಡಿ ನನಗೆ ತುಂಬಾ ಆಶ್ಚರ್ಯವಾಯಿತು.

ಡಿಲ್ಲಿ ಹರಿಯಾಣ ಮೊದಲಾದ ದೂರ ದೂರದ ಪ್ರದೇಶಗಳಿಂದ ಜನರು ಬಂದಿದ್ದಾರೆ ಮತ್ತು ಅವರೆಲ್ಲಾ ದೊಡ್ಡ ಆಸೆಯ ದೃಷ್ಟಿಯಿಂದ 'ಮಾತಾಜಿ'ಯನ್ನು ಒಂದು ಸಲ ಭೆಟ್ಟಿಯಾಗಬೇಕೆಂದು ಪ್ರಹರಿಗಳಂತೆ ಆಕೆಯ ಕಡೆ ನೋಡುತ್ತಿದ್ದಾರೆ. ಆದರೆ, ಮಾತಾಜೀ ತನ್ನ ಆಶ್ರಮದ ದುರವಸ್ಥೆಯ ಚಿಂತೆಯಲ್ಲಿದ್ದಾಳೆ. ಇಷ್ಟರಲ್ಲಿ ಸೂರ್ಯಾಸ್ತವಾಯಿತು. ಜನರೆಲ್ಲಾ ಕೋಣೆಯ ಬಾಗಿಲಿನ ಮುಂದೆ ಹೋಗಿ ಸೇರಿಕೊಂಡರು. ಮಾತಾಜೀ ಮಾಡಿನ ಮೇಲಿಂದ ಕೆಳಗೆ ಇಳಿದು ಕೋಣೆಯ ಒಳಗೆ ಹೋದಳು. ಕೂಡಲೇ ಮಾತಾಜೀಯ ಆರತಿ ಪ್ರಾರಂಭವಾಯಿತು. "ಮಾಣಿಕೀ ಅಮ್ಮಾ ನಮೋ ನಮಃ". ಇಂತಹ ಪದಗಳನ್ನು ಹಾಡುವುದರಲ್ಲಿ ಸ್ತ್ರೀಪುರುಷರೆಲ್ಲಾ ತಲ್ಲೀನರಾದರು. ಈ ರೀತಿ ಆ ಜನರೆಲ್ಲಾ ಕೇವಲ ಮಾಣಿಕೇಶ್ವರೀಯ ಸ್ತುತಿ, ಪ್ರಾರ್ಥನೆ ಮತ್ತು ಉಪಾಸನೆಯನ್ನು ಮಾಡುತ್ತಿರುವುದನ್ನು ನೋಡಿ ಇಲ್ಲಿ ಓರ್ವ ಮಾನವಿಯ ಉಪಾಸನೆಯು ನಡೆಯುತ್ತಿದೆ, ಯೋಗಿನಿಯು ಅದನ್ನು ತಡೆಯುವ ಪ್ರಯತ್ನವನ್ನು ಮಾಡುತ್ತಿಲ್ಲ, ಆದುದರಿಂದ ಈಕೆಯು ನಿಜವಾಗಿಯೂ ಓರ್ವ ಸ್ವಾರ್ಥಿ ಮತ್ತು ಅಜ್ಞಾನಿಯಾಗಿರಬೇಕು, ಯೋಗಿನಿಯಾಗಿರಲಿಕ್ಕೆ ಸಾಧ್ಯವೇ ಇಲ್ಲ, ಎಂದು ನನಗನಿಸಿತು. ಅಲ್ಲಿ ನೆರೆದಿರುವ ಜನರೆಲ್ಲಾ ಮಾತಾಜೀಯ ಸ್ತುತಿ, ಪ್ರಾರ್ಥನೆ ಮತ್ತು ಉಪಾಸನೆಯಲ್ಲಿ ಮಗ್ನರಾಗಿದ್ದರು, ಪರಮಾತ್ಮನನ್ನು ಎಲ್ಲರೂ ಮರೆತ್ತಿದ್ದರು. ಮಾತಾಜೀ ತನ್ನ ಕಡೆಯಿಂದ "ಇದು ಸರಿಯಲ್ಲ, ನೀವು ನನ್ನ ಉಪಾಸನೆ ಮಾಡುವುದು ಸರಿಯಲ್ಲ, ಉಪಾಸ್ಯದೇವನು ಕೇವಲ ಪರಮಾತ್ಮನು ಒಬ್ಬನೇ, ಅವನ ಉಪಾಸನೆಯಿಂದಲೇ ಮುಕ್ತಿಯು ಸಿಗುತ್ತದೆ" ಎಂಬ ರೀತಿಯಲ್ಲಿ ಆ ಜನರಿಗೆ ಸರಿಯಾದ ಉಪದೇಶವನ್ನು ಕೊಡಲಿಲ್ಲ. ಇದರಿಂದಲೂ ಈಕೆಯು ಖಂಡಿತವಾಗಿ ಯೋಗಿನಿಯು ಅಲ್ಲ ಎಂದು ನಾನು ನಿಶ್ಚಯ ಮಾಡಿಕೊಂಡೆನು. ಈ ಕಾರ್ಯಕ್ರಮವು ನಡೆಯುತ್ತಿದ್ದಂತೆ ಕತ್ತಲೆಯಾಯಿತು. ಆಕಾಶದಲ್ಲಿ ಮೋಡಗಳು ತುಂಬಿದವು. ಮಾತಾಜೀ ನಮಗೆ ಮಾತಾನಾಡಲಿಕ್ಕೆ ಯಾವಾಗ ಸಿಗಬಹುದು ಎಂಬ ಆಸೆಯ ದೃಷ್ಟಿಯಿಂದ ನಾವು ಪ್ರತೀಕ್ಷೆ ಮಾಡುತ್ತಾ ಇದ್ದೆವು. ಬಹಳ ಹೊತ್ತಾದನಂತರ, ಮಾತಾಜೀ ಮಹಡಿಯ ಮಾಡಿನ ಮೇಲೆ ಹತ್ತಿಕೊಂಡು ಬಂದಳು ಮತ್ತು ನಮ್ಮ ಕಡೆಗೆ ನೋಡಿದಳು. ಆಗಲೇ ನಾನು ಆಕೆಯನ್ನು ಹತ್ತಿರದಿಂದ ನೋಡಿದ್ದು, ಆಕೆಯ ಶರೀರವು, ಯಾವ ರೀತಿಯಲ್ಲಿ ಅನ್ನ, ಹಾಲು, ಫಲವಸ್ತುಗಳು ಮುಂತಾದುವುಗಳನ್ನು ಸರಿಯಾಗಿ ತಿನ್ನುವವರ ಶರೀರವು ಹೃಷ್ಟಪುಷ್ಟವಾಗಿರುತ್ತದೆಯೋ, ಅದೇ ರೀತಿಯಲ್ಲಿ ಇತ್ತು. ಇದನ್ನು ನೋಡಿ, ಹದಿನೈದು ವರ್ಷಗಳಿಂದ ಕೇವಲ ಗಾಳಿ ಸೇವನೆ

ಮಾಡಿಕೊಂಡು ಬದುಕಿರುವವಳ ಶರೀರವು ಈ ರೀತಿ ಹೃಷ್ಟಪುಷ್ಟವಾಗಿ ಇರಲಿಕ್ಕೆ ಸಾಧ್ಯವೇ ಇಲ್ಲ, ಎಂದೆನಿಸಿತು. ನಾನು ಹಿಂದೆ ಅರ್ಥಾಪತ್ತಿ ನ್ಯಾಯದ ಕುರಿತಾಗಿ ಸ್ವಲ್ಪ ಓದಿದ್ದೆ. ದೇವದತ್ತನು ಹಗಲಿನಲ್ಲಿ ಭೋಜನ, ಫಲವಸ್ತುಗಳು, ಹಾಲು ಅಥವಾ ಇನ್ನು ಯಾವುದೇ ಪದಾರ್ಥಗಳನ್ನು ತಿನ್ನುವುದಿಲ್ಲ, ಆದರೆ ಆತನು ಸ್ವಸ್ಥನೂ, ಬಲಶಾಲಿಯೂ ಆಗಿದ್ದಾನೆ, ಎಂಬ ಒಂದು ಉದಾಹರಣೆಯನ್ನು ಇಲ್ಲಿ ಕೊಡಲಾಗುತ್ತದೆ. ಇದರ ಅರ್ಥವೇನೆಂದರೆ ದೇವದತ್ತನು ಹಗಲಿನಲ್ಲಿ ಏನೂ ತಿನ್ನುವುದಿಲ್ಲ, ಆದರೆ ರಾತ್ರಿಯಲ್ಲಿ ಎಲ್ಲಾ ತಿನ್ನುತ್ತಾನೆ, ಎಂದು ಸಿದ್ಧವಾಗುತ್ತದೆ. ಇದೇ ರೀತಿಯಲ್ಲಿ, ಈ ಮಾತಾಜೀ ಜನರ ಎದುರಿನಲ್ಲಿ ಏನೂ ತಿನ್ನುವುದಿಲ್ಲ, ಆದರೆ ಗುಟ್ಟಿನಲ್ಲಿ ತಿನ್ನುತ್ತಾಳೆ, ಎಂದು ಸ್ಪಷ್ಟವಾಗುತ್ತದೆ.

ಮಾತಾಜೀ ಪುನಃ ಒಳಗೆ ಹೋಗಿ ಬಿಟ್ಟಳು, ಆಕೆಯನ್ನು ಭೆಟ್ಟಿಯಾಗುವ ನಮ್ಮ ಆಶೆಯು ಮಣ್ಣುಪಾಲಾಯಿತು. ರಾತ್ರಿ ಹತ್ತು ಘಂಟೆಯ ಹೊತ್ತಾಯಿತು. ಆಕೆ ಪುನಃ ಹೊರಗೆ ಬರಲಿಲ್ಲ. ನಾವು ನಿರಾಶೆಯಿಂದ ತೆರಳಿ ತಮ್ಮ ತಮ್ಮ ಸ್ಥಾನಗಳಿಗೆ ಹೋಗಿ ಮಲಗಿ ಕೊಂಡೆವು. ರಾತ್ರಿಯ ಹೊತ್ತಿನಲ್ಲಿ ಮಾತಾಜೀ ತನ್ನ ಕೆಲವು ಪ್ರಿಯ ಭಕ್ತರನ್ನು ತನ್ನ ಬಳಿಗೆ ಕರೆದು ಮಾತನಾಡಿದಳೆಂದು ಯಾರೋ ಹೇಳಿದರು. ನಾನಂತೂ ನನ್ನ ಮನಸ್ಸಿನಲ್ಲಿ ಖಚಿತಮಾಡಿಕೊಂಡೆ, ಆಕೆ ಯೋಗಿನಿಯು ಅಲ್ಲ, ಹದಿನೈದು ವರ್ಷಗಳಿಂದ ಕೇವಲ ವಾಯುಸೇವನೆ ಮಾಡಿಕೊಂಡು ಬದುಕಿದ್ದಾಳೆ ಎಂಬ ಮಾತು ಸುಳ್ಳು ಮತ್ತು ಇದೆಲ್ಲಾ ಮೂರ್ಖರು ಮತ್ತು ಸ್ವಾರ್ಥಿ ಜನಗಳು ರಚಿಸಿದ ಕಪಟನಾಟಕವಾಗಿತ್ತು.

ಈ ಲೇಖನದಲ್ಲಿ ನಾನು, ಯೋಗಿಗಳು ಕೇವಲ ವಾಯು ಸೇವನೆ ಮಾಡಿ ಕೊಂಡು ಬದುಕಬಹುದು ಎಂಬ ಸಿದ್ಧಾಂತವನ್ನು ಪ್ರಮಾಣ ಮತ್ತು ಯುಕ್ತಿಗಳಿಂದ ಖಂಡನೆ ಮಾಡಿದ್ದೇನೆ. ವಿದ್ವಜ್ಜನರು ಇದೇ ರೀತಿ ಸತ್ಯಾಸತ್ಯವನ್ನು ತಿಳಿದುಕೊಂಡು, ಸತ್ಯದ ಮಂಡನೆ ಮತ್ತು ಅಸತ್ಯದ ಖಂಡನೆ ಮಾಡುವರೆಂದು ನನ್ನ ಆಶೆ.

## 10. ಸ್ತ್ರೀಯರು ಯೋಗಿನಿಯಾಗಲಿಕ್ಕೆ ಸಾಧ್ಯವಿಲ್ಲವೆ?

ಕೆಲವರ ಅಭಿಪ್ರಾಯದಲ್ಲಿ ಸ್ತ್ರೀಯರು ಯೋಗಿನಿಯಾಗಲಿಕ್ಕೆ ಸಾಧ್ಯವಿಲ್ಲ ಎಂದಿದೆ. ಈ ಲೇಖನದಲ್ಲಿ ಇದೇ ವಿಷಯದ ಮೇಲೆ ಈಗ ನಿಷ್ಪಕ್ಷಭಾವದಿಂದ ವಿಚಾರಮಾಡಲಾಗುವುದು, ಮತ್ತು ಈ ಅಭಿಪ್ರಾಯವು ಎಷ್ಟು ಸತ್ಯ ಮತ್ತು ಎಷ್ಟು ಸುಳ್ಳು ಎಂಬುದನ್ನು ನೋಡಲಾಗುವುದು. ಈ ವಿಷಯದಲ್ಲಿ ಮಹರ್ಷಿ ದಯಾನಂದರು, ಚೆನ್ನಾಗಿ ಪರೀಕ್ಷೆಮಾಡಿ, ಏನೂ ಪಕ್ಷಪಾತ ಮಾಡದೆ ಕೊಟ್ಟಿರುವ ನಿರ್ಣಯವನ್ನು ಮೊದಲು ಪ್ರಮಾಣವನ್ನಾಗಿ ಕೊಡಲಾಗುತ್ತದೆ.

**(ಕ) ದಯಾನಂದರು ಸತ್ಯಾರ್ಥಪ್ರಕಾಶದ 3ನೇ ಸಮುಲ್ಲಾಸದಲ್ಲಿ ಈ ರೀತಿ ಬರೆದಿದ್ದಾರೆ —**

"ಈ ನಿಯಮವು ವಿವಾಹ ಮಾಡಿಕೊಳ್ಳಲಿಚ್ಛಿಸುವ ಪುರುಷರಿಗೆ ಮತ್ತು ಸ್ತ್ರೀಯರಿಗೆ ಪಾಲನೆ ಮಾಡಲಿಕ್ಕೆ ಯೋಗ್ಯವಾಗಿದೆ. ಯಾರಿಗೆ ವಿವಾಹ ಮಾಡಿಕೊಳ್ಳುವ ಇಚ್ಛೆ ಇರುವುದಿಲ್ಲವೋ ಅವರು ಸಾಧ್ಯವಿದ್ದರೆ ಮರಣ ಪರ್ಯಂತ ಬ್ರಹ್ಮಚಾರಿಗಳಾಗಿ ಇರಬಹುದು. ಆದರೆ ಇದು ಪೂರ್ಣವಿದ್ಯೆಯನ್ನು ಕಲಿತ, ಜಿತೇಂದ್ರಿಯರಾದ, ಏನೂ ದೋಷವಿಲ್ಲದ, ಯೋಗಿಗಳಾದ ಸ್ತ್ರೀ ಮತ್ತು ಪುರುಷರಿಗೆ ಮಾತ್ರ ಸಾಧ್ಯವಿದೆ.

**(ಖ) ಸತ್ಯಾರ್ಥ ಪ್ರಕಾಶದ 3ನೇ ಸಮುಲ್ಲಾಸದಲ್ಲಿಯೇ ಇನ್ನೊಂದು ಕಡೆ ಅವರು ಈ ರೀತಿ ಬರೆದಿದ್ದಾರೆ. ಸ್ತ್ರೀಯರು ಕೂಡ ಇದೇ ರೀತಿ ಯೋಗಾಭ್ಯಾಸ ಮಾಡಬೇಕು.**

**(ಗ) ಇದೇ ಗ್ರಂಥದ ೫ನೇ ಸಮುಲ್ಲಾಸದಲ್ಲಿ ಅವರು ಹೀಗೆಂದು ಹೇಳಿದ್ದಾರೆ—**

"ಯಾರಿಗೆ ತಮ್ಮ ನಿರ್ವಾಹ ಮಾಡಲಿಕ್ಕೆ ಸಾಧ್ಯವಿಲ್ಲವೋ, ಯಾರಿಗೆ ತಮ್ಮ ಇಂದ್ರಿಯಗಳನ್ನು ತಡೆಯಲು ಸಾಧ್ಯವಿಲ್ಲವೋ, ಅವರು ಬ್ರಹ್ಮಚರ್ಯ ಆಶ್ರಮದಿಂದ ನೇರವಾಗಿ ಸಂನ್ಯಾಸ ಆಶ್ರಮವನ್ನು ಸೇರಬಾರದು. ಯಾವ ವ್ಯಕ್ತಿಯು ವಿಷಯಗಳ ದೋಷಗಳನ್ನೂ, ಮತ್ತು ವೀರ್ಯರಕ್ಷಣೆಯ ಗುಣ(ಮಹತ್ವ)ವನ್ನೂ ಚೆನ್ನಾಗಿ ತಿಳಿದು ಕೊಂಡಿರುವನೋ, ಆ ವ್ಯಕ್ತಿಯು ಎಂದಿಗೂ ವಿಷಯಾಶಕ್ತನಾಗಲಿಕ್ಕೆ ಸಾಧ್ಯವಿಲ್ಲ. ಅವನ ವೀರ್ಯವು ವಿಚಾರಾಗ್ನಿಯ ಇಂಧನದಂತೆ ಇರುತ್ತದೆ. ಅರ್ಥಾತ್, ವೀರ್ಯವು ಅದರಲ್ಲಿಯೇ ವ್ಯಯವಾಗುತ್ತದೆ. ಲೋಕದಲ್ಲಿ ರೋಗಿಗಳಿಗೆ ವೈದ್ಯರ ಮತ್ತು ಔಷಧಿಗಳ ಆವಶ್ಯಕತೆ ಇರುತ್ತದೆ. ನಿರೋಗಿಗಳಿಗೆ ಆವಶ್ಯಕತೆ ಇರುವುದಿಲ್ಲ. ಇದೇ ರೀತಿಯಲ್ಲಿ, ಯಾವ ಪುರುಷನ ಅಥವಾ ಸ್ತ್ರೀಯ ಜೀವನದ ಉದ್ದೇಶವೇ ವಿದ್ಯೆ ಮತ್ತು ಧರ್ಮದ ವೃದ್ಧಿ, ತಥಾ ಲೋಕದ ಉಪಕಾರವಾಗಿದೆಯೋ ಆ ಪುರುಷ ಅಥವಾ ಸ್ತ್ರೀಯು ವಿವಾಹ ಮಾಡಬೇಕಾಗಿಲ್ಲ. ಹಿಂದೆ ಪಂಚ ಶಿಖ ಮೊದಲಾದ ಪುರುಷರು, ಮತ್ತು ಗಾರ್ಗಿ ಮೊದಲಾದ ಸ್ತ್ರೀಯರು ಇದೇ ರೀತಿ (ವಿವಾಹ ಮಾಡಿಕೊಳ್ಳದೆ, ಮರಣಪರ್ಯಂತ ಬ್ರಹ್ಮಚಾರಿಗಳಾಗಿ) ಬಾಳಿದ್ದರು. ಆದುದರಿಂದ ಸನ್ಯಾಸಾಶ್ರಮಕ್ಕೆ ಅಂತಹ ಯೋಗ್ಯತೆ ಇದ್ದವರೇ ಹೋಗಬೇಕು. ಯಾರಲ್ಲಿ ಅಂತಹ ಯೋಗ್ಯತೆ ಇರಲಿಲ್ಲವೋ, ಅವರು ಸಂನ್ಯಾಸಿಗಳಾದರೆ, ತಾವಂತೂ, (ಪಾಪದ ಕೂಪದಲ್ಲಿ) ಮುಳುಗುತ್ತಾರೆ, ಇತರರನ್ನೂ ಮುಳುಗಿಸುತ್ತಾರೆ."

ಋಷಿಗಳ ಈ ವಾಕ್ಯಗಳಿಂದ, ಯಾವ ರೀತಿಯಲ್ಲಿ ಪುರುಷರು ಯೋಗಿಗಳಾಗಿ ಮುಕ್ತಿಯ ಆನಂದವನ್ನು ಪಡುಯುವುದಕ್ಕೆ ಅಧಿಕಾರಿಗಳಾಗುತ್ತಾರೆಯೋ ಅದೇ ರೀತಿಯಲ್ಲಿ ಸ್ತ್ರೀಯರು ಕೂಡ ಯೋಗಿನಿಗಳಾಗಿ ಮುಕ್ತಿಯನ್ನು ಪಡೆಯುವುದಕ್ಕೆ ಅಧಿಕಾರಿಗಳಾಗುತ್ತಾರೆ. ಎಂದರೆ, ಯೋಗಿಗಳಾಗುವ, ಸಾಮರ್ಥ್ಯವು ಸ್ತ್ರೀಯರಿಗೂ ಪುರುಷರಿಗೂ ಸಮಾನವಾಗಿ ಇದೆ. ಸ್ತ್ರೀಯರ ಶರೀರದಲ್ಲಿರುವ ಜೀವಾತ್ಮಕ್ಕೆ ಯೋಗಿಯಾಗುವ ಯೋಗ್ಯತೆ ಇಲ್ಲ ಎನ್ನುವವರು ಅಜ್ಞಾನ ಮತ್ತು ಸ್ವಾರ್ಥದಲ್ಲಿ ಮುಳುಗಿದ್ದಾರೆ ಎನ್ನಬಹುದು.

ಬೃಹದಾರಣ್ಯಕ ಉಪನಿಷತ್ತಿನಲ್ಲಿ ಯಾಜ್ಞವಲ್ಕ್ಯ ಮತ್ತು ಮೈತ್ರೇಯಿೀ, ಇವರ ಸಂವಾದವು ಇದೆ. ಅಲ್ಲಿ ಯಾಜ್ಞವಲ್ಕ್ಯರು ಮೈತ್ರೇಯಿಯನ್ನು ಸಂಭೋದಿಸಿ ಹೇಳುತ್ತಿದ್ದಾರೆ. "ಹೇ ಮೈತ್ರೇಯಿೀ! ನಾನು ನಿಸ್ಸಂದೇಹವಾಗಿ ಈ ಸ್ಥಾನದಿಂದ ಮೇಲೆ ಹೋಗಲಿರುವೆನು. ಆದುದರಿಂದ ನನಗೆ ನಿಮ್ಮಿಬ್ಬರ ಸಮ್ಮತಿಯು ಬೇಕು." ಆಗ ಮೈತ್ರೇಯಿೀ ಹೇಳುತ್ತಾಳೆ; "ಭಗವನ್! ಒಂದು ವೇಳೆ ಧನ ಸಂಪತ್ತಿನಿಂದ ತುಂಬಿದ ಈ ಸಂಪೂರ್ಣ ಪೃಥ್ವಿಯು ನನ್ನದಾದರೂ ಕೂಡ, ಇದರಿಂದ ನಾನು ಹೇಗಾದರೂ ಮೋಕ್ಷಸುಖವನ್ನು ಪಡೆಯುವುದು ಸಾಧ್ಯವೆ?" ಇದಕ್ಕೆ ಯಾಜ್ಞಾವಲ್ಕ್ಯ ಹೇಳುತ್ತಾರೆ; "ಇಲ್ಲ. ಧನ-ಸಂಪತ್ತು ಮತ್ತು ಇತರ ಸಾಧನಗಳನ್ನು ಪಡೆದಿರುವ ಸಾಮಾನ್ಯ ಜನರ ಜೀವನವು ಹೇಗಿರುತ್ತದೆಯೋ, ಅದೇ ರೀತಿ ನಿನ್ನ ಜೀವನವೂ ಇರುತ್ತದೆ. ಆದರೆ ಧನ-ಸಂಪತ್ತುಗಳಿಂದ ಮೋಕ್ಷ ಸಿಗಬಹುದೆಂಬ ಆಶೆಯನ್ನು ಬಿಟ್ಟುಬಿಡು. ಇದು ಸಾಧ್ಯವಲ್ಲ." ಆಗ ಮೈತ್ರೇಯಿೀ ಹೇಳುತ್ತಾಳೆ; "ಯಾವುದರಿಂದ ನಾನು ಅಮೃತಳಾಗುವುದಕ್ಕೆ ಸಾಧ್ಯವಿಲ್ಲವೋ, ಅದನ್ನಿಟ್ಟುಕೊಂಡು ನಾನು ಏನು ಮಾಡಲಿ? ಆದುದರಿಂದ ತಾವು ತಮಗೆ ಗೊತ್ತಿರುವಂತೆ, ಯಾವುದರಿಂದ ನನಗೆ ಅಮೃತತತ್ವವು ಸಿಗಬಹುದೋ, ಅದನ್ನೇ ಹೇಳಬೇಕು." ಆಗ ಯಾಜ್ಞವಲ್ಕ್ಯರು ಮೈತ್ರೇಯಿೀಗೆ ಈ ರೀತಿ ಉಪದೇಶ ಕೊಡುತ್ತಾರೆ.

"ಹೇ ಮೈತ್ರೇಯಿೀ! ನಿಶ್ಚಯವಾಗಿಯೂ ಆತ್ಮನನ್ನೇ ನೋಡತಕ್ಕದ್ದು, ಕೇಳತಕ್ಕದ್ದು, ಮನನ ಮಾಡತಕ್ಕದ್ದು ಮತ್ತು ನಿಧಿಧ್ಯಾಸನ ಮಾಡತಕ್ಕದ್ದು. ಖಂಡಿತವಾಗಿಯೂ ಆತ್ಮದರ್ಶನ, ಶ್ರವಣ, ಮನನ ಮತ್ತು ವಿಜ್ಞಾನದಿಂದ ಎಲ್ಲವೂ ಗೊತ್ತಾಗುತ್ತದೆ."

ಈ ಸಂವಾದದಲ್ಲಿ ಮೈತ್ರೇಯಿೀಯ ಮೋಕ್ಷದ ಕಾಮನೆಯನ್ನು ವ್ಯಕ್ತಪಡಿಸಿದ್ದಾಳೆ ಮತ್ತು ಯಾಜ್ಞವಲ್ಕ್ಯರಿಂದ ಮೋಕ್ಷದ ಮಾರ್ಗವನ್ನು ಕೇಳಿದ್ದಾಳೆ. ಯಾಜ್ಞವಲ್ಕ್ಯರು, ಆಕೆಯನ್ನು ಮೋಕ್ಷಕ್ಕೆ ಅರ್ಹಳೆಂದು ಕೊಂಡು, ಆಕೆಗೆ ಮೋಕ್ಷದ

ಮಾರ್ಗವನ್ನು ಹೇಳಿಕೊಟ್ಟಿದ್ದಾರೆ. ಲೌಕಿಕ ಐಶ್ವರ್ಯಗಳಿಂದ ಮೋಕ್ಷವು ಸಿಗುವುದಿಲ್ಲ, ಪರಮಾತ್ಮನ (ಕುರಿತಾಗಿ) ಶ್ರವಣ, ಮನನ, ನಿಧಿಧ್ಯಾಸನ ಮತ್ತು ಅವನ ಸಾಕ್ಷಾತ್ಕಾರಕ್ಕಾರದಿಂದ ಮುಕ್ತಿಯು ಸಿಗುತ್ತದೆ, ಎಂದು ಯಾಜ್ಞವಲ್ಕ್ಯರು ಮೈತ್ರೇಯಿೀಗೆ ಹೇಳಿದ್ದಾರೆ. ಒಂದು ವೇಳೆ, ಸ್ತ್ರೀಯರು ಯೋಗಿನಿಯರಾಗುವುದಕ್ಕೆ ಸಾಧ್ಯವಿಲ್ಲವೆಂಬ ಮಾತನ್ನು ಋಷಿಗಳು ಒಪ್ಪುತ್ತಿದ್ದರೆ, ಯಾಜ್ಞವಲ್ಕ್ಯರು ಮೈತ್ರೇಯಿೀಗೆ ವ್ಯರ್ಥವಾಗಿ ಮೋಕ್ಷದ ಮಾರ್ಗದ ಉಪದೇಶವನ್ನು ಕೊಡುತ್ತಿರಲಿಲ್ಲ. ಬುದ್ಧಿವಂತರು ಲಾಭಕಾರಿ ಮಾತುಗಳ ಉಪದೇಶವನ್ನೇ ಕೊಡುತ್ತಾರೆಯೇ ಹೊರತು, ಏನೂ ಪ್ರಯೋಜನವಿಲ್ಲದ ಮಾತುಗಳನ್ನು ಹೇಳುವುದಿಲ್ಲ.

ಬೃಹದಾರಣ್ಯದ ಉಪನಿಷತ್ತಿನಲ್ಲಿ (ಅಂ. 3, ಭ್ರಾ. 8. ಕಂಡಿಕಾ 1) ಯಾಜ್ಞವಲ್ಕ್ಯರ ಮತ್ತು ಗಾರ್ಗಿ ಇವರ ಸಂವಾದವೂ ಇದೆ. ತುಂಬಾ ವಾದ-ವಿವಾದಗಳು ನಡೆದನಂತರ, ಪ್ರಸಿದ್ಧ ಬ್ರಹ್ಮವಾದಿನಿಯಾಗಿದ್ದ ಗಾರ್ಗಿಯು ಪುನಃ ಹೇಳುತ್ತಾಳೆ: "ಹೇ ಪೂಜ್ಯ ಬ್ರಾಹ್ಮಣರೇ ! ತಮ್ಮೆಲ್ಲರ ಅನುಮತಿ ಇದ್ದರೆ, ನಾನು ಇವರಲ್ಲಿ (ಯಾಜ್ಞವಲ್ಕ್ಯರಲ್ಲಿ) ಎರಡು ಪ್ರಶ್ನೆಗಳನ್ನು ಕೇಳಬೇಕೆಂದಿದ್ದೇನೆ. ಇವರು ನನ್ನ ಈ ಎರಡು ಪ್ರಶ್ನೆಗಳಿಗೆ ಉತ್ತರ ಕೊಟ್ಟರೆ, ತಮ್ಮೆಲ್ಲರ ಮಧ್ಯದಲ್ಲಿ, ಈ ಬ್ರಹ್ಮವಾದಿಯನ್ನು ಸೋಲಿಸಲು ಸಮರ್ಥರಾಗಿರುವ ಪುರುಷರು ಯಾರೂ ಇಲ್ಲ ಎಂದು ನಾನು ತಿಳಿದುಕೊಳ್ಳುತ್ತೇನೆ."

ಯಾಜ್ಞವಲ್ಕ್ಯರು ಗಾರ್ಗಿಯ ಎರಡೂ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟಾಗ, ಆಕೆಯು ಹೇಳುತ್ತಾಳೆ: "ನನಗೆ ಪೂಜ್ಯರಾದ ಬ್ರಾಹ್ಮಣರೇ! ನಾನು ಮೊದಲೇ ಹೇಳಿದ್ದೇನೆ, ಏನೆಂದರೆ, ಈಗ ನನ್ನ ಈ ಎರಡು ಪ್ರಶ್ನೆಗಳಿಗೆ ಯಾಜ್ಞವಲ್ಕ್ಯರು ಉತ್ತರ ಕೊಟ್ಟರೆ, ಈ ಬ್ರಹ್ಮವೇತ್ತರನ್ನು ಇನ್ನು ಮುಂದಕ್ಕೆ ತಮ್ಮಲ್ಲಿ ಯಾರಿಂದಲೂ ಸೋಲಿಸಲಿಕ್ಕೆ ಸಾಧ್ಯವಿಲ್ಲ. ಈಗ ಇಷ್ಟೇ ಸಾಕೆಂದು ತಿಳಿದು ಕೊಳ್ಳಿರಿ, ಮತ್ತು ನಮಸ್ಕಾರ ಹೇಳಿ ಯಾಜ್ಞವಲ್ಕ್ಯರಿಂದ ಬಿಡುಗಡೆಯನ್ನು ಪಡೆಯಿರಿ." ಇಷ್ಟು ಹೇಳಿ ಆ ವಾಕ್ಪಟು ವಿದುಶೀಗಾರ್ಗಿಯು ಸುಮ್ಮನಾದಳು.

ಈ ಸಂವಾದದಿಂದ, ಗಾರ್ಗಿಯು ಯೋಗ ವಿದ್ಯೆಯಲ್ಲಿ ಅತ್ಯಂತ ನಿಪುಣಳಾಗಿದ್ದಳೆಂದು ಗೊತ್ತಾಗುತ್ತದೆ. ಯಾಕೆಂದರೆ, ಅಷ್ಟು ಮಂದಿ ವಿದ್ವಾಂಸರ ಮಧ್ಯದಲ್ಲಿ, ತಾನು ಎರಡು ಪ್ರಶ್ನೆಗಳನ್ನು ಕೇಳುತ್ತೇನೆ, ಆ ಪ್ರಶ್ನೆಗಳಿಗೆ ಯಾಜ್ಞವಲ್ಕ್ಯರು ಉತ್ತರ ಕೊಟ್ಟರೆ, ಮತ್ತೆ ಅವರನ್ನು ಸೋಲಿಸುವ ವಿದ್ವಾಂಸರು ಆ ಸಭೆಯಲ್ಲಿ ಯಾರೂ ಇರಲಿಕ್ಕಿಲ್ಲ, ಎಂದು ಆಕೆಯು ಹೇಳಬೇಕಾದರೆ, ಅವಳಲ್ಲಿ ಅಂತಹ ಯೋಗ್ಯತೆಯು ಇದ್ದಿರಲೇ ಬೇಕು.

**ಪ್ರಶ್ನೆ** :– ಸ್ತ್ರೀಯರಿಗೆ ವೇದಗಳನ್ನು ಕಲಿಯುವ ಅಧಿಕಾರ ಇಲ್ಲವೆಂದು ಕೆಲವರು ಹೇಳುತ್ತಾರೆ. ವೇದಗಳನ್ನು ಕಲಿಯದಿದ್ದರೆ ಸ್ತ್ರೀಯರು ಯೋಗಿನಿಯರಾಗುವುದಕ್ಕೆ ಹೇಗೆ ಸಾಧ್ಯ? ಯೋಗದ 'ನಿಯಮ'ಗಳಲ್ಲಿ ಸ್ವಾಧ್ಯಾಯ, ಎಂದರೆ, ಮೋಕ್ಷಶಾಸ್ತ್ರಗಳ ಅಧ್ಯಯನ ಮತ್ತು ಪ್ರಣವ ಮಂತ್ರ 'ಓಂ' ಇದರ ಜಪವನ್ನು ಮಾಡಬೇಕೆಂದು ಹೇಳಿದೆ. ಇದು ಸರಿಯೇ?

**ಉತ್ತರ** :– ಮಹರ್ಷಿ ದಯಾನಂದರು, ಸತ್ಯಾರ್ಥ ಪ್ರಕಾಶದ 3ನೇ ಸಮುಲ್ಲಾಸದಲ್ಲಿ **"ಯಥೇಮಾಂ ವಾಚಂ.................."** (ಯಜುರ್ವೇದ 26-2) ಈ ವೇದಮಂತ್ರದ ಆಧಾರದಿಂದ, ಇಂತಹ ಸುಳ್ಳು ಸಿದ್ಧಾಂತಗಳನ್ನು ಖಂಡನೆಮಾಡಿ, ಸ್ತ್ರೀಯರಿಗೆ ಮಾತ್ರವಲ್ಲ, ಎಲ್ಲಾ ಮನುಷ್ಯರಿಗೂ ವೇದಗಳನ್ನು ಕಲಿಯುವ ಅಧಿಕಾರ ಇದೆ ಎಂಬುದನ್ನು ಚೆನ್ನಾಗಿ ಸಿದ್ಧಮಾಡಿದ್ದಾರೆ. ಹೆಚ್ಚುಕಡಿಮೆ, ಯಾರು ಸ್ತ್ರೀಯರಿಗೆ ವೇದಗಳನ್ನು ಕಲಿಯುವ ಅಧಿಕಾರ ಇಲ್ಲವೆಂದು ಹೇಳುತ್ತಾರೆಯೋ ಅವರೇ ಸ್ತ್ರೀಯರು ಯೋಗಿನಿಯರಾಗುವುದಕ್ಕೆ ಸಾಧ್ಯವಿಲ್ಲ ಎಂಬ ಅಸತ್ಯವಿಚಾರವನ್ನು ಪ್ರಚಾರಮಾಡುತ್ತಿದ್ದಾರೆ. ಇಂತಹ ಜನರೇ ಸ್ತ್ರೀಯರು 'ಓಂಕಾರ' ಅಥವಾ ಗಾಯತ್ರೀ ಮಂತ್ರದ ಜಪ ಮಾಡಿದರೆ ವಿಧವೆಯಾಗುತ್ತಾರೆ, ಎಂಬ ಮಾತನ್ನು ಪ್ರಚಾರಮಾಡುತ್ತಿದ್ದಾರೆ. ಇಂತಹ ಮಾತುಗಳೆಲ್ಲಾ ಪ್ರಮಾಣಕ್ಕೆ ವಿರುದ್ಧವಾಗಿರುವುದರಿಂದ ಅಸ್ವೀಕಾರ್ಯವಾಗಿವೆ, ಯೋಗ, ಸಾಂಖ್ಯ, ನ್ಯಾಯ, ವೈಶೇಷಿಕಾದಿ ಶಾಸ್ತ್ರಗಳಲ್ಲಿ ಎಲ್ಲಾ ಮನುಷ್ಯರೂ ಯೋಗಿಗಲಾಗುವ ವಿಧಾನವನ್ನು ಹೇಳಿಕೊಟ್ಟಿರುತ್ತಾರೆ. ಈ ಶಾಸ್ತ್ರಗಳಲ್ಲಿ ಎಲ್ಲಿಯೂ ಸ್ತ್ರೀಯರು ಯೋಗಿನಿಯರಾಗಲು ಸಾಧ್ಯವಿಲ್ಲ ಎಂದು ಹೇಳಿಲ್ಲ.

**ಪ್ರಶ್ನೆ** :– ಶಂಕರಾಚಾರ್ಯರನ್ನು ತುಂಬಾ ಜನರು ಒಬ್ಬ ದೊಡ್ಡ ಯೋಗಿಯೆಂದು ಹೇಳುತ್ತಾರೆ. ಅವರು ಸ್ತ್ರೀಯರ ಬಗ್ಗೆ ಈ ರೀತಿ ಹೇಳಿದ್ದಾರೆ : "ದ್ವಾರಂ ಕಿಮೇಕಂ ನರಕಸ್ಯ? ನಾರೀ। ಕಾ ಶೃಂಖಲಾ ಪ್ರಾಣಭೃತಾಂ ಹಿ? ನಾರಿ।". ಅರ್ಥ; ನಾರಿಯು ನರಕದ ದ್ವಾರವಾಗಿದ್ದಾಳೆ, ಮತ್ತು ನಾರಿಯೇ ಜಗತ್ತಿನಲ್ಲಿ ಪ್ರಾಣಿಗಳನ್ನೆಲ್ಲಾ ಬಂಧನದಲ್ಲಿ ಕಟ್ಟಿಹಾಕುವ ಸಂಕೋಲೆಯಾಗಿದ್ದಾಳೆ.

ಈ ರೀತಿ, ನಾರಿಯು ನರಕದ ದ್ವಾರ ಎಂದಾಗಿರುವಾಗ, ಆಕೆ ಯೋಗಿನಿಯಾಗಲು ಹೇಗೆ ಸಾಧ್ಯ ?

**ಉತ್ತರ:–** ಶಂಕರಾಚಾರ್ಯರನ್ನು ಒಬ್ಬ ದೊಡ್ಡ ಯೋಗಿ ಎಂದು ಹೇಳುವುದಕ್ಕೆ ಏನೂ ಆಧಾರವಿಲ್ಲ. ಅಂತೆಯೇ ಯೋಗದ ವಿಷಯದಲ್ಲಿ ಅವರ ಮಾತುಗಳನ್ನು ಪ್ರಮಾಣವನ್ನಾಗಿ ಸ್ವೀಕರಿಸಲು ಸಾಧ್ಯವಿಲ್ಲ ಯಾಕೆಂದರೆ, ಅವರು ಜೀವಾತ್ಮ ಮತ್ತು ಬ್ರಹ್ಮನನ್ನು ಒಂದೇ ಎಂದು ಹೇಳುತ್ತಾರೆ. ಯಾರು ಜೀವರನ್ನು ಬ್ರಹ್ಮನಿಂದ ಮತ್ತು ಇವೆರಡು ಜೀವ ಮತ್ತು ಬ್ರಹ್ಮರನ್ನು ಪ್ರಕೃತಿಯಿಂದ ಭಿನ್ನವಾಗಿರುವುದನ್ನು ತಿಳಿದುಕೊಂಡಿಲ್ಲವೋ ಮತ್ತು ಈ ಭಿನ್ನತೆಯನ್ನು ಒಪ್ಪಿಕೊಳ್ಳು ವುದಿಲ್ಲವೋ ಅಂತಹ ಜನರು ಖಂಡಿತವಾಗಿಯೂ ಹಿಂದೆ ಎಂದೂ ಯೋಗಿಗಳಾಗಲಿಲ್ಲ, ಈಗಲೂ ಯೋಗಿಗಳಾಗುವುದಿಲ್ಲ, ಮತ್ತು ಇನ್ನು ಮುಂದಕ್ಕೂ ಯೋಗಿಗಳಾಗಲಿಕ್ಕೆ ಸಾಧ್ಯವಿಲ್ಲ. ಇದೊಂದು ಅಕಾವ್ಯ ಸತ್ಯವಾಗಿದೆ. ಆದುದರಿಂದ ಶಂಕರಾಚಾರ್ಯರನ್ನು ಒಬ್ಬ ದೊಡ್ಡ ಯೋಗಿಗಳಾಗಿದ್ದರೆಂದು ನಂಬುವುದು ಅಜ್ಞಾನದ ಲಕ್ಷಣವಾಗಿದೆ.

ಈ ವಿಷಯದಲ್ಲಿ ಯೋಗದರ್ಶನವು ಹೇಳುವ ಮಾತಿದು : "**ವಿಪರ್ಯಯೋ ಮಿಥ್ಯಾಜ್ಞಾನ ಮತದ್ರೂಪ ಪ್ರತಿಷ್ಠಂ**" (ಯೋ. ದ. 1-8) ಜೀವನನ್ನು ಬ್ರಹ್ಮನೆಂದು ಕೊಳ್ಳುವುದು ಅವಿದ್ಯೆಯ ಲಕ್ಷಣವಾಗಿದೆ. ಒಬ್ಬ ಮನುಷ್ಯನಲ್ಲಿ ಇಂತಹ ಅವಿದ್ಯೆಯು ಇರುವ ತನಕ ಅವನು ಯೋಗಿಯಾಗಲಿಕ್ಕೆ ಸಾಧ್ಯವಿಲ್ಲ. ಇಷ್ಟು ಮಾತ್ರವಲ್ಲದೆ, ಶಂಕರಾಚಾರ್ಯರ, ನಾರೀ ನರಕದ ದ್ವಾರ ಮತ್ತು ಪ್ರಾಣಿಗಳನ್ನು ಬಂಧನದಲ್ಲಿ ಕಟ್ಟಿಹಾಕುವ ಸಂಕಲೆ, ಎಂಬ ಮಾತುಗಳು ಬಹಳ ಅನುಚಿತವಾಗಿವೆ. ಮಹರ್ಷಿ ಮನು ನಾರಿಗೆ ಎಷ್ಟು ಮಹತ್ವವನ್ನು ಕೊಟ್ಟಿದ್ದಾರೆ. ನೋಡಿರಿ :

**ಉಪಾಧ್ಯಾಯಾತ್ ದಶಾಚಾರ್ಯ ಆಚಾರ್ಯಾಣಾಂ ಶತಂ ಪಿತಾ ।**
**ಸಹಸ್ರಂ ತು ಪಿತೄನ್ ಮಾತಾ ಗೌರವೇಣಾತಿರಿಚ್ಯತೇ॥** (ಮನುಸ್ಮೃತಿ 2-145)

ಈ ಶ್ಲೋಕದಲ್ಲಿ ಆಚಾರ್ಯರು ಮತ್ತು ತಂದೆ ಇವರಿಗಿಂತ ತಾಯಿಯು ಸಾವಿರಾರು ಪಾಲು ದೊಡ್ಡವಳೆಂದು ಹೇಳಿದ್ದಾರೆ. ಶತಪಥ ಬ್ರಾಹ್ಮಣದಲ್ಲಿಯೂ ತಾಯಿಗೆ ಪ್ರಥಮ ಗುರುವಿನ ಸ್ಥಾನವನ್ನು ಕೊಟ್ಟಿದ್ದಾರೆ : "ಮಾತೃಮಾನ್ ಪಿತೃಮಾನಾಚಾರ್ಯವಾನ್ ಪುರುಷೋ ವೇದ" ಅರ್ಥಾತ್, ಯಾವ ಬಾಲಕನ ತಾಯಿ, ತಂದೆ ಮತ್ತು ಆಚಾರ್ಯರು ಧಾರ್ಮಿಕರೂ, ವಿದ್ವಾಂಸರೂ ಆಗಿರುತ್ತಾರೆಯೋ, ಅವನೇ ದೊಡ್ಡ ವಿದ್ವಾಂಸನಾಗುತ್ತಾನೆ. ಆದುದರಿಂದ ಸ್ತ್ರೀಯು ನರಕದ ದ್ವಾರ ಎಂಬ ಮಾತು ಕೇವಲ ಕಪೋಲಕಲ್ಪಿತವಾಗಿದೆ.

**ಪ್ರಶ್ನೆ :–** ಶ್ರೀ ಸ್ವಾಮಿ ವಿದ್ಯಾನಂದ 'ವಿದೇಹ' ಇವರು ತಮ್ಮ ಪುಸ್ತಕ 'ಪರಮಯೋಗ' ಇದರಲ್ಲಿ, ಪುಟ 9, ಮತ್ತು 10 ಇಲ್ಲಿ "ಪರಮಯೋಗದಲ್ಲಿ ನಾರಿಯ ಗತಿಯು ಸರ್ವಥಾ ಅಸಂಭವವಾಗಿದೆ, ಯಾಕೆಂದರೆ, ಅವಳ ಶರೀರದ ರಚನೆಯೇ ಹಾಗಿದೆ. ಪರಮ ಯೋಗಕ್ಕೆ ಯಾವ ತತ್ವಗಳು ಬೇಕೋ, ಅವೆಲ್ಲಾ ಕೇವಲ ಪುರುಷರ ಶರೀರದಲ್ಲಿ ಮಾತ್ರ ಇವೆ. ಸ್ತ್ರೀಯ ಶರೀರದಲ್ಲಿ ಆ ತತ್ವಗಳು ಇಲ್ಲವೇ ಇಲ್ಲ. ಆ ತತ್ವಗಳು, ಕುಂಡಲಿನೀ, ವೀರ್ಯ, ಓಜಸ್ಸು ಮತ್ತು ಬ್ರಹ್ಮಸೂತ್ರ........" ಎಂದು ಬರೆದಿದ್ದಾರೆ ಇದು ಸರಿಯೆ?

**ಉತ್ತರ :–** ಇದು ಸರಿಯಲ್ಲ ಯಾಕೆಂದರೆ, ಸ್ತ್ರೀಯರ ಶರೀರದಲ್ಲಿ ಕುಂಡಲಿನೀ ಇಲ್ಲ, ಮತ್ತು ಪುರುಷರ ಶರೀರದಲ್ಲಿ ಇದು ಇದೆ, ಎಂಬುದಕ್ಕೆ ಏನೂ ಪ್ರಮಾಣ ಇಲ್ಲ. ವಿದ್ಯೋತ್ತಮಾ ದೇವಿಯು ತನ್ನ ಕುಂಡಲಿನೀ ಜಾಗೃತವಾಗಿದೆ, ಎಂದು ಹೇಳಿರುವುದನ್ನು ನಾನು ಕೇಳಿದ್ದೇನೆ. ಸ್ವಾಮಿ ವಿದ್ಯಾನಂದ'ವಿದೇಹ' ಇವರು ನಾರಿಯ ಶರೀರದಲ್ಲಿ ಕುಂಡಲಿನೀ ಇಲ್ಲವೇ ಇಲ್ಲ ಎಂದು ಹೇಳಿದ್ದಾರೆ. ಬುದ್ಧಿವಂತರು ಇಲ್ಲಿ ಹೇಳಬೇಕು ಯಾರ ಮಾತು ಸತ್ಯ ಮತ್ತು ಯಾರ ಮಾತು ಸುಳ್ಳು, ಎಂಬುದನ್ನು ನನಗಂತೂ ಇಬ್ಬರ ಮಾತೂ ಸುಳ್ಳೆಂದು ಕಾಣುತ್ತದೆ. ನಾನು ಓದಿ ತಿಳಿದುಕೊಂಡಿರುವ ಮಟ್ಟಿಗೆ, ಯೋಗದರ್ಶನ ಮತ್ತು ಇದರ ಮೇಲೆ ವ್ಯಾಸರ ಭಾಷ್ಯೆ, ಇವೆರಡರಲ್ಲಿಯೂ ನನಗೆ ಎಲ್ಲಿಯೂ ಕುಂಡಲಿನೀಯ ವರ್ಣನೆ ಮತ್ತು ಯೋಗದ ಸಿದ್ಧಿಗೆ ಇದರ ಅನಿವಾರ್ಯತೆಯ ಮಾತು ಕಾಣಲಿಲ್ಲ. ಹಠಯೋಗ-ಪ್ರದೀಪಿಕಾದಲ್ಲಿ ಇದರ ವರ್ಣನೆ ಇದೆ. ಮಹರ್ಷಿ ದಯಾನಂದರು, ಈ ಗ್ರಂಥವನ್ನು ಅನಾರ್ಷಗ್ರಂಥವೆಂದು ಹೇಳಿ ಅದರ ಖಂಡನೆ ಮಾಡಿದ್ದಾರೆ.

ಈಗ ಓಜಸ್ಸಿನ ಬಗ್ಗೆ ವಿಚಾರ ಮಾಡೋಣ. ಆಯುರ್ವೇದ ಪ್ರಸಿದ್ಧ ಗ್ರಂಥ, ಚರಕ (ಅ. 30-9) ಸೂತ್ರಸ್ಥಾನದಲ್ಲಿ ಈ ರೀತಿ ಬರೆದಿದ್ದಾರೆ. **"ಯೇನೌಜಸಾ ವರ್ತಯಂತಿ ಪ್ರೀಣಿತಾಃ ಸರ್ವದೇ ಹಿನಃ। ಯದೃತೇ ಸರ್ವಭೂತಾನಾಂ ಜೀವಿತಂ ನಾವತಿಷ್ಠಂತೇ॥"** ಅರ್ಥ: ಓಜಸ್ಸು ಎಂಬ ತತ್ವದಿಂದ ತೃಪ್ತರಾಗಿ ಎಲ್ಲಾ ಜಂತುಗಳು ಜೀವನ ಲಾಭವನ್ನು ಪಡೆಯುತ್ತವೆ. ಇದಿಲ್ಲದೆ, ಯಾವುದೇ ಪ್ರಾಣಿಗಳ ಜೀವನವು ಸ್ಥಿರವಾಗಿ ಇರಲು ಸಾಧ್ಯವಿಲ್ಲ.

ಈ ಶ್ಲೋಕದಿಂದ, ಸ್ತ್ರೀ-ಪುರುಷರು ಮತ್ತು ಎಲ್ಲಾ ಪ್ರಾಣಿಗಳ ಶರೀರದಲ್ಲಿ ಓಜಸ್ಸು ಇರುತ್ತದೆ; ಇದರ ಸಹಾಯದಿಂದಲೇ ಎಲ್ಲಾ ಪ್ರಾಣಿಗಳು ಜೀವಿಸುತ್ತವೆ; ಇದು ಇಲ್ಲದೆ ಹೋದರೆ ಇವೆಲ್ಲಾ ಸಾಯುತ್ತವೆ, ಎಂದು ಸ್ಪಷ್ಟವಾಗುತ್ತದೆ. ಇನ್ನು ಆಯುರ್ವೇದದಲ್ಲಿ ಬರುವ ಕೆಳಗಿನ ವಾಕ್ಯಗಳನ್ನು ಸ್ವಲ್ಪ ಗಮನಿಸಿರಿ:

**"ಅಷ್ಟಮೇ ಮಾಸಿ ಗರ್ಭಶ್ಚ ಮಾಮೃತೋ ಗರ್ಭಶ್ಚ ಮಾತಾ ರಸಹಾರಿಣೀ ಭಿಃ ಸಂವಾಹಿ ನೀಬಿರ್ಯುರ್ಮುಹುರ್ಮುಹುರೋಜಃ ಪರಸ್ಪರತ ಆದದಾತೇ ಗರ್ಭಸ್ಯಾ ಸಂಪೂರ್ಣತ್ವಾತ್। ತಸ್ಮಾತ್ತದಾಗರ್ಭಿಣೀ ಮುಹುರ್ಯುರ್ಮುಹುರ್ಮುದಾಯುಕ್ತಾ ಭವತಿ, ಮುಹುರ್ಮುಹುಶ್ಚಮ್ಲಾನಾ, ತಥಾ ಗರ್ಭಃ। ತಸ್ಮಾತ್ತದಾ ಗರ್ಭಸ್ಯ ಜನ್ಮ ವ್ಯಾಪತ್ತಿ ಮದ್ಭವತ್ಯೋಜಸೋಽನವಸ್ಥಿತ್ವಾತ್ ತಂ ಚೈವಾರ್ಥಮಭಿ ಸಮೀಕ್ಷ್ಯಾಷ್ಟಮಂ ಮಾಸ ಮಾಗಣ್ಯಮಿತ್ಯಾಚಕ್ಷತೇ ಕುಶಲಾಃ ॥"**

(ಚರಕ, ಶರೀರಸ್ಥಾನಂ, .ಮಹತೀ ಗರ್ಭಾವಕ್ರಾಂತಿ, ಅಂ 4/24)

**ಅರ್ಥ :** ಎಂಟನೇ ತಿಂಗಳಿನಲ್ಲಿ ರಸಸಂವಾಹಿನಿಯ ಮೂಲಕ ಓಜಸ್ಸು ತಾಯಿಯಿಂದ ಗರ್ಭದ ಹೃದಯಕ್ಕೆ ಮತ್ತು ಗರ್ಭದಿಂದ ತಾಯಿಯ ಹೃದಯಕ್ಕೆ ಬರುತ್ತಾ ಹೋಗುತ್ತಾ ಇರುತ್ತದೆ. ಯಾಕೆಂದರೆ ಆ ಸಮಯದಲ್ಲಿ ಗರ್ಭವು ಪೂರ್ಣರೂಪದಲ್ಲಿ ಬೆಳೆದಿರುವುದಿಲ್ಲ. ಆದುದರಿಂದ ತಾಯಿಯು (ಗರ್ಭಿಣಿ ಸ್ತ್ರೀಯು) ಎಂಟನೇ ತಿಂಗಳಿನಲ್ಲಿ ಕೆಲವು ಬಾರಿ ಪ್ರಸನ್ನಳಾಗಿಯೂ, ಇನ್ನು ಕೆಲವು ಬಾರಿ ಉದಾಸೀನಳಾಗಿಯೂ ಇರುತ್ತಾಳೆ. ಎಂದರೆ, ಆಕೆಯ ಓಜಸ್ಸು ಗರ್ಭದ ಹೃದಯಕ್ಕೆ ಹೋದಾಗ ಆಕೆಯು ಉದಾಸೀನಳಾಗುತ್ತಾಳೆ, ಮತ್ತು ಅದು ಪುನಃ ಆಕೆಯ ಹೃದಯಕ್ಕೆ ಬಂದಾಗ ಆಕೆಯ ಮುಖದಲ್ಲಿ ಪ್ರಸನ್ನತೆಯು ಕಂಡುಬರುತ್ತದೆ. ಇದೇ ರೀತಿಯಲ್ಲಿ ಗರ್ಭದ ಓಜಸ್ಸು ಇದ್ದಾಗ ಅದರಲ್ಲಿ ಪ್ರಸನ್ನತೆಯು ಕಂಡುಬರುತ್ತದೆ, ಮತ್ತು ಅದರ ಓಜಸ್ಸು ಮಾತೆಯ ಹೃದಯಕ್ಕೆ ಹೋದಾಗ, ಅದರಲ್ಲಿ ಉದಾಸೀನತೆಯು ಕಂಡುಬರುತ್ತದೆ. ಆದುದರಿಂದ ಈ ಸಮಯದಲ್ಲಿ (ಎಂದರೆ ಎಂಟನೇ ತಿಂಗಳಿನಲ್ಲಿ) ಶಿಶುವಿನ ಜನ್ಮವಾದರೆ, ಅದರ ಪ್ರಾಣಕ್ಕೆ ಸಂಕಟಬರುತ್ತದೆ. ಓಜಸ್ಸಿನ ಸ್ಥಿತಿಯು ಆಗ ಅಸ್ಥಿರವಾಗಿರುವುದೇ ಇದಕ್ಕೆ ಕಾರಣವಾಗಿದೆ. ಆದುದರಿಂದ ನಿಪುಣರಾದ ಚಿಕಿತ್ಸಕರು ಗರ್ಭದ ಎಂಟನೆಯ ತಿಂಗಳನ್ನು ಪ್ರಸವಕ್ಕೆ ಅಯೋಗ್ಯವೆಂದು ಹೇಳುತ್ತಾರೆ. (ಟೀಕಾಕಾರರು-ಪಂಡಿತ ಕಾಶೀನಾಥ ಶಾಸ್ತ್ರಿ ಮತ್ತು ಡಾ॥ ಗೋರಖನಾಥ ಚತುರ್ವೇದಿ)

ಆಯುರ್ವೇದದ ಈ ಪ್ರಮಾಣ ವಾಕ್ಯಗಳಿಂದಲೂ ನಾರಿಯ ಶರೀರದಲ್ಲಿ ಓಜಸ್ಸು ಇದೆ ಎಂದು ಸಿದ್ಧವಾಗುತ್ತದೆ. ಮಾತ್ರವಲ್ಲ, ನಾರಿಯ ಶರೀರದಲ್ಲಿ ಓಜಸ್ಸು ಇಲ್ಲವೆಂಬ ಮಾತು ಪ್ರಕರಣ ವಿರುದ್ಧವಾಗಿಯೂ ಇರುವುದರಿಂದ ಗ್ರಹಣ ಯೋಗ್ಯವಾಗಿಲ್ಲ.

ಈ ವಿಚಾರವನ್ನು ನಂಬಿದ ಕಾರಣ ಜನರಿಗೆ ತುಂಬಾ ಹಾನಿಯಾಗಿದೆ. ಯಥಾ– (1) ಸ್ತ್ರೀ ಜಾತಿಯು ತನ್ನ ಮಹತ್ವಪೂರ್ಣವಾದ ಕರ್ತವ್ಯ—ಯೋಗಾಭ್ಯಾಸವನ್ನು ಬಿಟ್ಟು ಬಿಟ್ಟಿದೆ. ಯಾಕೆಂದರೆ ಅವರ ಮನಸ್ಸಿನಲ್ಲಿ ಸ್ತ್ರೀಯರು ಯೋಗಿನಿಯರಾಗಲಿಕ್ಕೆ ಸಾಧ್ಯವಿಲ್ಲ ಎಂಬ ಮಾತನ್ನು ತುಂಬಿಸಿಬಿಡಲಾಗಿದೆ.

(2) ಸ್ತ್ರೀಯರಿಗೆ ಯೋಗ ವಿದ್ಯೆಯು ಗೊತ್ತಿಲ್ಲದಿರುವುದರಿಂದ ಅವರಿಗೆ ತಮ್ಮ ಮಕ್ಕಳಿಗೆ ಯೋಗದ ಪಾಠ ಕಲಿಸಿಕೊಡುವುದು ಅಸಾಧ್ಯವಾಗಿದೆ. ಇದರ ಪರಿಣಾಮವಾಗಿ, ಸ್ತ್ರೀಯರು ತಾವೂ, ತಮ್ಮ ಮಕ್ಕಳೂ, ಯೋಗದ ಆನಂದವನ್ನು ಬಿಟ್ಟು, ವಿಷಯ ವಾಸನೆಗಳಲ್ಲಿ ಮುಳುಗಿ, ದುಃಖವನ್ನು ಅನುಭವಿಸುತ್ತಿದ್ದಾರೆ. ಈ ದೃಶ್ಯವನ್ನು ನಾವು ಈಗ ನೋಡುತ್ತಿದ್ದೇವೆ.

(3) ಸ್ತ್ರೀಯರಿಗೆ ಯೋಗ ವಿದ್ಯೆಯ ಜ್ಞಾನವು ಇಲ್ಲದಿರುವುದರಿಂದ, ಈಗ ತುಂಬಾ ಮಂದಿ ಸ್ವಾರ್ಥಿಗಳು ಮತ್ತು ಮೂರ್ಖರು, ಯೋಗದ ಹೆಸರಿನಲ್ಲಿ ಇವರನ್ನು ಮರುಳು ಮಾಡುತ್ತಾರೆ ಮತ್ತು ಶಿಷ್ಯೆಯರನ್ನಾಗಿ ಮಾಡಿಕೊಂಡು ಅವರ ಧನ-ಸಂಪತ್ತನ್ನು ದೋಚಿಕೊಂಡು, ತಾವು ಆಡಂಬರದಲ್ಲಿ ಇರುತ್ತಾರೆ. ಇಂದಿನ ದಿನದಲ್ಲಿ ನೂರಾರು ಮಂದಿ ತಥಾಕಥಿತ, ಅವತಾರ ಪುರುಷರೆಲ್ಲಾ ಬೆಳೆದುಕೊಂಡು ಬರುವುದಕ್ಕೆ (ಯೋಗ ವಿದ್ಯೆಯ ಜ್ಞಾನ ಶೂನ್ಯರಾದ) ಸ್ತ್ರೀಯರ ಸಹಯೋಗವು ತುಂಬಾ ಇದೆ. ಇನ್ನೊಂದು ಮಾತು. ಈ ಪರಮ ಯೋಗದ ಕಲ್ಪನೆ ಮಾಡಿದವರನ್ನು, ಇದು ಯಾವ ವೇದ ಅಥವಾ ಶಾಸ್ತ್ರದಲ್ಲಿ ಇದೆ, ಎಂದು ಕೇಳಬೇಕು. ಏನು, ಪತಂಜಲಿ ಋಷಿಗಳು ಪರಮಯೋಗವನ್ನು ಮರೆತುಬಿಟ್ಟಿದ್ದರೆ? ಯಾಕೆ ಅವರು ಯೋಗದರ್ಶನದಲ್ಲಿ ಇದರ ಉಲ್ಲೇಖವನ್ನು ಮಾಡಲಿಲ್ಲ? ಇಲ್ಲಿ ನಿಜವಾದ ಮಾತು ಏನೆಂದರೆ, ಕೆಲವರು ಹೊಸ ಹೊಸ ಕಲ್ಪನೆಗಳನ್ನು ಮಾಡಿ, ಪ್ರಾಚೀನ ಋಷಿಗಳು ಈ ಮಾತುಗಳನ್ನು ಹೇಳಲಿಲ್ಲ, ತಾನು ಸಂಶೋಧನೆ ಮಾಡಿ ಈ ವಿಷಯವನ್ನು ಕಂಡು ಹಿಡಿದಿದ್ದೇನೆ, ಎಂದು ಹೇಳಿ, ತಮ್ಮ ಟೊಳ್ಳು ಪ್ರತಿಷ್ಠೆಯನ್ನು ಸ್ಥಾಪಿಸಲು ಪ್ರಯತ್ನಿಸುತ್ತಿದ್ದಾರೆ. ಈ ರೀತಿ ಋಷಿಗಳ ತಪ್ಪನ್ನು ತೋರಿಸಿ, ತಾವು ಅವರಿಗಿಂತಲೂ ದೊಡ್ಡ ಬುದ್ಧಿವಂತರೆಂದು ಸ್ಪಷ್ಟಪಡಿಸಿ, ಸರಳ ಸ್ವಭಾವದ ಜನರನ್ನು ತಮ್ಮ ಕಪಟ

ಜಾಲದಲ್ಲಿ ಸಿಕ್ಕಿಸಿಹಾಕಿ, ಅವರ ಧನ-ಸಂಪತ್ತನ್ನು ಇವರು ದೋಚಿಕೊಳ್ಳುತ್ತಾರೆ. ಆದುದರಿಂದ ಜನರೆಲ್ಲಾ, ಇಂತಹ ಸ್ವಾರ್ಥಪರಾಯಣರ ಆಧಾರರಹಿತವಾದ ಕಲ್ಪನೆಗಳನ್ನು ಸ್ವೀಕರಿಸದೆ, ವೇದಗಳು ಮತ್ತು ವೇದಾನುಕೂಲ ಗ್ರಂಥಗಳಲ್ಲಿ ಪ್ರತಿಪಾದಿತವಾಗಿರುವ ಸಿದ್ಧಾಂತಗಳನ್ನೇ ಆಧಾರವಾಗಿಟ್ಟುಕೊಂಡು, ಯೋಗ ಮಾರ್ಗದಲ್ಲಿ ನಡೆಯಬೇಕು.

ಈ ಲೇಖನದಲ್ಲಿ, ಸ್ತ್ರೀಯರು ಯೋಗಿನಿಯರು ಮತ್ತು ಪರಮಯೋಗಿನಿಯರು ಆಗಲಿಕ್ಕೆ ಸಾಧ್ಯವಿಲ್ಲ ಎಂಬ ಮಾತನ್ನು ಅಸತ್ಯವೆಂದು ಸಿದ್ಧಪಡಿಸಲಾಗಿದೆ.

## 11. ಪರಮಾತ್ಮನ ಸಾಕ್ಷಾತ್ಕಾರ ಮಾಡಿದವರ ಲಕ್ಷಣಗಳು

"ಶ್ರೀ ಆನಂದ ಸ್ವಾಮೀಜೀ ಸರಸ್ವತಿಯ ಜೀವನದ ಕಥೆಗಳು" ಎಂಬ ಪುಸ್ತಕವನ್ನು ಶ್ರೀಆನಂದ ಸ್ವಾಮೀಜಿಯವರ ಪುತ್ರ ಶ್ರೀ ರಣವೀರ, ಇವರು ಬರೆದಿದ್ದಾರೆ. ಶಾಂತಿ ಮತ್ತು ಪ್ರಕಾಶದ ಮಾರ್ಗವನ್ನು ತೋರಿಸುವ, ಶ್ರೀ ಆನಂದ ಸ್ವಾಮೀಜೀಯವರ ಒಂದು ಜೀವನದ ಕಥೆಯನ್ನು ನಾನು ಮೇಲೆ ಹೇಳಿದ ಪುಸ್ತಕದಲ್ಲಿ ಓದಿದ್ದೇನೆ. ಅದನ್ನು ಓದಿದನಂತರ, ಈ ಪುಸ್ತಕದಲ್ಲಿ ಯೋಗದ ವಿಷಯದಲ್ಲಿ ಬರೆದಿರುವ ಅನೇಕ ಮಾತುಗಳು, ವೇದ, ಋಷಿಕೃತಗ್ರಂಥಗಳು ಮತ್ತು ಪ್ರತ್ಯಾಕ್ಷಾದಿ ಪ್ರಮಾಣಗಳಿಗೆ ವಿರುದ್ಧವಾಗಿವೆ, ಎಂಬ ನಿಷ್ಕರ್ಷೆಗೆ ನಾನು ಬಂದಿದ್ದೇನೆ. ........................ ಈ ಪುಸ್ತಕವನ್ನು ಓದಿ ತುಂಬಾ ಮಂದಿ ಜನರ ಮನಸ್ಸಿನಲ್ಲಿ ಭ್ರಾಂತಿಯು ಹುಟ್ಟಿದೆ. ಇನ್ನು ಮುಂದೆಯೂ ಇಂತಹ ಅನರ್ಥ ಆಗಲಿಕ್ಕಿದೆ.

ಇದೀಗ ನಾನು ಹನ್ನೊಂದನೆಯ ಭ್ರಾಂತಿಯ ಕುರಿತಾಗಿ ಬರೆಯುತ್ತಿದ್ದೇನೆ. ಯೋಗದ ಹೆಸರಿನಲ್ಲಿ ತುಂಬಾ ಸುಳ್ಳು ಕಲ್ಪನೆಗಳ ಪ್ರಚಾರವಾಗುತ್ತದೆ, ಅದನ್ನು ಖಂಡನೆಮಾಡಿ, ಜನರಿಗೆ ಯೋಗದ ಯಥಾರ್ಥ ಸ್ವರೂಪವನ್ನು ಹೇಳಿಕೊಡುವುದೇ ಈ ಲೇಖನದ ಮುಖ್ಯ ಉದ್ದೇಶವಾಗಿದೆ.

ಆನಂದ ಸ್ವಾಮೀಜೀಯವರು ಪರಮಾತ್ಮನ ಸಾಕ್ಷಾತ್ಕಾರ ಮಾಡಿರುತ್ತಾರೆ, ಎಂದು ಕೆಲವರು ಹೇಳುತ್ತಾರೆ. ಮಾತ್ರವಲ್ಲ, ಅವರಂತಹ ಯೋಗಿಗಳು ಆರ್ಯಸಮಾಜದಲ್ಲಿ ಬೇರೆ ಯಾರೂ ಇಲ್ಲ, ಎಂದೂ ಕೆಲವರು ಹೇಳುತ್ತಾರೆ ಈ ಲೇಖನದಲ್ಲಿ, ಅವರು ಪರಮಾತ್ಮನ ಸಾಕ್ಷಾತ್ಕಾರ ಮಾಡಿರುವರೋ ಇಲ್ಲವೋ ಎಂಬುವರ ಬಗ್ಗೆ, ನಿಷ್ಪಕ್ಷಪಾತ ಬುದ್ಧಿಯಿಂದ ವಿಚಾರಿಸಲಾಗುವುದು.

ಶ್ರೀ ಆನಂದ ಸ್ವಾಮೀಜೀಗೆ ಪರಮಾತ್ಮ ದರ್ಶನ ಮಾಡಿಸಿದವರು ಬ್ರಹ್ಮಚಾರಿ ವ್ಯಾಸದೇವರು. ಈಗ ಅವರ ಹೆಸರು ಸ್ವಾಮೀ ಯೋಗೇಶ್ವರಾನಂದರೆಂದಾಗಿದೆ. ಒಂದು ದಿನ ಆನಂದಸ್ವಾಮಿಜೀ ಹೇಳುತ್ತಾರೆ : "ನಾನು ಪ್ರಭುವಿನ ಹೆಸರು ಕೇಳಿದ್ದೇನೆ, ಅವನ ಮಹಿಮೆಯನ್ನು ಅರಿತುಕೊಂಡಿದ್ದೇನೆ, ಈಗ ಅವನನ್ನು ನೋಡಲು ಬಯಸುತ್ತೇನೆ" ಇದನ್ನು ಕೇಳಿ ಮುಗುಳ್ನಗೆಯಿಂದ ಬ್ರಹ್ಮಚಾರಿಗಳು ಹೇಳುತ್ತಾರೆ :"ಅವನನ್ನು ನಾನು ತೋರಿಸುತ್ತೇನೆ, ಇವತ್ತು ರಾತ್ರಿ ನಾವಿಬ್ಬರೂ ಕುಳಿತುಕೊಳ್ಳೋಣ. ಇವತ್ತಿನ ರಾತ್ರಿಯೇ ನೀನು ನಿನ್ನ ಪ್ರಭುವನ್ನು ಸಾಕ್ಷಾತ್ಕಾರವಾಗಿ ನೋಡುವೆ."

ಇದರ ನಂತರ ಏನಾಯಿತು............. ಆದರೆ ಆ ರಾತ್ರಿ, ಪೂಜ್ಯ ಸ್ವಾಮೀಜೀ ನನಗೆ ಹೇಳಿದರು — ಯಾರ ದರ್ಶನಮಾಡಬೇಕೆಂಬ ಪಿಪಾಸೆಯು ಜನ್ಮಜನ್ಮಾಂತರದಿಂದ ನನ್ನ ಆತ್ಮದಲ್ಲಿ ಇತ್ತೋ, ಅವನ ಸಾಕ್ಷಾತ್ಕಾರ ದರ್ಶನ ನಾನು ಮಾಡಿದೆ, ಸಮೀಕ್ಷೆ: ಈ ವಾಕ್ಯಗಳಿಂದ, ಆನಂದ ಸ್ವಾಮೀಜೀ ತನಗೆ, (ಪುಟ306) ಪರಮಾತ್ಮನ ಸಾಕ್ಷಾತ್ಕಾರ ದರ್ಶನ ಆಗಿದೆ, ಎಂದು ಅಂಗೀಕರಿಸುತ್ತಾರೆ. ಮತ್ತು ಈ ರೀತಿ ಅವರಿಗೆ ಪರಮಾತ್ಮನ ಸಾಕ್ಷಾತ್ಕಾರ ಮಾಡಿಸಿದವರು ಸ್ವಾಮೀ ಯೋಗೇಶ್ವರಾನಂದರು, ಎಂದು ಗೊತ್ತಾಗುತ್ತದೆ.

ಆನಂದ ಸ್ವಾಮೀಜೀಯವರು ಪರಮಾತ್ಮನ ಸಾಕ್ಷಾತ್ಕಾರ ಮಾಡಿದ್ದಾರೆ ಎಂಬ ಮಾತು ನಿರಾಧಾರವಾಗಿದೆ. ಯಾಕೆಂದರೆ, ಯಾರನ್ನು ಇವರು ತಮಗೆ ಪರಮಾತ್ಮನ ಸಾಕ್ಷಾತ್ಕಾರ ಮಾಡಿಸಿದ ಗುರುಗಳೆಂದು ಹೇಳುತ್ತಾರೆಯೋ, ಆ ಸ್ವಾಮಿ ಯೋಗೇಶ್ವರಾನಂದರು ತಾವೇ ಯೋಗದ ವಿಷಯದಲ್ಲಿ ತುಂಬಾ ಭ್ರಮೆಯಲ್ಲಿ ಇದ್ದಾರೆ. ಯಾರು ತಾವು ಅಜ್ಞಾನಾಂಧಕಾರದಲ್ಲಿ ಮುಳುಗಿರುವರೋ ಮತ್ತು ಪರಮಾತ್ಮ, ಜೀವಾತ್ಮ ತಥಾಪ್ರಕೃತಿಯ ವಿಷಯದಲ್ಲಿ ಅಯತಾರ್ಥ ತಿಳುವಳಿಕೆಯನ್ನು ಇಟ್ಟುಕೊಂಡಿರುವರೋ ಅವರಿಂದ ಇನ್ನೊಬ್ಬರಿಗೆ ಪರಮಾತ್ಮನ ಸಾಕ್ಷಾತ್ಕಾರ ಮಾಡಿಸಲಿಕ್ಕೆ ಎಂದಿಗೂ ಸಾಧ್ಯವಿಲ್ಲ. ಸಜ್ಜನರ ಸೂಚನೆಗಾಗಿ ನಾನು ಇಲ್ಲೀಗ ಸ್ವಾಮಿ ಯೋಗೇಶ್ವರಾನಂದರ, ಪರಮಾತ್ಮ ಜೀವಾತ್ಮ ಮೊದಲಾದ ವಿಷಯಗಳ ಬಗ್ಗೆ ಅಯತಾರ್ಥ ತಿಳುವಳಿಕೆಯನ್ನು ಮುಂದಿಡುತ್ತಿದ್ದೇನೆ.

ಕೆಲವು ಸಮಯದ ಹಿಂದೆ, ನಾನು ಸ್ವಾಮಿ ಯೋಗೇಶ್ವರಾನಂದರನ್ನು ವೈದಿಕ, ಸಾಧನಾಶ್ರಮ, ಆರ್ಯನಗರ, ರೋಹತಕ್(ಹರಿಯಾಣ)ದಲ್ಲಿ ಭೆಟ್ಟಿಯಾಗಿದ್ದೆ. ಆ ಸಂದರ್ಭದಲ್ಲಿ, ಪ್ರಶ್ನೋತ್ತರಗಳು ಮತ್ತು ಅವರ ಉಪದೇಶಗಳ ಮೂಲಕ ನಾನು

ಅವರ ಕೆಲವು ಸಿದ್ಧಾಂತಗಳನ್ನು ತಿಳಿದು ಕೊಂಡಿದ್ದೆನು. ಸಂಕ್ಷೇಪದಲ್ಲಿ ಹೇಳುವುದಾದರೆ, ಅವು ಹೀಗಿವೆ.

1. ಪರಮಾತ್ಮ ಮತ್ತು ಪ್ರಕೃತಿ, ಇವೆರಡು ತತ್ವಗಳು ಮಾತ್ರ ಅನಾದಿಯಾಗಿದೆ. ಜೀವಾತ್ಮರ ಅಸ್ತಿತ್ವವು ಇಲ್ಲ.
2. ವೇದವು ಪರಮಾತ್ಮನ ಜ್ಞಾನವು ಅಲ್ಲ. ಋಷಿಗಳ ಹೃದಯಲ್ಲಿ ಅದರ ಉತ್ಪತ್ತಿಯಾಗಿದೆ.
3. ಪರಮಾತ್ಮನಲ್ಲಿ ಯಾವ ಗುಣವೂ ಇಲ್ಲ. ಸ್ವಾಮಿ ದಯಾನಂದರು ಪರಮಾತ್ಮನನ್ನು ಸಗುಣ ಮತ್ತು ನಿರ್ಗುಣ ಎಂದು ಹೇಳಿದ್ದಾರೆ. ಇದು ಸತ್ಯವಲ್ಲ.
4. ಪರಮಾತ್ಮನು ಸೃಷ್ಟಿಕರ್ತನಲ್ಲ. ಈಗ ಬುದ್ಧಿವಂತರು ಇಲ್ಲಿ ವಿಚಾರ ಮಾಡಬೇಕು; ಯಾರು ವೇದ ಮತ್ತು ಋಷಿಕೃತ ಗ್ರಂಥಗಳನ್ನು ವಿಪರೀತವಾಗಿ ಅರ್ಥ ಮಾಡಿಕೊಂಡಿವರೊ; ಅವರು ಪರಮಾತ್ಮನ ಸಾಕ್ಷಾತ್ಕಾರ ಮಾಡಿಕೊಳ್ಳಲು ಮತ್ತು ಇತರರಿಗೆ ಪರಮಾತ್ಮನ ದರ್ಶನ ಮಾಡಿಸಲು ಹೇಗೆ ಸಮರ್ಥರಾಗಿರಬೇಕು? ಆದುದರಿಂದ ಇವರ, ಈಶ್ವರ ಸಾಕ್ಷಾತ್ಕಾರದ ಮಾತುಗಳು ಪೂರ್ಣ ಭ್ರಾಂತಿಯುಕ್ತವಾಗಿವೆ.

ಮಹರ್ಷಿ ದಯಾನಂದರು ಕೂಡ ಯೋಗಿಗಳಾಗಿದ್ದರು. ಅವರು ಪರಮಾತ್ಮನಿಂದ ಜೀವಾತ್ಮರನ್ನು ಭಿನ್ನವೆಂಬುದನ್ನು ಅಂಗೀಕರಿಸಿದ್ದಾರೆ. ಪತಂಜಲಿಯು ಋಷಿಗಳಾಗಿದ್ದರು. ಅವರು ಜೀವಾತ್ಮನ ಪ್ರತ್ಯೇಕ ಅಸ್ತಿತ್ವವನ್ನು ಅಂಗೀಕರಿಸಿದ್ದಾರೆ. ಆದರೆ, ಆನಂದ ಸ್ವಾಮೀಜೀಗೆ ಪರಮಾತ್ಮನ ಸಾಕ್ಷಾತ್ಕಾರ ಮಾಡಿಸಿದ ಸ್ವಾಮಿ ಯೋಗೇಶ್ವರಾನಂದರು ಜೀವಾತ್ಮರ ಅಸ್ತಿತ್ವವನ್ನು ಅಂಗೀಕರಿಸುವುದಿಲ್ಲ. ಈ ಸ್ಥಿತಿಯಲ್ಲಿ ಅವರು ಯೋಗಾಚಾರ್ಯರಾಗಿಬಿಟ್ಟಿದ್ದಾರೆ. ಇದು ನಿಜವಾಗಿಯೂ ಒಂದು ದೊಡ್ಡ ಆಶ್ಚರ್ಯದ ಮಾತಾಗಿದೆ.

ಪತಂಜಲಿ ಮುನಿಗಳ ವಿಚಾರಕ್ಕನುಸಾರವಾದಿ, ಯಾವ ಮನುಷ್ಯನು ಪರಮಾತ್ಮ ಜೀವಾತ್ಮ ಮತ್ತು ಪ್ರಕೃತಿಯ ವಿಷಯದಲ್ಲಿ ವಿಪರೀತ ಜ್ಞಾನವನ್ನು ಇಟ್ಟುಕೊಂಡಿರುತ್ತಾನೆಯೋ ಅವನು ಎಂದಿಗೂ ಯೋಗಿಯಾಗಿ ಪರಮಾತ್ಮನ ಸಾಕ್ಷಾತ್ಕಾರವನ್ನು ತಾನಾಗಿ ಮಾಡಿಕೊಳ್ಳಲು ಅಥವಾ ಇತರರಿಗೆ ಮಾಡಿಸಿಕೊಡಲು

ಸಾಧ್ಯವೇ ಇಲ್ಲ. ವಿಪರೀತ ಜ್ಞಾನದ ಲಕ್ಷಣ ಹೀಗಿದೆ: **"ವಿಪರ್ಯಯೋ ಮಿಥ್ಯಾಜ್ಞಾನ ಮತದ್ರೂಪ ಪ್ರತಿಷ್ಠಂ"** (ಯೋ. ದ. 1-8) ವಿಪರೀತ ಜ್ಞಾನಕ್ಕೆ ವಿಪರ್ಯಯವೆಂದು ಹೇಳುತ್ತಾರೆ. ದೃಷ್ಟಾಂತಕ್ಕಾಗಿ, ಮನುಷ್ಯನು ಅಜ್ಞಾನದಲ್ಲಿ (ಕತ್ತಲೆಯಲ್ಲಿ) ಹಗ್ಗವನ್ನು ಸರ್ಪವೆಂದೂ, ಸರ್ಪವನ್ನು ಹಗ್ಗವೆಂದೂ, ತಿಳಿದುಕೊಳ್ಳುತ್ತಾನೆ. ಎಂದಿನ ತನಕ ಒಬ್ಬ ವ್ಯಕ್ತಿಯಲ್ಲಿ ಈ ರೀತಿಯ ವಿಪರೀತ ಜ್ಞಾನವು ಇರುತ್ತದೆಯೋ ಅಂದಿನ ತನಕ ಅವನಿಗೆ ಪರಮಾತ್ಮನ ಸಾಕ್ಷಾತ್ಕಾರ ಆಗಲು ಸಾಧ್ಯವಿಲ್ಲ, ಇತರರಿಗೂ ಪರಮಾತ್ಮನ ಸಾಕ್ಷಾತ್ಕಾರವನ್ನು ಮಾಡಿಸಲು ಅವನಿಂದ ಸಾಧ್ಯವಿಲ್ಲ. ಸ್ವಾಮಿ ಯೋಗೇಶ್ವರಾನಂದರು ಜೀವಾತ್ಮರ ಅಸ್ತಿತ್ವವನ್ನು ಅಂಗೀಕರಿಸುವುದಿಲ್ಲ, ಮತ್ತು ಪರಮಾತ್ಮನನ್ನು ಇವರು ಗುಣರಹಿತನೆಂದು ಹೇಳುತ್ತಾರೆ. ಇದು ಇವರ ಮಿಥ್ಯಾಜ್ಞಾನವಾಗಿದೆ. ಈ ರೀತಿಯ ಮಿಥ್ಯಾಜ್ಞಾನವನ್ನಿಟ್ಟುಕೊಂಡ ವ್ಯಕ್ತಿ ಪರಮಾತ್ಮನ ಸಾಕ್ಷಾತ್ಕಾರವನ್ನು ಹೇಗೆ ಮಾಡಬಲ್ಲರು? ಯಾರು ತಾನಾಗಿ ಮಾರ್ಗವನ್ನು ಸರಿಯಾಗಿ ತಿಳಿದುಕೊಂಡಿಲ್ಲವೋ, ಅವರು ಬೇರೆಯವರಿಗೆ ಎಂದಿಗೂ ಸರಿಯಾದ ಮಾರ್ಗವನ್ನು ತೋರಿಸಲು ಸಮರ್ಥರಾಗಿರುವುದಿಲ್ಲ. ಸತ್ಯಸಂಗತಿ ಏನೆಂದರೆ, ಇದು ಸರಳ ಹೃದಯದ ಜನರನ್ನು ವಂಚಿಸಿ, ಅವರನ್ನು ತನ್ನ ಶಿಷ್ಯ ಮತ್ತು ಶಿಷ್ಯೆಯರನ್ನಾಗಿ ಮಾಡಿ ಮೋಜು, ಮಾಡಿಕೊಂಡು ಬಾಳುವ ಉಪಾಯವಾಗಿದೆ.

ಋಷಿ ದಯಾನಂದರನ್ನು ಯೋಗಿಗಳಾಗಿದ್ದರೆಂದು ಅಂಗೀಕರಿಸುವ ಜನರಲ್ಲಿಯೇ ಕೆಲವರು ಸ್ವಾಮಿ ಯೋಗೇಶ್ವರಾನಂದರನ್ನು ಕೂಡ ದೇವರ ಸಾಕ್ಷಾತ್ಕಾರ ಮಾಡಿದ ಪೂರ್ಣಯೋಗಿಯೆಂದು ಹೇಳುತ್ತಾರೆ.(ಇದು ಬೇಸರದ ಸಂಗತಿ)

ಋಷಿ ದಯಾನಂದರು ದೇವರ ಸಾಕ್ಷಾತ್ಕಾರ ಮಾಡಿರುವುದು ಹೌದಾದರೆ ಸ್ವಾಮಿ ಯೋಗೇಶ್ವರಾನಂದರು ದೇವರ ಸಾಕ್ಷಾತ್ಕಾರ ಮಾಡಿರುವುದು ನಿಜವಲ್ಲ. ಸ್ವಾಮಿ ಯೋಗೇಶ್ವರಾನಂದರು ದೇವರ ಸಾಕ್ಷಾತ್ಕಾರ ಮಾಡಿರುವುದು ಹೌದಾದರೆ, ಋಷಿ ದಯಾನಂದರು ದೇವರ ಸಾಕ್ಷಾತ್ಕಾರ ಮಾಡಿರುವ ಮಾತು ಸತ್ಯವಲ್ಲ. ಯಾಕೆಂದರೆ, ಯೋಗದ ವಿಷಯದಲ್ಲಿ ಇವರಿಬ್ಬರ ಸಿದ್ಧಾಂತಗಳು ಪರಸ್ಪರ ವಿರುದ್ಧವಾಗಿದೆ. ಸ್ವಾಮಿ ಯೋಗೇಶ್ವರಾನಂದರನ್ನು ನಿಜವಾದ ಯೋಗಿಯೆಂದು ಹೇಳಿ, ಅವರ ಶಿಷ್ಯರಾಗಿ ತನು, ಮನ, ಧನದಿಂದ ಅವರ ಪ್ರಚಾರ ಮಾಡುವವರು, ನಿಜವಾಗಿ ವೈದಿಕ ಧರ್ಮದ ಕತ್ತನ್ನು ದಬ್ಬಿ ಹಿಡಿಯುವವರು ಎಂದು ತಿಳಿದುಕೊಳ್ಳಬೇಕು. ಸ್ವಾಮಿ ಯೋಗೇಶ್ವರಾನಂದರು ಅಜ್ಞಾನದಲ್ಲಿದ್ದಾರೆ. ಅವರಲ್ಲಿ ಬೇರೆಯವರಿಗೆ

ಪರಮಾತ್ಮನ ಸಾಕ್ಷಾತ್ಕಾರ ಮಾಡಿಸುವ ಸಾಮರ್ಥ್ಯವು ಇಲ್ಲ. ಆನಂದ ಸ್ವಾಮೀಜೀಯವರ ಈಶ್ವರ ಸಾಕ್ಷಾತ್ಕಾರದ ಕಥೆಯೂ ಸ್ವಾಮಿ ಯೋಗೇಶ್ವರಾನಂದರ ಕೃತಿಯಾಗಿದೆ ಮತ್ತು ಅದು ಸುಳ್ಳು ಎಂದು ಸಿದ್ಧವಾಗುತ್ತದೆ.

ಸಮಾಧಿಯ ಸ್ಥಿತಿಯಲ್ಲಿ ಕಾಲಿನ ಒಂದು ಬದಿಯಿಂದ ಇನ್ನೊಂದು ಬದಿಗೆ ಕಬ್ಬಿಣದ ಮೊಳೆಯನ್ನು ತುರುಕಿಸಿ ತೆಗೆದರೂ ಗೊತ್ತಾಗುವುದಿಲ್ಲ? ಆ ಪುಸ್ತಕವನ್ನು ಓದಿರಿ, ಅಲ್ಲಿ ಬರೆದಿದೆ : "ಬೇಗನೆ ಎಬ್ಬಿಸಲಿಲ್ಲ ತಾವು ಈ ರೀತಿ 24 ಘಂಟೆಗಳಿಂದ ಕುಳಿತಿರುವಿರಿ. ಇವತ್ತು ಎರಡನೆಯ ದಿನ ತಮ್ಮ ಎಡಗಾಲನ್ನು ನೋಡಿರಿ ಕಳೆದ 24 ಘಂಟೆಗಳಲ್ಲಿ ತಮ್ಮ ಕಾಲಿಗೆ ಆರು ಇಂಚು ಉದ್ದದ ಮೊಳೆಯನ್ನು ತುರುಕಿಸಲಾಗಿದೆ, ಅದೂ ತಮಗೆ ಗೊತ್ತಿಲ್ಲವಲ್ಲ? (ಪುಟ 216).

**ಸಮೀಕ್ಷೆ :** ಕಾಲಿಗೆ ಆರು ಇಂಚು ಉದ್ದದ ಮೊಳೆಯನ್ನು ಹೊಡೆಯಲಾಗಿದೆ, ಇದರಿಂದ ತುಂಬಾರಕ್ತವೂ ಹೊರಗೆ ಬಂದಿದೆ. ಆದರೆ, ಆನಂದ ಸ್ವಾಮೀಜಿಯವರಿಗೆ ಇಷ್ಟುದೊಡ್ಡ ಸಮಾಧಿಯಾಗಿತ್ತು ಎಂದರೆ, ಅವರಿಗೆ ಇದು ಗೊತ್ತೇ ಆಗಲಿಲ್ಲ! (ಇದು ನಿಜವಲ್ಲ, ಯಾಕೆಂದರೆ) ಸಮಾಧಿಯ ಸ್ಥಿತಿಯಲ್ಲಿ ಮನುಷ್ಯನಿಗೆ ಪ್ರಜ್ಞೆಯು ಇದ್ದೇ ಇರುತ್ತದೆ. ಆದುದರಿಂದ, ಆರು ಇಂಚು ಉದ್ದದ ಮೊಳೆಯನ್ನು ಅವನ ಕಾಲಿಗೆ ಹೊಡೆದು ತುರುಕಿಸಿದರೆ, ಅದು ಅವನಿಗೆ ಗೊತ್ತೇ ಆಗುವುದಿಲ್ಲ, ಎಂಬ ಮಾತು ನಂಬತಕ್ಕದ್ದಲ್ಲ. ಹೆಣಗಳಿಗಾದರೆ ಹೀಗಾಗ ಬಹುದು, ಮೂರ್ಛೆ ತಪ್ಪಿ ಬಿದ್ದವನಿಗೂ ಹೀಗಾಗಿಬಹುದು. ಆದರೆ, ಸಮಾಧಿಯಲ್ಲಿ ಇದು ಅಸಂಭವವಾಗಿದೆ. ಆನಂದ ಸ್ವಾಮೀಜೀಯವರ ಈ ಮಾತುಗಳು ಮುಗ್ಧ ಜನರನ್ನು ಭ್ರಾಂತಿಯಜಾಲದಲ್ಲಿ ಸಿಕ್ಕಿಸಿಹಾಕುವಂತವುಗಳು.

ಮಹರ್ಷಿ ದಯಾನಂದರು, ಸತ್ಯಾರ್ಥಪ್ರಕಾಶದ, ಏಳನೇ ಸಮುಲ್ಲಾಸದಲ್ಲಿ ಈ ರೀತಿ ಬರೆದಿದ್ದಾರೆ: "ಪರಮಾತ್ಮ ಉಪಾಸಕರು ಬಹು ದೊಡ್ಡ ದುಃಖವನ್ನೂ ಸಹಿಸಿಕೊಳ್ಳುತ್ತಾರೆ, ಭಯ ಭೀತರಾಗುವುದಿಲ್ಲ" ದಯಾನಂದರು, ಇವರ ಕಾಲು ಅಥವಾ ಶರೀರದ ಇನ್ನು ಯಾವುದೇ ಅಂಗವನ್ನಾದರೂ ಕತ್ತರಿಸಿದರೆ, ಇವರಿಗೆ ದುಃಖದ ಅನುಭವವು ಆಗುವುದಿಲ್ಲ, ಎಂದು ಬರೆಯಲಿಲ್ಲ. ಇಂತಹ ಯೋಗಿಗಳು ಮತ್ತು ಇವರ ಶಿಷ್ಯರು, ಅಸತ್ಯವನ್ನು ಮುಚ್ಚಿಡುವುದರಲ್ಲಿ ಅತ್ಯಂತ ಚತುರರಾಗಿದ್ದಾರೆ. ಆದುದರಿಂದ, ಯಾರಾದರೂ ಕೇಳುವ ಮೊದಲೇ, ಪುಸ್ತಕದಲ್ಲಿ ಬರೆದು ಬಿಟ್ಟಿದಾರೆ: "ಆ ಆರು ಇಂಚು ಉದ್ದದ ಮೊಳೆಯನ್ನು ಕಾಲಿಗೆ ತುರುಕಿದಾಗ, ಆಗಿರುವ ಗಾಯದ ಚಿಹ್ನೆಯಿಂದ ಆಗಲೇ ಮಾಯವಾಗಿ ಹೋಗಿತ್ತು."

## ಬಾಯಿ ಮಾತಿನಿಂದ ಹೇಳಿದ ತತ್ಕಕ್ಷಣವೇ ಮಳೆ ಬರುವುದು ನಿಂತು ಹೋಯಿತು!

"ಒಂದು ದಿನ ನಾನು ಪೂಜ್ಯಸ್ವಾಮೀಜೀಯವರ ಬಳಿಗೆ ಹೋಗಿ ಹೇಳಿದೆ—ತಾವು ಈ ಮೋಡಗಳನ್ನು ಯಾಕೆ ನಿಲ್ಲಿಸಬಾರದು? ತುಸು ನಗು ನಗುತ್ತಾ ಅವರು 'ಯಾಕೆ'? — ಎಂದು ಕೇಳಿದರು. ನಾನು ಇದಕ್ಕೆ ಕಾರಣ ಹೇಳುತ್ತಾ ತಾವು ಮದುವೆಯ ಏಳು ದಿನ ಮೊದಲು, ಮತ್ತು ಎರಡು ದಿನ ನಂತರ, ಮಳೆಯು ಬಾರದಂತೆ ಮಾಡಿರಿ, ಎಂದು ನಿವೇದನೆ ಮಾಡಿಕೊಂಡೆ. ಅವರು ಪುನಃ ನಗುನಗುತ್ತಾ ಹೇಳಿದರು — ಒಳ್ಳೇದು ಹೋಗು, ಮಳೆ ಬರುವುದಿಲ್ಲ. ನಿಜವಾಗಿಯೂ ಹಾಗೆಯೇ ಆಯಿತು. ಆ ಒಂಬತ್ತು ದಿನಗಳಲ್ಲಿ ಮಳೆ ಬರಲೇ ಇಲ್ಲ". (ಪುಟ 236)

**ಸಮೀಕ್ಷೆ :** ಇಲ್ಲಿ ನನ್ನ ಪ್ರಶ್ನೆಗಳು ಏನೆಂದರೆ (ಆನಂದಸ್ವಾಮಿಜೀಯವರು) ಬಾಯಿಂದ ಹೇಳಿದ ಮಾತ್ರಕ್ಕೆ, ಮೋಡಗಳು ಮಳೆ ಸುರಿಯುವುದನ್ನು ನಿಲ್ಲಿಸಬೇಕಾದರೆ, ಇವರ ಮಾತುಗಳು ಭಾಕಡಾ ಅಣೆಕಟ್ಟಿನ ಕೆಲಸ ಮಾಡುತ್ತಿವೆಯೇ? ಒಂಬ್ಬತ್ತು ದಿನ ಮಳೆ ಬರುವುದು ಹೇಗೆ ನಿಂತುಹೋಯಿತು? ಮೋಡಗಳು ಜಡವಸ್ತುಗಳಾಗಿರುವಾಗ ಅವುಗಳು ಇವರ ಆದೇಶವನ್ನು ಹೇಗೆ ಗ್ರಹಣ ಮಾಡಿಕೊಂಡವು? ಅಥವಾ ಇವರ ಇಚ್ಛೆಯಂತೆ ಮಳೆಬರಬೇಕಾದರೆ, ಅಥವಾ ಮಳೆ ಬರುವುದು ನಿಲ್ಲಬೇಕಾದರೆ, ಪರಮಾತ್ಮನು ಇವರ ಆಜ್ಞಾಕಾರಿಯಾಗಿ ಬಿಟ್ಟಿದ್ದಾನೆಯೆ? ಯಾವ ವರ್ಷದ ಘಟನೆಯನ್ನು ಇವರು ಪುಸ್ತಕದಲ್ಲಿ ಬರೆದಿರುವರೋ, ಆ ವರ್ಷ ಮಳೆಗಾಲದಲ್ಲಿ ಭಾರತದಲ್ಲಿ ಅನೇಕ ರಾಜ್ಯಗಳಲ್ಲಿ ಭಯಂಕರ ಮಳೆ(ಅತಿವೃಷ್ಟಿ) ಬಂದಿತ್ತು. ಸಾವಿರಾರು ಜನರು ತಮ್ಮ ಮನೆ, ಧನ, ಸಂಪತ್ತು ಇತ್ಯಾದಿಗಳನ್ನು ಕಳೆದುಕೊಂಡಿದ್ದರು. ನೂರಾರು ಜನರು ತಮ್ಮ ಜೀವನವನ್ನು ಕಳೆದುಕೊಂಡಿದ್ದರು ಮತ್ತು ನೂರಾರು ಪಶುಗಳು ಸತ್ತಿದ್ದವು. ಆದರೆ ಆನಂದ ಸ್ವಾಮೀಜೀಯವರು ಮೋಡಗಳಿಗೆ "ಮೋಡಗಳೇ ಮಳೆಸುರಿಯುವುದನ್ನು ನಿಲ್ಲಿಸಿ ಬಿಡಿರಿ" ಎಂದು ಆದೇಶ ಕೊಡಲಿಲ್ಲ. ಇವರು ತನ್ನ ಮಗನ ಮಾತು ಕೇಳಿ, ವಿವಾಹ ಸಮಾರಂಭಕ್ಕೆ ತೊಂದರೆಯಾಗುತ್ತದೆ ಎಂದುಕೊಂಡು, ಮಳೆಬರುವುದನ್ನು ನಿಲ್ಲಿಸಿದ್ದಾರೆ. ಆದರೆ, ಬೇರೆ ಕಡೆಗಳಲ್ಲಿ, ನೂರಾರು ಮಂದಿ ಸಾಯುತ್ತಿರುವಾಗ, ಇವರು ಮಳೆ ಬರುವುದನ್ನು ನಿಲ್ಲಿಸಲಿಲ್ಲ. ಏನು ಆನಂದಸ್ವಾಮೀಜೀಯವರು ಇಷ್ಟು ದೊಡ್ಡ ಪಕ್ಷಪಾತಿಗಳೆ? ಪರಮಾತ್ಮನ ಸಾಕ್ಷಾತ್ಕಾರ ತನಗಾಗಿದೆ ಎಂದು ಹೇಳಿಕೊಂಡು ಬರುವವರು ಲೀಲೆಯನ್ನು ಇಲ್ಲಿ ನೋಡಿರಿ, ಮೋಡಗಳಿಗೆ ಆದೇಶ ಕೊಟ್ಟರೆ, ಅಥವಾ ಮನಸ್ಸಿನಲ್ಲಿ ಮಳೆ

ಬರುವುದನ್ನು ನಿಲ್ಲಿಸುವ ಮಂತ್ರದ ಜಪವನ್ನು ಮಾಡಿದರೆ, ಮಳೆ ಬರುವುದು ನಿಂತು ಹೋಗುತ್ತದೆ, ಎಂಬುದಕ್ಕೆ ಏನಾದರೂ ಪ್ರಮಾಣ ಇದೆಯೆ? ಮಹರ್ಷಿ ದಯಾನಂದರು ಕೂಡ ಯೋಗಿಗಳಾಗಿದ್ದರು. ಆದರೆ ಅವರು, ಪರಮಾತ್ಮನು ಕೂಡ, ಹೇಳಿದ ಮಾತ್ರಕ್ಕೆ ಸೃಷ್ಟಿಯ ಉತ್ಪತ್ತಿ ಆಗಲಿಕ್ಕೆ ಸಾಧ್ಯವಿಲ್ಲ, ಇನ್ನು ಮನುಷ್ಯರ ಮಾತನ್ನು ಏನು ಹೇಳಲಿ, ಎಂದು ಹೇಳಿದ್ದಾರೆ. ಆದುದರಿಂದ ಆನಂದ ಸ್ವಾಮೀಜೀಯವರು ಬಾಯಿಮಾತಿನಿಂದ ಹೇಳಿದ ಮಾತ್ರಕ್ಕೆ ಮಳೆ ಬರುವುದು ನಿಂತುಹೋಯಿತು ಎಂಬ ಮಾತು ಕೇವಲ ಬುರುಡೆ ಮಾತ್ರ ಎಂದು ಹೇಳಬಹುದು. ಒಂದು ವೇಳೆ ಆನಂದ ಸ್ವಾಮೀಜೀಯವರ ಮಾತು ಸತ್ಯವೆಂದಾದರೆ, ಮುಸಲ್ಮಾನರು ಹೇಳುವಂತೆ, ಅವರ ದೇವರು (ಖುದಾ) 'ಕುನ್' ಎಂದು ಹೇಳಿದರು. ಅಷ್ಟರಲ್ಲಿಯೇ ಸೃಷ್ಟಿಯ ಉತ್ಪತ್ತಿಯಾಯಿತು. ಮಹಮದ್ ಸಾಹೇಬರು ತನ್ನ ಬೆರಳಿನಿಂದ ಚಂದ್ರನನ್ನು ಒಡೆದು ಹಾಕಿದರು ಎಂಬಂತಹ ಮಾತುಗಳೂ ನಿಜವಾಗಿರಬೇಕಲ್ಲವೇ?

**ಜಲದೊಸರು ಹಾಗೂ ಗಂಗೆ ಮೊದಲಾದ ನದಿಗಳು ಹರಿಯುವಲ್ಲಿ ಸ್ನಾನ ಮಾಡುತ್ತಾ ಮುಳುಗಿಹೋದರೆ ಮುಕ್ತಿ ಸಿಗುತ್ತದೆ!**

ಮೇಲೆ ಹೇಳಿದ ಪುಸ್ತಕದಲ್ಲಿ ಬರೆದಿದೆ :"ಇದು ಒಂದು ಪುಣ್ಯ ತೀರ್ಥವಾಗಿದೆ. ಇದರಲ್ಲಿ ಸತ್ತರೆ ಮುಕ್ತಿಯು ಸಿಗುತ್ತದೆ.

ಆದುದರಿಂದ, ತೀರ್ಥಗಳಲ್ಲಿ ಅಥವಾ ತೀರ್ಥಯಾತ್ರೆಗಳಲ್ಲಿ ಜನರು ತಮ್ಮ ಪ್ರಾಣಗಳನ್ನು ಕಳೆದು ಕೊಳ್ಳುತ್ತಾರಾದರೆ, ಇದಕ್ಕಿಂತ ಒಳ್ಳೆಯ ಮಾತು ಬೇರೇನಿದೆ? ಈ ರೀತಿ ಸತ್ತರೆ ಮುಕ್ತಿಯು ಸಿಗುತ್ತದೆ". (ಪುಟ 251)

**ಸಮೀಕ್ಷೆ** : ಜಲದೊಸರು, ಕೆರೆ ಮತ್ತು ಗಂಗೆ ಮೊದಲಾದ ನದಿಗಳಲ್ಲಿ ಸ್ನಾನ ಮಾಡಿದರೆ ಮತ್ತು ಅಲ್ಲಿ ಮುಳುಗಿ ಸತ್ತರೆ, ನಿಜವಾಗಿಯೂ ಮುಕ್ತಿಯು ದೊರೆಯುವುದಾದರೆ, ಮುಕ್ತಿಯನ್ನು ಬಯಸುವವರೆಲ್ಲಾ ಇಂತಹ ಕಡೆಗಳಲ್ಲಿ ನೀರಿನಲ್ಲಿ ಮುಳುಗಿ ಯಾಕೆ ಸಾಯಬಾರದು? ಯಮ — ನಿಯಮಾದಿಗಳನ್ನು ಪಾಲನೆ ಮಾಡುವ ಆವಶ್ಯಕತೆ ಏನಿದೆ? ಇಂತಹ ಮಾತುಗಳನ್ನು ಸತ್ಯವೆಂದು ನಂಬುವವರು ಆದಷ್ಟು ಬೇಗನೇ, ತಾವೂ, ಮತ್ತು ತಮ್ಮ ಬಂಧು—ಬಳಗದವರನ್ನೆಲ್ಲಾ ತಮ್ಮೊಟ್ಟಿಗೆ ಕರೆದುಕೊಂಡು ಹೋಗಿ ಮುಳುಗಿ ಸಾಯಬೇಕು. ಯಾಕೆಂದರೆ, ಇವರಿಗೆಲ್ಲಾ ಮುಕ್ತಿ ಸಿಗುವುದರಲ್ಲಿ ವಿಳಂಬವಾಗಬಾರದು.

ಬಂಧುಗಳೇ ! ನೀವೇ ಸ್ವಲ್ಪ ಯೋಚಿಸಿರಿ. ಒಂದು ವೇಳೆ ಇಂತಹ ಸ್ಥಾನಗಳಲ್ಲಿ ಸತ್ತರೆ, ಮುಕ್ತಿಯು ಸಿಗುವುದಾದರೆ, ಅಲ್ಲಿ ಅಸಂಖ್ಯ ಮೀನುಗಳನ್ನು ಕೊಲ್ಲಲಾಗುತ್ತದೆ, ಇವುಗಳಿಗೆಲ್ಲಾ ಮುಕ್ತಿಯು ಸಿಗುತ್ತದೆಯೆ? ಮಹರ್ಷಿ ದಯಾನಂದರು ಒಬ್ಬ ಶ್ರೇಷ್ಠ ಯೋಗಿಗಳಾಗಿದ್ದರು. ಅವರು ಈ ರೀತಿ ನದಿ ಮೊದಲಾದ ಜಲಾಶಯಗಳಲ್ಲಿ ಸತ್ತರೆ, ಮುಕ್ತಿಯು ಸಿಗುತ್ತದೆ, ಎಂಬ ಮಾತನ್ನು ಅಂಗೀಕರಿಸಲಿಲ್ಲ. ಆದರೆ, ಆನಂದ ಸ್ವಾಮೀಜಿಯವರು ಇಂತಹ ನಿರಾಧಾರವಾದ ಮಾತುಗಳನ್ನು ಬರೆದಿದ್ದಾರೆ, ಹೇಳಿದ್ದಾರೆ ಮತ್ತು ತಮ್ಮ ಹೆಸರಿನಲ್ಲಿ ಇಂತಹ ಮಾತುಗಳನ್ನು ಬರೆಯಲಿಕ್ಕೆ ಒಪ್ಪಿಗೆಕೊಟ್ಟಿದ್ದಾರೆ. ಇದಕ್ಕೆ ಅವರ ಲೋಕೇಷಣವೇ ಕಾರಣವಾಗಿದೆ.

## ಹಸ್ತರೇಖೆನೋಡಿ ಮೃತ್ಯು- ಕಾಲವನ್ನು ಹೇಳುವುದು

ಒಂದು ದಿನ ಆನಂದ ಸ್ವಾಮೀಜೀಯವರು ಒಬ್ಬ ಬಾಲಕನ ಮೃತ್ಯುವಿನ ಸಮಾಚಾರ ಕೇಳಿ ಹೀಗೆಂದು ಹೇಳುತ್ತಾರೆ : "ಹಾಗಾದರೆ ಪಾಪ ! ಆ ಹುಡುಗನು ತೀರಿಹೋದನಲ್ಲವೆ?" ನಾನು (ಪುಸ್ತಕದ ಲೇಖಕ ರಣವೀರರು) "ಹೌದು" ಎಂದೆ. ಪುನಃ ಸ್ವಾಮೀಜೀ ಹೇಳಿದರು : ಆ ಹುಡುಗನ ಹಸ್ತರೇಖೆಯು ಹೀಗೆಂದೇ (ಚಿಕ್ಕ ವಯಸ್ಸಿನಲ್ಲಿಯೇ ಸಾಯುತ್ತಾನೆ ಎಂದು) ಹೇಳುತ್ತಿತ್ತು. ಆದುದರಿಂದ ನಾನು ಅವನಿಗೆ ಏನೂ ಹೇಳಲಾರದೆ ಹೋದೆ". (ಪುಟ 111)

**ಸಮೀಕ್ಷೆ :–** ನಾನು ಸ್ವಾಮೀಜೀಯವರನ್ನು "ಯಾವ ವೇದದಲ್ಲಿ ಅಥವಾ ಋಷಿಕೃತ ಗ್ರಂಥಗಳಲ್ಲಿಹಸ್ತರೇಖೆಯು ಮನುಷ್ಯನ ಆಯುಷ್ಯವನ್ನು ಹೇಳುತ್ತದೆ, ಎಂದು ಬರೆದಿದೆ?" ಎಂದು ಹೇಳಲು ಬಯಸುತ್ತೇನೆ. ಇಂತಹ ಮಾತುಗಳು ಯಾವ ಪುಸ್ತಕಗಳಲ್ಲಿ ಇವೆಯೋ, ಅಲ್ಲಿ ಪರಸ್ಪರ ವಿರುದ್ಧವಾದ ಮಾತುಗಳು ಕಂಡು ಬರುತ್ತವೆ. ಆದುದರಿಂದ ಆ ಮಾತುಗಳನ್ನು ಪ್ರಮಾಣಗಳೆಂದು ಅಂಗೀಕರಿಸಲಿಕ್ಕೆ ಸಾಧ್ಯವಿಲ್ಲ. 1974ನೇ ಇಸವಿಯಲ್ಲಿ ಡಿಸೆಂಬರ 29ನೇ ತಾರೀಕಿನ ಹಿಂದುಸ್ತಾನ್ ಟಾಯಿಮ್ಸ್, ಈ ಇಂಗ್ಲಿಷ್ ಭಾಷೆಯ ದೈನಿಕ ಸಮಾಚಾರ ಪತ್ರದಲ್ಲಿ ಒಂದು ಸುದ್ದಿಯು ಬಂದಿತ್ತು. ಅದಕ್ಕನುಸಾರವಾಗಿ ಅಮೆರಿಕಾದಲ್ಲಿ ಇಬ್ಬರು ಡಾಕ್ಟರುಗಳು, 51 ಮಂದಿ ಜನರ ಶವಗಳ ಹಸ್ತರೇಖೆಗಳನ್ನು ಅಧ್ಯಯನ ಮಾಡಿದರು. ಆ ಶವಗಳ ಆಯುಷ್ಯ ರೇಖೆಗಳನ್ನು ನೋಡಿದಾಗ ಹುಟ್ಟಿನಿಂದ ಸಾವಿನವರೆಗೆ, ಆ ರೇಖೆಗಳು ಹೇಳಿದ ಯಾವ ಮಾತುಗಳೂ ಸರಿಯಾಗಿರಲಿಲ್ಲ.

ಈಗ ಸದ್ಯಕ್ಕೆ ಆನಂದ ಸ್ವಾಮೀಜೀಯವರ ಮಾತುಗಳನ್ನು ನಾವು ನಿಜವಾಗಿರಬಹುದೆಂದುಕೊಳ್ಳೋಣ. ಆದರೆ, ಇಲ್ಲಿ ಇವರು ತಮಗೆ ಆ ಹುಡುಗನು ಮನೆಯ ಮಾಡಿನಿಂದ ಜಾರಿಬಿದ್ದು ಸಾಯುವನು ಎಂಬ ವಿಷಯ ಗೊತ್ತಿದ್ದರೂ ಕೂಡ, ಅವನನ್ನು ಬದುಕಿಸಲಿಕ್ಕೆ ಯಾಕೆ ಪ್ರಯತ್ನ ಮಾಡಲಿಲ್ಲ, ಎಂಬ ಪ್ರಶ್ನೆಯು ಹುಟ್ಟುತ್ತದೆ. ಯೋಗಿಗಳು ಪ್ರಾಯಃ ಬಹಳ ದಯಾಶೀಲರಾಗಿರುತ್ತಾರೆ. ಸಾಮಾನ್ಯ ಜನರೂ ಕೂಡ, ತಮಗೆ ಒಬ್ಬ ಹುಡುಗ ಮನೆಯ ಮಾಡಿನಿಂದ ಜಾರಿಬಿದ್ದು ಸಾಯುತ್ತಾನೆ, ಎಂದು ಗೊತ್ತಾದರೆ, ಅಥವಾ ಯಾರಾದರೂ, ನೀರಿನಲ್ಲಿ ಮುಳುಗಿ ಸಾಯುತ್ತಾರೆ, ಎಂದು ಗೊತ್ತಾದರೆ ಅವರನ್ನು ಬದುಕಿಸಲಿಕ್ಕೆ ತಮ್ಮ ಕಡೆಯಿಂದ ಎಲ್ಲಾ ಪ್ರಯತ್ನ ಮಾಡುತ್ತಾರೆ. ಆನಂದ ಸ್ವಾಮೀಜೀ ಯವರಿಗೆ ಆ ಬುದ್ಧಿಯು ಬರಲಿಲ್ಲ. ಆದರೆ, ಆ ಬಾಲಕನು ಸತ್ತುಹೋದನಂತರ, ತನ್ನನ್ನು ಒಬ್ಬ ದೊಡ್ಡ ಯೋಗಿ ಎಂದು ಸಿದ್ಧಪಡಿಸುವುದಕ್ಕೋಸ್ಕರ, ಆ ಹುಡುಗನ ಹಸ್ತರೇಖೆಯು ಹಾಗೆಯೇ ಹೇಳುತ್ತಿತ್ತು, ತಾನು ಬೇಕೆಂದೇ ಈ ಮಾತನ್ನು ಯಾರಿಗೂ ಹೇಳಲಿಲ್ಲ, ಎಂದು ಬುರುಡೆ ಹೊಡೆಯುತ್ತಾರೆ.

ಒಂದು ವೇಳೆ, ಆನಂದ ಸ್ವಾಮೀಜೀಯವರ ವಿಚಾರದಲ್ಲಿ ಪರಮಾತ್ಮನು, ಮನುಷ್ಯರು ಸಾಯುವ ಸಮಯವನ್ನು ಮೊದಲೇ ನಿಶ್ಚಿತ ಮಾಡಿಡುತ್ತಾನೆ ಎಂದಾಗಿದ್ದರೆ, ಆಕಾಶದಲ್ಲಿ ಮೋಡಗಳನ್ನೂ ಪರಮಾತ್ಮನೇ ನಿರ್ಮಿಸಿದ್ದಾನೆ, ಆದರೆ ಸ್ವಾಮೀಜೀಯವರಿಗೆ ಅವುಗಳು ಮಳೆ ಸುರಿಯುವುದನ್ನು ತಡೆಯಲು ಸಾಧ್ಯವಿದೆ, ಎಂದಾಗ, ಆ ಬಾಲಕನ ಮೃತ್ಯುವನ್ನು ತಡೆಯಲೂ ಅವರಿಗೆ ಸಾಧ್ಯವಿದ್ದಿರಲೇಬೇಕು. ಆದರೆ, ಇದು ಅವರಿಗೆ ಸಾಧ್ಯವಿರಲಿಲ್ಲ. ಆದುದರಿಂದ ಮೃತ್ಯುವನ್ನು ತಡೆಯುವ ಸಾಮರ್ಥ್ಯವು ಅವರಲ್ಲಿ ಹೇಗೆ ಇಲ್ಲವೋ ಅದೇ ರೀತಿ ಮೋಡಗಳು ಮಳೆ ಸುರಿಯದಂತೆ ಮಾಡುವ ಸಾಮರ್ಥ್ಯವೂ ಅವರಲ್ಲಿ ಇಲ್ಲ, ಎಂದು ನಾನು ಹೇಳಬಲ್ಲೆನು. ಇನ್ನು "ಮೃತ್ಯು ಬರುವ ಸಮಯವು ಮೊದಲೇ ನಿಶ್ಚಿತವಾಗಿರುತ್ತದೆಯೋ, ಅಥವಾ ಅದು ಅನಿಶ್ಚಿತವಾಗಿರುತ್ತದೆಯೋ" ಎಂಬುದನ್ನು ತಿಳಿದುಕೊಳ್ಳಬೇಕೆಂದು ಬಯಸುವವರು "ಕಾಲಾಕಾಲ ಮೃತ್ಯು ಮೀಮಾಂಸಾ" ಎಂಬ ಪುಸ್ತಕವನ್ನು ಓದಬಹುದು. ಇದರಲ್ಲಿ ಉಕ್ತ ವಿಷಯದಲ್ಲಿ ಶಾಸ್ತ್ರಾರ್ಥ ಇದೆ. ಇದು 2 ಎಫ್, ಕಮಲಾನಗರ, ದಿಲ್ಲಿ-110 007 ಈ ವಿಳಾಸದಲ್ಲಿ ಸಿಗುತ್ತದೆ. ಮೃತ್ಯುವಿನ ಸಮಯವು ನಿರ್ಧಾರಿತವಾಗಿರುತ್ತದೆ ಎಂದು ಹೇಳುವುದಕ್ಕೆ ಯಾವ ಪ್ರಮಾಣವೂ ಇಲ್ಲ. ಆದುದರಿಂದ ಈ ಮಾತು ಸತ್ಯವಲ್ಲ, ಇದನ್ನು ಉಕ್ತ ಪುಸ್ತಕದಲ್ಲಿ ಪ್ರಮಾಣ ಮತ್ತು ಯುಕ್ತಿಗಳಿಂದ ಸಿದ್ಧಮಾಡಿ ತೋರಿಸಲಾಗಿದೆ.

ಮಹರ್ಷಿದಯಾನಂದರು ಒಂದು ದನವು ತನ್ನ ಜೀವನ ಕಾಲದಲ್ಲಿ 4,75,600 ಜನರಿಗೆ ಉಪಕಾರ ಮಾಡುತ್ತದೆ ಮತ್ತು ಅದನ್ನು ಕೊಂದು ತಿನ್ನುವುದರಿಂದ ಒಂದು ಬಾರಿ ಕೇವಲ ಸುಮಾರು 80 ಮಂದಿಯ ಉದರ ಪೂರ್ತಿಯಾಗುತ್ತದೆ ಎಂದು ಹೇಳಿದ್ದಾರೆ. ಮೃತ್ಯುವಿನ ಕಾಲವು ಪೂರ್ವನಿರ್ಧಾರಿತ ವಾಗಿರುವುದು ನಿಜವಾಗಿದ್ದರೆ, ಲಕ್ಷಗಟ್ಟಲೆ ಜನರಿಗೆ ಉಪಕಾರವಾಗುವ ಮಾತಿನ ಕಲ್ಪನೆಯನ್ನು ಮಾಡುವುದಕ್ಕೂ ಸಾಧ್ಯವಿಲ್ಲ.

ಆನಂದ ಸ್ವಾಮೀಜೀ ಈಗ ಜೀವಿಸಿಕೊಂಡಿದ್ದಾರೆ. ಅವರು ಈಗ ಕೆಲವು ಮಂದಿಯ ಹಸ್ತರೇಖೆಗಳನ್ನು ನೋಡಿ, ಅವರ ಆಯುಷ್ಯವನ್ನೂ ಮತ್ತು ಯಾರು ಯಾವಾಗ ಸಾಯುತ್ತಾರೆ ಎಂಬುದನ್ನು ಹೇಳುವ ಕೃಪೆಮಾಡಬೇಕು. ಸ್ವಾಮೀಜೀ ಯವರು ಹೇಳಿದಂತೆ ಅವರೆಲ್ಲಾ ಆಯಾಯ ಸಮಯದಲ್ಲಿ ಸತ್ತರೆ ಸ್ವಾಮೀಜೀಯವರ ಮಾತುಗಳು ಸತ್ಯವೆಂದು ಸಿದ್ಧವಾಗುತ್ತದೆ. ಸ್ವಾಮೀಜೀಯವರು ಇನ್ನೂ ಒಂದು ಕೃಪೆ ಮಾಡಬೇಕು. ತಾವು ಸ್ವಯಂ ಎಷ್ಟು ವರ್ಷ ಎಷ್ಟು ತಿಂಗಳು ಮತ್ತು ಎಷ್ಟು ದಿನ ಬದುಕುವರು ಎಂದು ಹೇಳಬೇಕು. ಆದರೆ ನನಗೆ ಆನಂದ ಸ್ವಾಮೀಜಿಯವರು ಈ ಮಾತನ್ನು ಹೇಳುವರು ಎಂಬ ಆಶೆ ಇಲ್ಲವೇ ಇಲ್ಲ. ಇಂತಹ ಮಾತುಗಳನ್ನೆಲ್ಲಾ ಆನಂದಸ್ವಾಮೀಜೀಯವರು ತಮ್ಮ ಲೇಖನಗಳು ಮತ್ತು ಉಪದೇಶಗಳಲ್ಲಿ ತಮ್ಮನ್ನು ಒಬ್ಬ ಪರಮಾತ್ಮನ ಸಾಕ್ಷಾತ್ಕಾರ ಮಾಡಿದವರೆಂದು ಹೇಳಿಸಿಕೊಳ್ಳುವುದಕ್ಕೋಸ್ಕರ ಹೇಳಿದ್ದಾರೆ. ಅಷ್ಟೇ, ಇದರಲ್ಲಿ ಸತ್ಯ ಏನೂ ಇಲ್ಲ.

**ಪ್ರಪಂಚದಲ್ಲಿ ಏನೆಲ್ಲಾ ಆಗುತ್ತದೋ ಅದೆಲ್ಲಾ ಸರಿಯಾಗಿಯೇ ಆಗುತ್ತದೆ.** ಆನಂದ ಸ್ವಾಮೀಜೀಯವರ ಇನ್ನೊಂದು ಸಿದ್ಧಾಂತವು ಏನೆಂದರೆ, ಪರಮಾತ್ಮನ ಈ ಸೃಷ್ಟಿಯಲ್ಲಿ ಏನೆಲ್ಲಾ ಆಗುತ್ತದೆಯೋ, ಅದೆಲ್ಲಾ ಪ್ರತಿಯೊಬ್ಬ ವ್ಯಕ್ತಿಯ ಹಿತಕ್ಕಾಗಿಯೇ ಆಗುತ್ತದೆ, ಅಹಿತಕ್ಕಾಗಿ ಅಲ್ಲ(ಪುಟ - 224)

**ಸಮೀಕ್ಷೆ :–** ಯಾರ ಮನೆಯಲ್ಲಾದರೂ ದರೋಡೆಯಾಗುತ್ತದೆ ಎಂದು ಕೊಳ್ಳಿರಿ. ಏನು, ಇದು ಆ ಮನೆಯವರ ಹಿತಕ್ಕಾಗಿ ಆಯಿತೆಂದು ನಾವು ತಿಳಿದುಕೊಳ್ಳಬೇಕೆ? ಮಹರ್ಷಿ ದಯಾನಂದರು, ಸ್ವಾಮೀ ಶ್ರದ್ಧಾನಂದರು, ಪಂ. ಲೇಖರಾಮಜೀ, ಮೊದಲಾದವರ ಹತ್ಯೆಯಾಗಿದೆ. ಏನಿದು, ಎಲ್ಲರ ಒಳಿತಿಗಾಗಿ ಆಯಿತೇ? ಈ ಎಲ್ಲಾ ಗೋವುಗಳು, ಆಡು, ಕುರಿ, ಕೋಳಿ, ಇತ್ಯಾದಿಗಳು ಲಕ್ಷಗಟ್ಟಳೆಯಲ್ಲಿ ಮಾಂಸಾಹಾರಿಗಳ ನಾಲಿಗೆಯ ರುಚಿಯನ್ನು ತೃಪ್ತಿಗೊಳಿಸುವುದ ಕ್ಕಾಗಿ ಪ್ರಾಣಗಳನ್ನು ಕಳೆದುಕೊಳ್ಳುತ್ತಿವೆ. ಏನು, ಇದೂ ಕೂಡ ಎಲ್ಲರ ಹಿತಕ್ಕಾಗಿಯೇ? ನನ್ನ ವಿಶ್ವಾಸದ ಪ್ರಕಾರ ಆನಂದ ಸ್ವಾಮೀಜೀಯವರಿಂದ ಈ ಪ್ರಶ್ನೆಗಳಿಗೆ ಉತ್ತರ

ಕೊಡಲಿಕ್ಕೆ ಸಾಧ್ಯವಿಲ್ಲ. ಇವರಲ್ಲಿ ನನ್ನ ನಮ್ರ ನಿವೇದನೆ ಏನೆಂದರೆ, ಲೋಕದಲ್ಲಿ ತಾನೊಬ್ಬ ಯೋಗಿ ಎನಿಸಿಕೊಳ್ಳುವುದಕ್ಕೆ ಇಂತಹ ಮಿಥ್ಯಾವಿಚಾರಗಳ ಪ್ರಚಾರಮಾಡುವುದು ಸರಿಯಲ್ಲ.

**ಆನಂದಸ್ವಾಮೀಜೀ ಭಾರತದಲ್ಲಿಯೇ ಇದ್ದುಕೊಂಡು, ವಿದೇಶಯಾತ್ರೆಯಲ್ಲಿದ್ದ ರಣವೀರರನ್ನು ಸರಿಯಾಗಿ ನೋಡಿಕೊಂಡು ಬಂದರು !**

ಆನಂದ ಸ್ವಾಮೀಜೀಯವರ ಕಡೆಯಿಂದ ಹೊಡೆಯಲಾಗುವ ಇನ್ನೊಂದು ಬುರುಡೆಯನ್ನು ನೋಡಿರಿ. ಸ್ವಾಮೀಜೀ ಹೇಳುತ್ತಾರೆ : "ನಾನು ಧ್ಯಾನದಲ್ಲಿ ಕುಳಿತಿದ್ದೆ. ಅದೇ ಸ್ಥಿತಿಯಲ್ಲಿ ನಾನು ನೀನು ಚೆನ್ನಾಗಿರುವುದನ್ನು ನೋಡಿ, ಹಿಂತಿರುಗಿ ಬಂದೆ". (ಪುಟ 231-232)

**ಸಮೀಕ್ಷೆ :–** ಇಲ್ಲಿ ಭಾರತದ ಭೂಮಿಯಲ್ಲಿ ಆನಂದ ಸ್ವಾಮೀಜೀ ಧ್ಯಾನ ಮಗ್ನರಾಗಿ ಕುಳಿತುಕೊಂಡಿದ್ದಾರೆ. ಅಲ್ಲಿ ರಣವೀರರು ವಿದೇಶಯಾತ್ರೆಯಲ್ಲಿದ್ದಾರೆ. ಸ್ವಾಮಿಜೀ ಇದ್ದಕ್ಕಿದ್ದ ಹಾಗೆ ರಣವೀರರನ್ನು ನೋಡಿಕೊಂಡು ಹಿಂತಿರುಗಿ ಬರುತ್ತಾರೆ! ಎಷ್ಟು ಸೋಜಿಗದ ಮಾತು ! ಇಲ್ಲಿ ನಾವು ಆನಂದ ಸ್ವಾಮೀಜೀಯವರನ್ನು ಕೇಳಬೇಕು ; ತಮ್ಮ ಶರೀರವು ಭಾರತದಲ್ಲಿಯೇ ಇತ್ತು, ಆದರೆ ತಾವು ಇಲ್ಲಿಂದ ನಡೆದುಕೊಂಡು ಹೋಗಿ ವಿದೇಶದಲ್ಲಿದ್ದ ರಣವೀರರನ್ನು ನೋಡಿಕೊಂಡು ತಿರುಗಿ ಬಂದುಬಿಟ್ಟಿರಿ, ಇದರ ಗುಟ್ಟು ಏನು? ಯಾವ ಉಪಾಯದಿಂದ ತಾವು ವಿದೇಶಕ್ಕೆ ಹೋಗಿ ಬಂದಿರಿ? ಒಂದು ವೇಳೆ ತಾವು ತಮ್ಮ ಸೂಕ್ಷ್ಮ ಶರೀರದಲ್ಲಿ ನಡೆದುಕೊಂಡು ಹೋಗಿ ಬಂದಿರಿ ಎಂದು ಹೇಳುವಿರಾದರೆ, ಸೂಕ್ಷ್ಮಶರೀರವು ಸ್ಥೂಲ ಶರೀರವನ್ನು ಬಿಟ್ಟುಹೋದ ಮೇಲೆ, ಸ್ಥೂಲ ಶರೀರವು ಕೊಳೆತು ಹೋಗಬೇಕಿತ್ತು. ಸ್ಥೂಲ ಶರೀರವನ್ನು ಇಲ್ಲಿಯೇ ಬಿಟ್ಟು ತಾವು ತಮ್ಮ ಸೂಕ್ಷ್ಮ ಶರೀರದ ಮೂಲಕ ತಮ್ಮ ಪುತ್ರನನ್ನು ಹೇಗೆ ಕಂಡಿರಿ? ತಾವು ಈ ಉಪಾಯವನ್ನು ನಮಗೆ ಸ್ವಲ್ಪ ಹೇಳಬಲ್ಲಿರಾ? ಮತ್ತು ಸ್ವಲ್ಪ ಇದರ ಪ್ರಯೋಗವನ್ನು ಮಾಡಿ ನಮಗೆ ತೋರಿಸಬಲ್ಲಿರಾ? ಇದು ನಿಮ್ಮಿಂದ ಸಾಧ್ಯವಾಗದಿದ್ದರು, ಇದೆಲ್ಲಾ ನಿಮ್ಮ ಆಡಂಬರ ಎಂದು ನಾವು ತಿಳಿದುಕೊಳ್ಳುತ್ತೇವೆ, ಮಾತ್ರವಲ್ಲ ಇಂತಹ ಆಡಂಬರಗಳಿಂದ, ಆರ್ಯ ಸಮಾಜಕ್ಕೆ ತುಂಬಾ ಹಾನಿಯಾಗುತ್ತದೆ, ಎಂದೂ ನಾವು ಹೇಳಬಯಸುತ್ತೇವೆ.

**ರಣವೀರರು ವಿದೇಶದಲ್ಲಿದ್ದಾರೆ ಮತ್ತು ಸ್ವಾಮೀಜೀ ಭಾರತದಲ್ಲಿದ್ದಾರೆ. ಆದರೆ ರಣವೀರರಿಗೆ ಸ್ವಾಮೀಜಿಯುವರ ಸ್ವರವು ಕೇಳಿಸುತ್ತದೆ :**

"ಒಂದು ಸಣ್ಣ ಹರಿಯುವ ಹೊಳೆಯಲ್ಲಿ ಬಿದ್ದು ಸಾಯುವುದನ್ನು

ತಡೆಯುವುದಕ್ಕಾಗಿ.......(ಸ್ವಾಮೀಜೀ ಭಾರತದಲ್ಲಿಯೇ ಇದ್ದು, ವಿದೇಶದಲ್ಲಿರುವ ರಣವೀರರಿಗೆ ಹೇಳುತ್ತಾರೆ) "ರಣವೀರ್! ನಿಲ್ಲು ನಿಲ್ಲು ಮುಂದಕ್ಕೆ ಹೋಗಬೇಡ". (ಪುಟ - 234)

**ಸಮೀಕ್ಷಾ :–** ಇದು (ಕುರಾನಿನ) ಖುದಾ ಮತ್ತು ಫರಿಶ್ತೆ (ದೇವರು ಮತ್ತು ದೇವತೆಗಳು) ಇವರ ಕಥೆಯಂತೆ ತೋರುತ್ತದೆ. ನಾನು, ಪುನಃ ಸ್ವಾಮೀಜೀಯವರನ್ನು ಕೇಳಲು ಬಯಸುತ್ತೇನೆ : ಸ್ವಾಮೀಜೀ ತಮ್ಮ ಶರೀರ, ತಮ್ಮ ಮುಖ, ಭಾರತದಲ್ಲಿ, ರಣವೀರರು ವಿದೇಶದಲ್ಲಿ ಮತ್ತು ಅವರು ಒಂದು ಹೊಳೆಯಲ್ಲಿ ಬಿದ್ದು ಸಾಯುವುದನ್ನು ತಡೆಯುವುದಕ್ಕೋಸ್ಕರ, ತಾವು ಕೂಗುತ್ತಿದ್ದೀರಿ, ಇದು ರಣವೀರರಿಗೆ ಕೇಳಿಸುತ್ತದೆ ! ಇಂತಹ ಯಾವ ಉಪಾಯ (ಅಥವಾ ಉಪಕರಣವು) ತಮ್ಮಲ್ಲಿದೆ? ಒಂದು ಬಾರಿ ಇದರ - ಪ್ರಯೋಗ ಮಾಡಿ ತೋರಿಸುವ ಕೃಪೆಮಾಡಬಲ್ಲಿರಾ? ತಾವು ದಯಮಾಡಿ ಇಲ್ಲಿಂದಲೇ, ವಿದೇಶದಲ್ಲಿರುವ ಯಾರಾದರೊಬ್ಬ ಭಾರತೀಯ ನಿಗೆ, ಆತ ಏನು ಮಾಡಬೇಕು, ಏನು ಮಾಡಬಾರದು, ಎಂಬ ಸಂದೇಶವನ್ನು ಸ್ವಲ್ಪ ನಮ್ಮ ಮುಂದೆ ಕಳುಹಿಸಿ ತೋರಿಸಿರಿ. ಹೀಗೆ ತಾವು ಮಾಡಿ ತೋರಿಸಿದರೆ, ತಮ್ಮ ಮಾತನ್ನು ಸತ್ಯವೆಂದು ಅಂಗೀಕರಿಸುವೆನು, ಅನ್ಯಥಾ ಇವೆಲ್ಲಾ ಬರೀ ಬುರುಡೆಗಳು.

ಈ ಲೇಖನದಲ್ಲಿ, ಆನಂದ ಸ್ವಾಮೀಜೀಯವರ ಜೀವನ ಚರಿತ್ರೆಯನ್ನು ಹೇಳುವ ಪುಸ್ತಕದಲ್ಲಿ ಬಂದಿರುವ ಕೆಲವು ಮಿಥ್ಯಾವಾದಗಳ ಮೇಲೆ ವಿಚಾರ ಮಾಡಲಾಗಿದೆ. ಆ ಪುಸ್ತಕದಲ್ಲಿ ಇಂತಹ ಭ್ರಾಂತಿಜನಕ ಮಾತುಗಳು ಇವೆ. ಆದರೆ, ಸ್ಥಾಲೀ ಪುಲಾಕ ನ್ಯಾಯಕ್ಕನುಸಾರವಾಗಿ, ಕೆಲವನ್ನು ಮಾತ್ರ ಇಲ್ಲಿ ಆರಿಸಿಕೊಂಡು ಸತ್ಯದ ಪ್ರಚಾರಕ್ಕಾಗಿ ಅವುಗಳ ಮೇಲೆ ಬೆಳಕು ಬೀರಲಾಗಿದೆ. ಈ ಚರ್ಚೆಯಿಂದ, ಆನಂದ ಸ್ವಾಮೀಜೀಯವರಿಗೆ ಪರಮಾತ್ಮನ ದರ್ಶನ ಮಾಡಿಸಿದ ಗುರುಗಳು, ಸ್ವಾಮೀ ಯೋಗೇಶ್ವರಾನಂದರ ವಿಚಾರಗಳು, ಪರಮಾತ್ಮನ ದರ್ಶನ ಮಾಡಿದವರ ವಿಚಾರಗಳಿಂದ ಭಿನ್ನ ಮಾತ್ರವಲ್ಲ, ಅವುಗಳಿಗೆ ವಿರುದ್ಧವಾಗಿಯೂ ಇವೆ. ಆದುದರಿಂದ, ಇವರಲ್ಲಿ ನಿಜವಾಗಿಯೂ ಪರಮಾತ್ಮನ ದರ್ಶನ ಮಾಡುವ ಅಥವಾ ಅನ್ಯರಿಗೆ ಪರಮಾತ್ಮನ ದರ್ಶನ ಮಾಡಿಸುವ ಯೋಗ್ಯತೆಯು ಇಲ್ಲ, ಎಂದು ನಾನು ಹೇಳಬಲ್ಲೆ.

ಈ ರೀತಿ ಆನಂದ ಸ್ವಾಮೀಜೀಯವರ ಗುರುಗಳು ತಾವೇ ದೊಡ್ಡ ಅಜ್ಞಾನದಲ್ಲಿರುವಾಗ, ಅವರು ತನಗೆ ಪರಮಾತ್ಮನ ದರ್ಶನ ಮಾಡಿಸಿದರು ಎಂಬ ಇವರ ಮಾತು ನಿಜವಾಗಿರಲಿಕ್ಕೆ ಸಾಧ್ಯವಿಲ್ಲ. ಇಷ್ಟು ಮಾತ್ರವಲ್ಲ, ಪರಮಾತ್ಮನ ಸಾಕ್ಷಾತ್ಕಾರ ಮಾಡಿದ ವ್ಯಕ್ತಿಗಳು ಇಂತಹ ಸುಳ್ಳು ಮಾತುಗಳನ್ನು ಹೇಳಲೂ

ಸಾಧ್ಯವಿಲ್ಲ, ಬರೆಯಲೂ ಸಾಧ್ಯವಿಲ್ಲ. ಆದುದರಿಂದ, ಆನಂದ ಸ್ವಾಮೀಜೀಯವರಿಗೆ ಪರಮಾತ್ಮನ ಸಾಕ್ಷಾತ್ಕಾರವಾಗಿತ್ತು ಎಂಬ ಮಾತಿನ ಪ್ರಚಾರದಲ್ಲಿ ಏನೂ ಸತ್ಯಾಂಶ ಇಲ್ಲ.

[ಈ ಲೇಖನವನ್ನು ಬರೆದಾಗ ಆನಂದ ಸ್ವಾಮೀಜೀಯವರು ಜೀವಿತರಾಗಿದ್ದರು. ಆದುದರಿಂದ ಇದರಲ್ಲಿ ವರ್ತಮಾನ ಕಾಲದ ಪ್ರಯೋಗ ಮಾಡಲಾಗಿದೆ.]

## 12. ಯೋಗದ ಹೆಸರಿನಲ್ಲಿ ಪ್ರಚಾರದಲ್ಲಿರುವ ಸಿದ್ಧಿಗಳೆಲ್ಲಾ ನಿಜವೆ? ಈ ಸಿದ್ಧಿಗಳೆಲ್ಲಾ ಮೋಕ್ಷ ಪ್ರಾಪ್ತಿಗೆ ಬೇಕಾಗಿವೆಯೆ?

ಯೋಗ-ಜಿಜ್ಞಾಸುಗಳ ಮನಸ್ಸಿನಲ್ಲಿ, ಈಗ ಪ್ರಚಾರದಲ್ಲಿರುವ ಸಿದ್ಧಿಗಳೆಲ್ಲಾ ನಿಜವೆ? ಮತ್ತು ಮೋಕ್ಷ ಸಿದ್ಧಿಗೆ ಇವೆಲ್ಲಾ ಬೇಕೆ? ಎಂಬಂತಹ ಪ್ರಶ್ನೆಗಳು ಹುಟ್ಟುವುದು ಸ್ವಾಭಾವಿಕವಾಗಿದೆ. ಈ ಪ್ರಶ್ನೆಗಳಿಗೆ ಸಮಾದಾನಕರವಾದ ಉತ್ತರಗಳನ್ನು ನಾವು ಹುಡುಕಬೇಕಾಗುತ್ತದೆ.

ಮೊತ್ತಮೊದಲು "**ಸಿದ್ಧಿ**" ಈ ಶಬ್ದದ ಅರ್ಥ ಏನು ಎಂದು ನೋಡುವ. "**ಯಮನಿಯಮಾಸನಪ್ರಾಣಾಯಾಮಪ್ರತ್ಯಾಹಾರಧಾರಣಧ್ಯಾನಸಮಾಧಯೋಽಷ್ಟಾವಂಗಾನಿ**" (ಯೋಗದರ್ಶನ 2-29) ಯೋಗದರ್ಶನದ ಈ ಸೂತ್ರದಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣೆ, ಧ್ಯಾನ ಮತ್ತು ಸಮಾಧಿ ಎಂಬ ಈ ಎಂಟು ಯೋಗಾಂಗಗಳನ್ನು ವಿಧಿಪೂರ್ವಕವಾಗಿ ಅನುಷ್ಠಾನ ಮಾಡಿದರೆ, ಮನುಷ್ಯನಿಗೆ ಬಲ, ಜ್ಞಾನ, ಸುಖ, ಸಹನಾಶಕ್ತಿ ಮೊದಲಾದವುಗಳು ಸಿದ್ಧಿಸುತ್ತವೆ, ಎಂದು ಹೇಳುತ್ತಾರೆ. ಯಥಾ— "**ಬ್ರಹ್ಮಚರ್ಯ ಪ್ರತಿಷ್ಠಾಯಾಂ ವೀರ್ಯಲಾಭಃ ||**" (ಯೋಗದರ್ಶನ 2-38) ಎಂದರೆ, ಬ್ರಹ್ಮಚರ್ಯದ ಪಾಲನೆ ಮಾಡಿದರೆ ಶಾರೀರಿಕ ಮತ್ತು ಬೌದ್ಧಿಕ ಬಲವು ಪ್ರಾಪ್ತಿಯಾಗುತ್ತದೆ. "**ಸಮಾಧಿಸಿದ್ಧಿರೀಶ್ವರ ಪ್ರಣಿಧಾನಾತ್||**" (ಯೋಗದರ್ಶನ 2-45) ಅರ್ಥಾತ್, ಈಶ್ವರ ಪ್ರಣಿಧಾನದಿಂದ ಸಮಾಧಿಯು ಸಿದ್ಧಿಸುತ್ತದೆ. "**ಯೋಗಾಂಗಾನುಷ್ಠಾನಾದಶುದ್ಧಿಕ್ಷಯೇ ಜ್ಞಾನದೀಪ್ತಿರಾ ವಿವೇಕಖ್ಯಾತೇಃ ||**" (ಯೋಗದರ್ಶನ 2-28) ಅಷ್ಟಾಂಗ ಯೋಗದ ಅನುಷ್ಠಾನದಿಂದ ಅವಿದ್ಯೆಯು ದೂರವಾಗುತ್ತದೆ. ಮತ್ತು ವಿವೇಕ ಪರ್ಯಂತ ಜ್ಞಾನದ ಪ್ರವೃದ್ಧಿಯಾಗುತ್ತದೆ, ಎಂದು ಇದರ ಅರ್ಥವಾಗಿದೆ. "**ಕಂಠ ಕೂಪೇ ಕ್ಷುತ್ಪಿಪಾಸಾನಿವೃತ್ತಿಃ ||**" (ಯೋಗದರ್ಶನ 3-30) ಇದರ ಅರ್ಥ, ಕಂಠಕೂಪದಲ್ಲಿ ಸಂಯಮ ಮಾಡಿದರೆ, ಸ್ವಲ್ಪ ಸಮಯ ಹಸಿವೆ ಮತ್ತು ಬಾಯಾರಿಕೆ, ಇವು ದೂರವಾಗುತ್ತವೆ, ಎಂದಾಗುತ್ತದೆ. ಇದೇ ರೀತಿಯಲ್ಲಿ ಮನಸ್ಸು ಮತ್ತು

ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಂಡರೆ, ಮಾನಾಪಮಾನ ಅಥವಾ ಶೀತೋಷ್ಣಗಳ ದ್ವಂದ್ವವನ್ನು ಸಹಿಸುವ ಸಾಮಾರ್ಥ್ಯವು ಬರುತ್ತದೆ. ಇವೆಲ್ಲಾ ನಿಜವಾದ ಸಿದ್ಧಿಗಳಾಗಿವೆ. ಇವುಗಳಿಂದ ಎಲ್ಲಾ ಮನುಷ್ಯರಿಗೂ ಪ್ರಯೋಜನವಿದೆ. ಆದುದರಿಂದ, ಇವುಗಳನ್ನು ನಿಜವೆಂದು ತೋರಿಸಿ ಪ್ರಚಾರ ಮಾಡುವುದು, ಎಲ್ಲಾ ಮನುಷ್ಯರ ಕರ್ತವ್ಯವಾಗಿದೆ.

ಈಗ ಯೋಗದ ಸಿದ್ಧಿಯ ಹೆಸರಿನಲ್ಲಿ ಏನೆಲ್ಲಾ ಮಿಥ್ಯಾಪ್ರಚಾರಗಳು ನಡೆಯುತ್ತಿವೆಯೋ, ಅವುಗಳಲ್ಲಿ ಕೆಲವು ಮುಖ್ಯವಾದುವುಗಳನ್ನು ಆರಿಸಿಕೊಂಡು ವಿಚಾರಿಸೋಣ.

1) ಯೋಗಿಯು ಪರಮಾತ್ಮನಂತೆ ಸರ್ವಜ್ಞನಾಗುತ್ತಾನೆ, ಮಾತ್ರವಲ್ಲ ಸೃಷ್ಟಿ, ಸ್ಥಿತಿ ಮತ್ತು ಪ್ರಳಯವನ್ನೂ ಮಾಡಲು ಸಮರ್ಥನಾಗುತ್ತಾನೆ.

2) ಯೋಗಿಯು ಕೇವಲ ವಾಯುಸೇವನೆಯಿಂದ ಜೀವನ ನಿರ್ವಹಣ ಮಾಡಬಲ್ಲನು, ಮತ್ತು ಮಲ-ಮೂತ್ರಾದಿಗಳ ವಿಸರ್ಜನೆ ಮಾಡುವುದಿಲ್ಲ. ಇದೇ ಸ್ಥಿತಿಯಲ್ಲಿ ಅವನು ಮೋಕ್ಷವನ್ನು ಪಡೆಯುತ್ತಾನೆ.

3) ಯೋಗಿಯು ತನ್ನ ಸ್ಥೂಲ ಶರೀರವನ್ನು ಸೂಕ್ಷ್ಮವನ್ನಾಗಿ ಮಾಡಿ ಶಿಲೆಕಲ್ಲನ್ನು ಪ್ರವೇಶಮಾಡಿ, ಹೊರಗೆ ಬರಬಹುದು. ಶಿಲೆಕಲ್ಲು ಇದ್ದ ಹಾಗೆಯೇ ಇರುತ್ತದೆ. ಸ್ಥೂಲ ಶರೀರವೂ ಪೂರ್ವವತ್ ಇದ್ದಿರುತ್ತದೆ.

4) ಭೂಮಿ ಮೊದಲಾದ ಪಂಚಭೂತಗಳ ಪರಮಾಣುಗಳಿಂದ, ಯೋಗಿಯು ಅನೇಕ ಹೊಸ ಶರೀರಗಳನ್ನು ಮತ್ತು ಚಿತ್ತಗಳನ್ನು ನಿರ್ಮಿಸಬಲ್ಲನು. ಮಾತ್ರವಲ್ಲ ಅವುಗಳಿಂದ ವಿಷಯ ಸುಖವನ್ನು ಭೋಗಿಸಬಲ್ಲನು.

5) ಗೋಧಿ ಹಿಟ್ಟು, ತುಪ್ಪ ಇತ್ಯಾದಿಗಳು ಇಲ್ಲದೆಯೇ, ಯೋಗಿಯು ವಿವಿಧ ಮಿಷ್ಟಾನ್ನಗಳನ್ನು ಮಾಡಿ ತಮ್ಮ ಶಿಷ್ಯರಿಗೆ ತಿನ್ನಿಸಬಲ್ಲನು. ಶ್ರೀ ಸತ್ಯಸಾಯೀ ಬಾಬಾ ಇವರು ಚಿನ್ನ, ಬೆಳ್ಳಿ ಇತ್ಯಾದಿ ಧಾತುಗಳು ಇಲ್ಲದೆಯೇ ಕ್ಷಣದಲ್ಲಿ ತನ್ನ ಭಕ್ತರಿಗೆ ಚಿನ್ನದ ಉಂಗುರಗಳನ್ನು ಮತ್ತು ಗಡಿಯಾರಗಳನ್ನು ಕೊಡುತ್ತಾರೆ. ಇದು ಅವರು ಯೋಗದಿಂದ ಪಡೆದ ಸಿದ್ಧಿಯಾಗಿದೆ.

6) ಸಮಾಧಿಯ ಸ್ಥಿತಿಯಲ್ಲಿ ಯೋಗಿಗೆ ಆತನ ಕೈಕಾಲುಗಳನ್ನು ಕತ್ತರಿಸಿದರೂ ಗೊತ್ತಾಗುವುದಿಲ್ಲ.

7) ಪೂರ್ಣ ಅಹಿಂಸೆಯ ಪಾಲನೆಮಾಡಿದ ಯೋಗಿಯ ಮೇಲೆ ಎಲ್ಲಾ ಪ್ರಾಣಿಗಳೂ ವೈರಭಾವವನ್ನು ಬಿಟ್ಟು ಬಿಡುತ್ತವೆ.

8) ಯೋಗಿಯು ಅಗ್ನಿಯು ಜಲವಾಗಬೇಕು ಮತ್ತು ಜಲವು ಅಗ್ನಿಯಾಗಬೇಕು ಎಂದು ಹೇಳಿದರೆ ಅದು ಹಾಗೆಯೇ ಆಗುತ್ತದೆ.

9) ಯೋಗಿಯು ತನ್ನ ಶಿಷ್ಯರ ತಲೆಯಮೇಲೆ ಕೈಯಿಟ್ಟು, ಕ್ಷಣದಲ್ಲಿಯೇ ಅವರಿಗೆ ಸಮಾಧಿಯನ್ನು ಒದಗಿಸಬಲ್ಲನು ಮತ್ತು ಪರಮಾತ್ಮನ ದರ್ಶನವನ್ನು ಮಾಡಿಸಬಲ್ಲನು.

10) ವೇದ ಮತ್ತು ವೇದಾನುಕೂಲವಾದ ಋಷಿಕೃತ ಗ್ರಂಥಗಳನ್ನು ಓದದೆ ಇದ್ದರೂ ಕೂಡ ಕೇವಲ ಯೋಗಾಭ್ಯಾಸದಿಂದ ಮುಕ್ತಿಯು ಸಂಭವ.

ಯೋಗದ ಬಗ್ಗೆ, ಇಂತಹ ಅನೇಕ ಮಿಥ್ಯಾಧಾರಣೆಗಳು ಜನರಲ್ಲಿ ಬೆಳೆದಿವೆ. ಇವುಗಳಲ್ಲಿ ಕೆಲವನ್ನು ಈ ಮೊದಲೇ ನಿಜವಲ್ಲ ಎಂದು ಸಿದ್ಧಪಡಿಸಿದ್ದೇನೆ. ಉಳಿದ ವಿಷಯಗಳ ಕುರಿತಾಗಿ ಈಗ ವಿಚಾರ ಮಾಡೋಣ.

**ಪ್ರಶ್ನೆ** :– ಯೋಗಿಯು ಸ್ವಯಂ ತನಗೆ ತಾನೇ ಒಂದು ಹೊಸ ಶರೀರ ಮತ್ತು ಹೊಸ ಚಿತ್ತವನ್ನು ನಿರ್ಮಿಸಿಕೊಂಡು ವ್ಯವಹರಿಸುತ್ತಾನೆ, ಎಂಬ ವರ್ಣನೆಯು ಅನೇಕ ಕಡೆಗಳಲ್ಲಿ ಬರುತ್ತದೆ. ಇದು ನಿಜವೆ?

**ಉತ್ತರ**:– ಹೊಸ ಶರೀರ ಮತ್ತು ಚಿತ್ತವನ್ನೂ ನಿರ್ಮಿಸುವುದೆಂದರೆ, ಪೃಥ್ವೀ ಮೊದಲಾದ ಪಂಚಮಹಾ ಭೂತಗಳಿಂದ ಪರಮಾಣುಗಳನ್ನು ಸಂಗ್ರಹಿಸಿ ಪರಮಾತ್ಮನಂತೆ ಶರೀರ, ಚಿತ್ತಾದಿಗಳ ನಿರ್ಮಾಣ ಮಾಡುವುದೆಂದರೆ, ಯೋಗಾಂಗಗಳ ಅನುಷ್ಠಾನ ಮಾಡಿ, ಅದರ ಮೂಲಕ ತನ್ನ ಶರೀರ, ಚಿತ್ತಾದಿಗಳಲ್ಲಿ ಇರುವ ದೋಷಗಳನ್ನು ದೂರಮಾಡಿ ಪರಿವರ್ತನೆಯನ್ನು ತರುವುದು, ಅವುಗಳನ್ನು ಹೊಸತಾಗಿ ಮಾಡುವುದು ಎಂದಷ್ಟೇ ಅರ್ಥವಾಗುತ್ತದೆ **"ತತ್ರ ಧ್ಯಾನಜಮನಾಶಯಮ್ ॥"** (ಯೋಗದರ್ಶನ 4-6) ಎಂದು ಯೋಗದರ್ಶನದಲ್ಲಿ ಹೇಳಿದೆ. ವ್ಯಾಸರು ಇದರ ಅರ್ಥವನ್ನು ಬರೆಯುವಾಗ **"ಪಂಚವಿಧಂ ನಿರ್ಮಾಣಚಿತ್ತಂ ಜನ್ಮೌಷಧಿ ಮಂತ್ರತಪಃ ಸಮಾಧಿಜಾಃ ಸಿದ್ಧಯ ಇತಿ । ತತ್ರ ಯ ದೇವ ದ್ಯಾನಜಂ ಚಿತ್ತಂ ತದೇವಾನಾಶಯಮ್ ।"** ಎಂದು ಹೇಳಿದ್ದಾರೆ.

ಈ ವ್ಯಾಸ ಭಾಷೆಯಲ್ಲಿ ಐದು ರೀತಿಯಲ್ಲಿ ಚಿತ್ತದ ನಿರ್ಮಾಣ ಆಗುತ್ತದೆಂದು

ಹೇಳಿದ್ದಾರೆ. ಒಂದನೆಯದಾಗಿ, 'ಧ್ಯಾನಜಂ', ಎಂದರೆ, ಧ್ಯಾನದಿಂದ ಚಿತ್ತದ ನಿರ್ಮಾಣವಾಗುತ್ತದೆ. ಇದರ ತಾತ್ಪರ್ಯವೇನೆಂದರೆ, ಧ್ಯಾನದಿಂದ ದೇವರು ರಚಿಸಿದ ನಮ್ಮ ಚಿತ್ತವು ವಾಸನಾ-ರಹಿತ ವಾಗುತ್ತದೆ. ಧ್ಯಾನದ ಬಲದಿಂದ ಪರಮಾಣುಗಳನ್ನು ಒಟ್ಟುಮಾಡಿ ಹೊಸ ಚಿತ್ತವನ್ನು ಸೃಷ್ಟಿಮಾಡಬಹುದೆಂದು ಇದರ ಅರ್ಥವಲ್ಲ. ಹೊಸ ಶರೀರದ ಕುರಿತಾಗಿಯೂ ಇದೇ ರೀತಿ ನಾವು ತಿಳಿದುಕೊಳ್ಳಬೇಕು. ಪರಮಾತ್ಮನಂತೆ, ಒಬ್ಬ ಯೋಗಿಗೆ ಹೊಸ ಶರೀರ, ಚಿತ್ತಾದಿಗಳನ್ನು ರಚಿಸಲು ಸಾಧ್ಯವಿಲ್ಲ. ಈ ವಿಷಯದಲ್ಲಿ ಮಹರ್ಷಿ ದಯಾನಂದರು ಈ ರೀತಿ ಹೇಳಿದ್ದಾರೆ. "ಒಬ್ಬ ಮನುಷ್ಯನು ಎಷ್ಟೇ ದೊಡ್ಡ ಸಿದ್ಧಯೋಗಿಯಾಗಿರಲಿ, ಅವನಿಗೆ ಶರೀರಾದಿಗಳ ಪೂರ್ಣ ಜ್ಞಾನವು ಇರುವುದಿಲ್ಲ". (ಸತ್ಯಾರ್ಥ ಪ್ರಕಾಶ 12ನೇ ಸಮುಲ್ಲಾಸ)

ಒಬ್ಬ ಯೋಗಿಗೆ ಶರೀರಾದಿಗಳ ಪೂರ್ಣ ಜ್ಞಾನವು ಇರಲಿಕ್ಕೆ ಸಾಧ್ಯವಿಲ್ಲ ಎಂದಾಗ, ಅವನು ಶರೀರಾದಿಗಳ ರಚನಾಕ್ರಮವನ್ನು ಸಂಪೂರ್ಣವಾಗಿ ತಿಳಿದುಕೊಳ್ಳದೆ, ಪರಮಾಣುಗಳಿಂದ ಹೊಸ ಶರೀರಾದಿಗಳ ರಚನೆಯನ್ನು ಹೇಗೆ ಮಾಡಲು ಸಾಧ್ಯ?

ಮಹರ್ಷಿದಯಾನಂದರು ಅಲ್ಲಿಯೇ ಮುಂದುವರಿದು ಹೇಳುತ್ತಾರೆ : "ಯಾವ ರೀತಿಯಲ್ಲಿ ನೀವು ಮತ್ತು ನಾವು ಸಾಕಾರ, ಎಂದರೆ, ಶರೀರಧಾರಿಗಳಾಗಿರುವುದರಿಂದ, ತ್ರಸರೇಣು ಅಣು, ಪರಮಾಣು ಮತ್ತು ಪ್ರಕೃತಿಯನ್ನು ವಶದಲ್ಲಿಟ್ಟುಕೊಳ್ಳಲು ಹೇಗೆ ಸಾಧ್ಯವಿಲ್ಲವೋ, ಹಾಗೆಯೇ ಸ್ಥೂಲ ದೇಹಧಾರಿ ಪರಮಾತ್ಮನಿಗೂ ಕೂಡ ಮೇಲೆ ಹೇಳಿದ ಸೂಕ್ಷ್ಮ ಪದಾರ್ಥಗಳಿಂದ ಸ್ಥೂಲ ಜಗತ್ತಿನ ರಚನೆಮಾಡಲಿಕ್ಕೆ ಸಾಧ್ಯವಿಲ್ಲ."

ಎಂದರೆ, ಪರಮಾತ್ಮನು ಒಂದು ವೇಳೆ ದೇಹಧಾರಿಯಾಗಿದ್ದರೆ, ಅವನಿಗೆ ಮೂಲ ಪ್ರಕೃತಿಯ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿ, ಸೂರ್ಯ, ಪೃಥಿವೀ, ಮತ್ತು ಪ್ರಾಣಿಗಳ ಶರೀರಾದಿಗಳ ರಚನೆಯನ್ನು ಮಾಡಲಿಕ್ಕೆ ಸಾಧ್ಯವಿದ್ದಿಲ್ಲ. ಹೀಗಿರುವಾಗ, ಒಬ್ಬ ಯೋಗಿಯೂ ಕೂಡ ಶರೀರಧಾರಿಯಾಗಿದ್ದಾನೆ. ಅವನಿಂದ ಪರಮಾಣುಗಳನ್ನು ಒಟ್ಟು ಮಾಡಿ ಶರೀರಾದಿಗಳ ರಚನೆ ಮಾಡುವುದು ಹೇಗೆ ಸಾಧ್ಯ?

ಮಹರ್ಷಿ ದಯಾನಂದರ ವಿಚಾರವು ಇಲ್ಲಿ ಸ್ಪಷ್ಟವಾಗಿದೆ. ಒಬ್ಬ ಯೋಗಿಗೆ ಶರೀರಾದಿಗಳ ರಚನೆ ಮಾಡಲಿಕ್ಕೆ ಸಾಧ್ಯವಿಲ್ಲ. ದಯಾನಂದರು, ಇನ್ನೊಂದು ಕಡೆಯಲ್ಲಿ ಹೇಳುತ್ತಾರೆ, "ನಿಮಿತ್ತ ಕಾರಣಗಳು ಎರಡು ವಿಧವಾಗಿವೆ. ಒಂದನೆಯದಾಗಿ, ಉಪಾದಾನ ಕಾರಣದಿಂದ ಸೃಷ್ಟಿಯನ್ನು ರಚಿಸಿ, ಆದನ್ನು ಧಾರಣೆ ಮಾಡುವ ಮತ್ತು ಆದರ ಪ್ರಳಯವನ್ನು ಮಾಡುವ ಹಾಗೂ ಎಲ್ಲಾ ವ್ಯವಸ್ಥೆಗಳನ್ನು

ಮಾಡುವ ಮುಖ್ಯನಿಮಿತ್ತಕಾರಣನಾದ ಪರಮಾತ್ಮನು, ಎರಡನೆಯದಾಗಿ, ಪರಮಾತ್ಮನು ರಚಿಸಿದ ಈ ಸೃಷ್ಟಿಯಲ್ಲಿರುವ ಬೇರೆ ಬೇರೆ ಪದಾರ್ಥಗಳನ್ನು ತೆಗೆದುಕೊಂಡು, ವಿಭಿನ್ನ ಪ್ರಕಾರದ ವಸ್ತುಗಳನ್ನು ತಯಾರಿಸುವ ಸಾಧಾರಣ ನಿಮಿತ್ತಕಾರಣನಾದ ಜೀವಾತ್ಮನು" (ಸತ್ಯಾರ್ಥ ಪ್ರಕಾಶ - ಎಂಟನೇ ಸಮುಲ್ಲಾಸ) ಈ ವಾಕ್ಯಗಳಿಂದಲೂ, ಪರಮಾತ್ಮನು ಮುಖ್ಯ ನಿಮಿತ್ತಕಾರಣನಾಗಿದ್ದಾನೆ. ಆ ಮೇಲೆ, ಅವನು ರಚಿಸಿದ ವಸ್ತುಗಳಿಂದ ನಾವು ಬೇರೆ ವಸ್ತುಗಳನ್ನು ರಚಿಸಬಹುದು. ಆದರೆ, ಪರಮಾಣುಗಳಿಂದ ಶರೀರಾದಿಗಳ ರಚನೆಯನ್ನು ಮಾಡಲಿಕ್ಕೆ ಯಾವ ಮನುಷ್ಯನಿಂದಲೂ ಸಾಧ್ಯವಿಲ್ಲ.

ಪ್ರಶ್ನೆ :- ಯೋಗಿಗಳು ಬೇರೆ ಬೇರೆ ಶರೀರಗಳನ್ನು ಧಾರಣೆ ಮಾಡುತ್ತಾರೆ ಎಂದು ಕೇಳಿದ್ದೇವೆ, ಇದು ನಿಜವೇ?

ಉತ್ತರ :- ಈ ಮಾತಿನ ಅಭಿಪ್ರಾಯ ಹೀಗಿದೆ ; ಒಬ್ಬ ಯೋಗಿಯ ಜ್ಞಾನ ಮತ್ತು ಬಲದಿಂದ ಅನೇಕ ಮನುಷ್ಯರು ಮತ್ತು ಪಶುಪಕ್ಷಿಗಳ ಪಾಲನೆ ಹಾಗೂ ಪೋಷಣೆಯಾಗುತ್ತದೆ. ಮಹರ್ಷಿದಯಾನಂದರ ಜ್ಞಾನ ಮತ್ತು ಶಾರೀರಿಕ ಬಲದಿಂದ ಸಾವಿರಾರು ಮನುಷ್ಯರು ಹಾಗೂ ಪಶು-ಪಕ್ಷಿಗಳ ರಕ್ಷಣೆಯಾಗಿದೆ. ಒಬ್ಬ ಯೋಗಿಯ ಜ್ಞಾನದಿಂದ ಅಜ್ಞಾನವು ದೂರವಾಗುತ್ತದೆ, ಜ್ಞಾನದ ವೃದ್ಧಿಯಾಗುತ್ತದೆ, ಅಸತ್ಯ ಮತ್ತು ಅನ್ಯಾಯದ ನಾಶ, ಸತ್ಯ ಮತ್ತು ನ್ಯಾಯದ ವೃದ್ಧಿ, ವೈರತ್ವದ ಹ್ರಾಸ ಮತ್ತು ಪ್ರೇಮದ ವಿಕಾಸ, ಇತ್ಯಾದಿ ರೀತಿಯ ಅನೇಕ ಪ್ರಯೋಜನಗಳನ್ನು ನಾವು ನೋಡಬಹುದು. ಇದರ ಫಲಸ್ವರೂಪವಾಗಿ, ಅನೇಕ ಪ್ರಾಣಿಗಳ ಪಾಲನೆ, ಪೋಷಣೆ ಮತ್ತು ರಕ್ಷಣೆಯಾಗುತ್ತದೆ. ಈ ಕಾರಣದಿಂದ, ಯೋಗಿಯನ್ನು ಅನೇಕ ಪ್ರಾಣಿಗಳ ಶರೀರ ಧಾರಣೆ ಮಾಡುವವನು ಎಂದು ಹೇಳುತ್ತಾರೆ. ಆದರೆ, ಒಬ್ಬ ಯೋಗಿಯು ಅನೇಕ ಪಶು-ಪಕ್ಷಿ, ಮನುಷ್ಯ, ಇವರಿಗೆಲ್ಲಾ ಶರೀರವನ್ನು (ಜನ್ಮವನ್ನು) ಕೊಟ್ಟು, ಪ್ರಾಣಿ ಜಗತ್ತಿನ ವ್ಯವಹಾರಗಳನ್ನು ನಡೆಸುತ್ತಾನೆ ಎಂಬ ಮಾತು ನಿಜವಲ್ಲ.

ಯೋಗಿಯು ತನ್ನ ಶರೀರವನ್ನು ಬಿಟ್ಟು ಬೇರೆ ಪಶು-ಪಕ್ಷಿಗಳ ಶರೀರವನ್ನು ಪ್ರವೇಶಿಸುತ್ತಾನೆ ಎಂದು ಕೆಲವರು ಹೇಳುತ್ತಾರೆ. ಪ್ರಮಾಣ ವಿರುದ್ಧ ವಾಗಿರುವುದರಿಂದ ಇದು ಕೂಡ ಅಸತ್ಯವಾಗಿದೆ. ಮಹರ್ಷಿ ದಯಾನಂದರು ತಮ್ಮ ಸಣ್ಣ ಪುಸ್ತಕ ಆರ್ಯೋದ್ದೇಶ ರತ್ನಮಾಲಾ, ಇದರಲ್ಲಿ ಹೇಳಿರುವ ಪ್ರಕಾರ, ಜನ್ಮದಿಂದ ಹಿಡಿದು, ಮೃತ್ಯುಪರ್ಯಂತ ಯಾವುದು (ಜೀವದೊಂದಿಗೆ)

ಇರುತ್ತದೆಯೋ ಅದನ್ನು ಜಾತಿಯೆಂದು ಹೇಳುತ್ತಾರೆ. ಒಂದು ವೇಳೆ ಒಬ್ಬ ಯೋಗಿಯು ಪಶು ಮೊದಲಾದ ಪ್ರಾಣಿಗಳ ಶರೀರವನ್ನು ಪ್ರವೇಶ ಮಾಡಲಿಕ್ಕೆ ಸಾಧ್ಯ ಇದೆ ಎಂದಾದರೆ, ಅವನು ಮರಣ ಪರ್ಯಂತ ತನ್ನ ಹುಟ್ಟಿನೊಂದಿಗೆ ಬಂದ ಶರೀರದಲ್ಲಿ ಇರುವುದಿಲ್ಲವಾದುದರಿಂದ, ಜಾತಿಯ ನಿಯಮಕ್ಕೆ ಇದು ವಿರುದ್ಧವಾದಂತಾಗುತ್ತದೆ. ಆದುದರಿಂದ ಯೋಗಿಯು ಬೇರೆ ಶರೀರವನ್ನು ಧಾರಣೆ ಮಾಡಿಕೊಳ್ಳುತ್ತಾನೆ ಎಂಬ ಮಾತು ಸರಿಯಲ್ಲ. ಯೋಗಿಯು ಶರೀರ, ಚಿತ್ತ ಮೊದಲಾದವುಗಳ ನಿರ್ಮಾಣ ಮಾಡಲಾರನು ಎಂಬ ಮಾತನ್ನು ಮೊದಲೇ ಹೇಳಿದ್ದೇವೆ, ಜೀವವು ಏಕದೇಶೀ ಆಗಿದೆ. ಆದುದರಿಂದ, ಯಾವ ಶರೀರದಲ್ಲಿ ಅದು ಇರುತ್ತದೆಯೋ ಆ ಶರೀರವು ಜೀವಿತವಾಗಿರುತ್ತದೆ. ಆ ಶರೀರವನ್ನು ಬಿಟ್ಟರೆ ಅದು ಮೃತವಾಗುತ್ತದೆ. ಆದುದರಿಂದ ಯೋಗಿಯು ಅನೇಕ ಶರೀರಗಳನ್ನು ಧಾರಣೆ ಮಾಡಿಕೊಳ್ಳುತ್ತಾನೆ, ಎಂಬ ಮಾತಿನಲ್ಲಿ ಸತ್ಯಾಂಶವಿಲ್ಲ.

**ಪ್ರಶ್ನೆ** :– ಯೋಗಿಯು ಶಿಲೆಕಲ್ಲುಗಳನ್ನು ಪ್ರವೇಶಮಾಡಿ ಹೊರಗೆ ಬರುತ್ತಾನೆ, ಮತ್ತು ಪುನಃ ಮೊದಲಿನ ಹಾಗೆಯೇ ತನ್ನ ಸ್ಥೂಲ ಶರೀರವನ್ನು ಧಾರಣೆ ಮಾಡಿಕೊಳ್ಳುತ್ತಾನೆ, ಎಂದು ಹೇಳುತ್ತಾರೆ. ಇದರ ವಾಸ್ತವಿಕತೆ ಏನು?

**ಉತ್ತರ**:– ಈ ಮಾತಿನಲ್ಲಿಯೂ ತಿರುಳಿಲ್ಲ. ಯಾಕೆಂದರೆ, ಮೊದಲನೆಯದಾಗಿ ಯೋಗಿಯು ಶಿಲೆಕಲ್ಲನ್ನು ಪ್ರವೇಶ ಮಾಡುವಂತಹ ಸ್ಥಿತಿಗೆ ಬರುವಾಗ ಅವನ ಜೀವನವು ಸಮಾಪ್ತವಾಗುತ್ತದೆ. ಮತ್ತೆ ಶಿಲೆಕಲ್ಲನ್ನು ಪ್ರವೇಶಿಸುವುದು ಯಾರು? ಒಂದು ವೇಳೆ ಸದ್ಯಕ್ಕೆ ಶಿಲೆಕಲ್ಲನ್ನು ಪ್ರವೇಶ ಮಾಡುವ ಮಾತನ್ನು ನಾವು ಸಂಭವ ಎಂದು ಒಪ್ಪಿಕೊಂಡರೂ, ಆ ಕ್ಷಣವೇ ಸಪ್ತಧಾತುಗಳಿಂದ ಯುಕ್ತವಾದ ಮತ್ತು ವೃದ್ಧಿ ಹಾಗೂ ಹ್ರಾಸದ ಗುಣಗಳಿರುವ ಹೊಸ ಶರೀರವು ನಿರ್ಮಾಣವಾಗುವುದು ಸಾಧ್ಯವಿಲ್ಲ. ಸೃಷ್ಟಿಕ್ರಮಕ್ಕೆ ವಿರುದ್ಧವಾಗಿರುವುದರಿಂದ ಇದನ್ನು ನಾವು ನಂಬುವುದಕ್ಕೆ ಸಾಧ್ಯವಿಲ್ಲ. ಆದರೂ, ತನ್ನ ಬುದ್ಧಿಯಿಂದ ವಿಚಾರಮಾಡಿ ಶಿಲೆಕಲ್ಲಿನ ಅಂತಃಸ್ಥಿತಿಯನ್ನು ತಿಳಿದುಕೊಂಡು ಬಂದರೆ, ಅದನ್ನೇ ಯಾರಾದರೂ ಆಲಂಕಾರಿಕ ಭಾಷೆಯಲ್ಲಿ ಶಿಲೆಕಲ್ಲನ್ನು ಪ್ರವೇಶಮಾಡಿ ಹೊರಗೆ ಬರುವುದೆಂದು ವರ್ಣಿಸಿದರೆ, ಅದನ್ನು ಒಪ್ಪಿಕೊಳ್ಳುವುದಕ್ಕೆ ಅಡ್ಡಿ ಇಲ್ಲ. ಆದರೆ, ಶರೀರದೊಂದಿಗೆ ಶಿಲೆಕಲ್ಲನ್ನು ಪ್ರವೇಶ ಮಾಡಿ ಬಂದನೆಂದು ಯಾರಾದರೂ ಹೇಳಿದರೆ, ಅದನ್ನು ನಾವು ನಂಬಲಿಕ್ಕೆ ಸಾಧ್ಯವಿಲ್ಲ.

ಈಗ ಮೋಕ್ಷ ಪ್ರಾಪ್ತಿಗೆ ಈ ಎಲ್ಲಾ ಸಿದ್ಧಿಗಳು ಆವಶ್ಯಕವೆ? ಎಂಬುದನ್ನು

ನೋಡುವ ಮಹರ್ಷಿ ಪತಂಜಲಿ ಈ ವಿಷಯದಲ್ಲಿ ಹೀಗೆಂದು ಹೇಳುತ್ತಾರೆ :

**"ಸತ್ತ್ವ ಪುರುಷಯೋಃ ಶುದ್ಧಿ ಸಾಮ್ಯೇ ಕೈವಲ್ಯಮಿತಿ ॥**

(ಯೋಗದರ್ಶನ 3-55)

ಅರ್ಥಾತ್, ಪ್ರಕೃತಿ ಮತ್ತು ಪುರುಷ ಎಂದರೆ, ಆತ್ಮಾ-ಪರಮಾತ್ಮ ಅವರ ಸರಿಯಾದ ಜ್ಞಾನ ಸಿದ್ಧಿಯಿಂದ ಮೋಕ್ಷವು ಸಿಗುತ್ತದೆ. ಈ ಸೂತ್ರದ ಭಾಷ್ಯೆಯಲ್ಲಿ ವ್ಯಾಸರು ಹೀಗೆಂದು ಹೇಳುತ್ತಾರೆ : "**ಏತಸ್ಯಾಮವಸ್ಥಾಯಾಂ ಕೈವಲ್ಯಂ ಭವತೀಶ್ವರಸ್ಯಾನೀಶ್ವರಸ್ಯ ವಾ ವಿವೇಕ ಜ್ಞಾನಭಾಗಿನಃ ಇತರಸ್ಯ ವಾ ।**" ಎಂದರೆ, ಯಾವ ಜೀವನಿಗೆ ಸಿದ್ಧಿಗಳು ಪ್ರಾಪ್ತವಾಗಿವೆಯೋ, ಮತ್ತು ಯಾವ ಜೀವನಿಗೆ ಸಿದ್ಧಿಗಳು ಪ್ರಾಪ್ತವಾಗಿಲ್ಲವೋ, ಅವನಿಗೂ ಮೋಕ್ಷವು ಲಭಿಸುತ್ತದೆ. ಮೋಕ್ಷ ಪ್ರಾಪ್ತಿಗೆ, ಸಿದ್ಧಿಗಳು(ವಿಭೂತಿಗಳು) ಆವಶ್ಯಕವಲ್ಲ, ಎಂದು ವ್ಯಾಸ ಭಾಷ್ಯದಿಂದ ಸ್ಪಷ್ಟವಾಗುತ್ತದೆ. ಉದಾಹರಣೆಗಾಗಿ ಹೇಳುವುದಾದರೆ, ಕಂಠಕೂಪದಲ್ಲಿ ಸಂಯಮ ಮಾಡಿದರೆ ಸ್ವಲ್ಪಕಾಲದ ತನಕ ಹಸಿವೆ ಮತ್ತು ಬಾಯಾರಿಕೆಗಳು ಆಗುವುದಿಲ್ಲವೆಂಬುದನ್ನು ನೋಡಿದ್ದೇವೆ. ಆದರೆ ಈ ಸಿದ್ಧಿಯು (ಮೋಕ್ಷಪ್ರಾಪ್ತಿಗೆ) ಆವಶ್ಯಕವಾಗಿಲ್ಲ. ಪ್ರಾಣದ ಮೇಲೆ ಸ್ವಲ್ಪ ಅಧಿಕಾರವನ್ನು ಸ್ಥಾಪಿಸಬೇಕಾಗುತ್ತದೆ. ಆದರೆ 10-15 ನಿಮಿಷಗಳ ತನಕ ಪ್ರಾಣವನ್ನು ತಡೆದಿಡುವುದು ಮೋಕ್ಷಪ್ರಾಪ್ತಿಗೆ ಬೇಕಾಗಿಲ್ಲ.

ಪ್ರಾಣಾಯಾಮದ ವಿಷಯದಲ್ಲಿ ಬ್ರಹ್ಮಚಾರೀ ಧಿರೇಂದ್ರ ಸ್ವಾಮಿಯವರು ಒಂದು ಲೇಖನ ಬರೆದಿದ್ದಾರೆ. ಈ ಲೇಖನದಲ್ಲಿ ಬರೆದಿರುವ ಪ್ರಕಾರ ಎರಡು ದಿನಗಳ ತನಕ ನಿರಂತರವಾಗಿ ಪ್ರಾಣವನ್ನು ತಡೆದಿಡುವ ಅಭ್ಯಾಸವನ್ನು ಮಾಡದೆ ಯಾರಿಗೂ ಯೋಗಿಯಾಗಲಿಕ್ಕೆ ಸಾಧ್ಯವಿಲ್ಲ. ಈ ಮಾತಿಗೆ ಏನೂ ಪ್ರಮಾಣವಿಲ್ಲ. ಆದುದರಿಂದ ಇದನ್ನು ನಮಗೆ ಅಂಗೀಕರಿಸಲಿಕ್ಕೆ ಸಾಧ್ಯವಿಲ್ಲ, ಮಹರ್ಷಿ ದಯಾನಂದರು ಸತ್ಯಾರ್ಥ ಪ್ರಕಾಶದಲ್ಲಿ ಒಂಬತ್ತನೇ ಸಮುಲ್ಲಾಸದಲ್ಲಿ, ಮುಮುಕ್ಷುವಿಗೆ ಪ್ರತಿದಿನ ಕನಿಷ್ಠಪಕ್ಷ ಎರಡು ಘಂಟೆಗಳ ತನಕ ಧ್ಯಾನಮಾಡುವುದು ಆವಶ್ಯಕವಾಗಿದೆ, ಎಂದು ಹೇಳಿದ್ದಾರೆ. ಇದನ್ನು ಪ್ರಾತಃ ಮತ್ತು ಸಾಯಂಕಾಲ ಸಮಾನವಾಗಿ ವಿಭಾಗಿಸಿದರೆ ಒಂದು ಬಾರಿ ಒಂದು ಘಂಟೆ ಸತತ ಧ್ಯಾನಕ್ಕೆ ಬೇಕಾಗುತ್ತದೆ. ದಯಾನಂದರ ಈ ವಾಕ್ಯಗಳಿಂದ, ಪ್ರತಿದಿನ ಎರಡು ಘಂಟೆಯ ಧ್ಯಾನಾಭ್ಯಾಸವು ಮೋಕ್ಷ ಪ್ರಾಪ್ತಿಗೆ ಸಾಕಾಗುತ್ತದೆ, ಎಂದು ಸ್ಪಷ್ಟವಾಗುತ್ತದೆ. ಪ್ರತಿದಿನ 6-18 ತಾಸುಗಳ ಧ್ಯಾನವು ಅನಿವಾರ್ಯವಲ್ಲ. ಆದುದರಿಂದ, ಇದೇ ರೀತಿ ದೀರ್ಘಕಾಲದ ಪ್ರಾಣಾಯಾಮವೂ ಅನಾವಶ್ಯಕವೆಂದು ಸಿದ್ಧವಾಗುತ್ತದೆ.

ವ್ಯವಹಾರದಲ್ಲಿ ಯಮ - ನಿಯಮಗಳ ಪಾಲನೆ, ಮತ್ತು ಪ್ರತಿದಿನ ಎರಡು ಘಂಟೆ ಸಮಯ ಸಮಾಧಿಯಲ್ಲಿ ಕುಳಿತುಕೊಳ್ಳುವುದು, ಇವು ಮೋಕ್ಷಪ್ರಾಪ್ತಿಗೆ ಅನಿವಾರ್ಯವಾಗಿವೆ. ಆದರೆ, ಎಲ್ಲಾ ಸಿದ್ಧಿಗಳ ಪ್ರಾಪ್ತಿಯು ಮೋಕ್ಷಕ್ಕೆ ಬೇಕಾಗಿಲ್ಲ. ಯೋಗಿಯು ಪರಮಾತ್ಮನಂತೆ ಸರ್ವಜ್ಞ ಮತ್ತು ಸರ್ವಶಕ್ತಿಶಾಲಿಯಾಗುತ್ತಾನೆ. ಹಾಗೂ ಸೃಷ್ಟಿ ತಥಾ ಪ್ರಳಯ ಕಾರ್ಯಕ್ಕೂ ಸಮರ್ಥನಾಗುತ್ತಾನೆ, ಎಂಬ ಅಂಧವಿಶ್ವಾಸದ ಪರಂಪರೆಯು ಜನರಲ್ಲಿ ಬೆಳೆಯುತ್ತಾ ಬಂದಂತೆ, ಅನೇಕರು ಅಜ್ಞಾನದಲ್ಲಿ ಸಿಕ್ಕಿಕೊಂಡು, ಮೋಕ್ಷದ ಪರಮಾನಂದದ ಸುಖದಿಂದ ವಂಚಿತರಾಗುತ್ತಾ ಬಂದಿದ್ದಾರೆ. ತುಂಬಾ ಮಂದಿ (ಯೋಗಾಭ್ಯಾಸಿಗಳು) ತಮ್ಮ ಸ್ವಾರ್ಥದ ಸಿದ್ಧಿಗಾಗಿ, ಯೋಗಿಯು ಪರಮಾತ್ಮನಿಗೆ ಸಮಾನನಾಗಿದ್ದಾನೆ ಮತ್ತು ಅವನ ಉಪಾಸನೆಯನ್ನು ಮಾಡಿದರೆ, ಮೋಕ್ಷವು ಸಿಗುತ್ತದೆ, ಎಂಬಂತಹ ಮಾತುಗಳನ್ನು ಪ್ರಚಾರ ಮಾಡಿದ್ದಾರೆ. ಈ ರೀತಿ ಇವರೆಲ್ಲಾ ಜನರಿಗೆ ಪರಮಾತ್ಮನ ಉಪಾಸನೆಯನ್ನು ಮಾಡಲಿಕ್ಕೆ ಹೇಳುವುದನ್ನು ಬಿಟ್ಟು, ಜನರಿಂದ ತಮ್ಮ ಉಪಾಸನೆಯನ್ನು ಮಾಡಿಸಿ, ಅವರನ್ನು ಪಥಭ್ರಷ್ಟರನ್ನಾಗಿ ಮಾಡಿದ್ದಾರೆ. ಇದರಿಂದ ಮಾನವ ಸಮಾಜಕ್ಕೆ ತುಂಬಾ ಹಾನಿಯಾಗಿದೆ. ಈಗಲೂ ಇಂತಹ ಹಾನಿಯು ಆಗುತ್ತಾ ಇದೆ. ಮುಕ್ತಿಯ ಪ್ರಾಪ್ತಿಗೆ, ಎಲ್ಲಾ ಸಿದ್ಧಿಗಳನ್ನು ಮೊದಲು ಹಸ್ತಗತವನ್ನಾಗಿ ಮಾಡುವುದು ಅನಿವಾರ್ಯ ಎಂಬ ವಿಚಾರದ ಪ್ರಚಾರದಿಂದ, ಅನೇಕ ಜನರು, ಇದು ತಮ್ಮಿಂದ ಸಾಧ್ಯವಿಲ್ಲ ಎಂದು ಭಾವಿಸಿ, ಯೋಗಾಭ್ಯಾಸದಿಂದ ದೂರ ಸರಿದಿದ್ದಾರೆ. ಯೋಗಾಭ್ಯಾಸದಿಂದ ಮುಕ್ತಿಯನ್ನು ಪಡೆಯುವ ಆಶೆಯನ್ನು ಬಿಟ್ಟುಬಿಟ್ಟಿದ್ದಾರೆ. ಇದರಿಂದಲೂ ಸಂಸಾರಕ್ಕೆ ಬಹಳ ಅಪಕಾರವಾಗಿದೆ.

•

ಈ ಲೇಖನದಲ್ಲಿ, ಎರಡು ಮಾತುಗಳ ಮೇಲೆ ಮಾಡಲಾಯಿತು, ಯಥಾ - ಯೋಗದ ಹೆಸರಲ್ಲಿ ಪ್ರಚಾರ ಮಾಡಿರುವ ಸಿದ್ಧಿಗಳೆಲ್ಲಾ ನಿಜವಲ್ಲ, ಮತ್ತು ನಿಜವಾದ ಸಿದ್ಧಿಗಳೆಲ್ಲಾ ಮೋಕ್ಷಪ್ರಾಪ್ತಿಗೆ ಆವಶ್ಯಕವಲ್ಲ.

## 13. ಈಗ ಯೋಗದಲ್ಲಿ ಪ್ರಚಲಿತವಾಗಿರುವ ಯೋಗ-ಮಾರ್ಗಗಳೆಲ್ಲಾ ಸರಿಯೆ? ಮತ್ತು ಅವುಗಳನ್ನು ಅನುಸರಿಸಿಕೊಂಡು ಹೋದರೆ ಮೋಕ್ಷವು ಸಿದ್ಧಿಸುವುದೆ?

ಲೋಕದಲ್ಲಿ, ಎಲ್ಲಾ ಪ್ರಾಣಿಗಳಲ್ಲಿ ಸರ್ವ ದುಃಖ ಮತ್ತು ಬಂಧನಗಳಿಂದ ಬಿಡುಗಡೆ ಹೊಂದಿ, ಪೂರ್ಣ ಸುಖವನ್ನು ಅನುಭವಿಸಬೇಕೆಂಬ ಅಭಿಲಾಷೆಯು ಇದ್ದೇ ಇದೆ. ಆದರೆ, ಈ ಅಭಿಲಾಶೆಯು ವಾಸ್ತವಿಕ ಯೋಗ-ಮಾರ್ಗವನ್ನು

ಅನುಸರಿಸಿಕೊಂಡು ಹೋಗದೆ ಇದ್ದರೆ, ಎಂದಿಗೂ ಈಡೇರುವಹಾಗಿಲ್ಲ.

ಈಗಿನ ಕಾಲದಲ್ಲಿ, ಅನೇಕ ಪ್ರಕಾರದ ಯೋಗಗಳ ಪ್ರಚಾರವು ಆಗಿರುವುದರಿಂದ, ಯಾವುದರಿಂದ ಮನುಷ್ಯನ ಜೀವನದ ಮುಖ್ಯ ಉದ್ದೇಶವು ಸಿದ್ಧಿಸಬಹುದೋ, ಅದನ್ನು ತಿಳಿದುಕೊಳ್ಳುವುದು ಬಹಳ ಕಠಿಣವಾಗಿದೆ. ಒಬ್ಬ ಯೋಗ ಜಿಜ್ಞಾಸುವು ಒಂದು ಅಡಚಣೆಯನ್ನು ದೂರಮಾಡಿಕೊಂಡು ಮುಂದುವರೆಯುವಾಗ ಅವನ ಮಾರ್ಗದಲ್ಲಿ ಇನ್ನೊಂದು ಅಡಚಣೆಯು ಉತ್ಪನ್ನವಾಗುತ್ತದೆ. ಯೋಗಮಾರ್ಗದಲ್ಲಿ ಬರುವ ಇಂತಹ ಕೆಲವು ಸಮಸ್ಯೆಗಳನ್ನು ಬಗೆಹರಿಸುವ ಉಪಾಯವನ್ನು ಜನರಿಗೆ ತಿಳಿಸುವ ಪ್ರಯಾಸವನ್ನು ಮಾಡುತ್ತೇನೆ. ಈ ಸಮಸ್ಯೆ ಯಾವುದೆಂದರೆ, ದೇವರ ಭಕ್ತಿಯ ಸಮಸ್ಯೆ. ದೇವರ ಭಕ್ತಿಯ ಹೆಸರಿನಲ್ಲಿ ನೂರಾರು (ಉಪಾಸನಾ) ಪದ್ಧತಿಗಳು ಲೋಕದಲ್ಲಿ ಬಳಕೆಯಲ್ಲಿವೆ. ಈ ಪದ್ಧತಿಗಳೆಲ್ಲಾ ಹೆಚ್ಚಾಗಿ ಒಂದಕ್ಕೊಂದು ವಿರುದ್ಧವಾಗಿವೆ. ಇವುಗಳನ್ನು ನೋಡಿ, ಯಾರಾದರೂ ಸ್ವಲ್ಪ ತಾರ್ಕಿಕ ಬುದ್ಧಿಯಿಂದ, ಈ ರೀತಿ ಪರಮಾತ್ಮನ ಯಾವುದೇ ಒದು ಸ್ವರೂಪವು ನಿಶ್ಚಿತವಾಗುವುದಿಲ್ಲ. ಆದುದರಿಂದ, ಅವನ ಮೂರ್ತಿಯನ್ನು ಮಾಡಿ ಪೂಜಿಸಿದರೆ ಪ್ರಯೋಜನವೇನು ಎಂದು ಕೇಳಿದರೆ, ಇದಕ್ಕೆ ಸರಿಯಾದ ಉತ್ತರವನ್ನು ಯಾರೂ ಕೊಡುವುದಿಲ್ಲ. ಕೆಲವರು ಪರಮಾತ್ಮನನ್ನು ನಿರಾಕಾರನೆಂದು ನಂಬಿ ಅವನ ಭಕ್ತಿಮಾಡುತ್ತಾರೆ. ಕೆಲವರು ಅವನನ್ನು ಸಾಕಾರನೆಂದು ತೋರಿಸಿ ಅವನನ್ನು ಪೂಜಿಸುತ್ತಾರೆ. ಕೆಲವರು, ಎಲ್ಲಾ ಪ್ರಾಣಿಗಳ ಮೇಲೆ ವೈರಭಾವವನ್ನು ಬಿಟ್ಟು ಪ್ರೀತಿಯಿಂದ ವರ್ತಿಸಿದರೆ, ದೇವರು ಮೋಕ್ಷವನ್ನು ಕೊಡುತ್ತಾನೆ ಎಂದು ಹೇಳುತ್ತಾರೆ. ಇಂತಹ ದೇವರ ಹೆಸರಿನಲ್ಲಿ, ಇಂತಹ ಪಶುಗಳನ್ನು ಕೊಂದು ತಿಂದರೆ, ದೇವರು ಒಲಿಯುತ್ತಾನೆ ಎಂದು ಹೇಳುವವರೂ ಇದ್ದಾರೆ. ಕೆಲವರು ಪರಮಾತ್ಮನನ್ನು ಸರ್ವವ್ಯಾಪಕನೆಂದು ಹೇಳುತ್ತಾರೆ, ಇನ್ನು ಕೆಲವರು ಅವನು ಪರಂಧಾಮ ಅಥವಾ ಏಳನೇ ಆಕಾಶದಲ್ಲಿ ಇದ್ದಾನೆ ಎಂದು ಹೇಳಿ ಅವನನ್ನು ಏಕದೇಶೀಯನೆಂದು ಸಿದ್ಧಪಡಿಸುತ್ತಾರೆ. ಈ ರೀತಿ, ಅಸಂಖ್ಯ ಜನರ ಸಾಧ್ಯ ಮತ್ತು ಸಾಧನಗಳಲ್ಲಿ ಪರಸ್ಪರ ವಿರೋಧಾಭಾಸವು ನಮಗೆ ಕಂಡು ಬರುತ್ತದೆ. ಇದು ಹೀಗೆ ಯಾಕೆ ಎಂದು ಜಿಜ್ಞಾಸುಗಳು ಪ್ರಶ್ನಿಸಿದಾಗ, ಇದಕ್ಕೆ ಸಿಗುವ ಉತ್ತರ — ಎಲ್ಲಾ ಮಾರ್ಗಗಳೂ ಸರಿಯಾಗಿವೆ, ಇವುಗಳಲ್ಲಿ ಯಾವುದೇ ಆದರೂ ಒಂದು ಮಾರ್ಗವನ್ನು ಅನುಸರಿಸಿಕೊಂಡು ಹೋದರೆ ಮೋಕ್ಷವು ಸಿದ್ಧಿಸುತ್ತದೆ ! ಇಲ್ಲಿ ಒಂದೇ ಒಂದು ನಿಯಮ ಏನೆಂದರೆ, ಭಕ್ತನಿಗೆ ತನ್ನ ಉಪಾಸ್ಯ ದೇವತೆಯ ಮೇಲೆ

ಪೂರ್ಣವಿಶ್ವಾಸವಿರಬೇಕು. ಉದಾಹರಣೆಗಾಗಿ, ಒಬ್ಬ ಭಕ್ತನು "**ಕಾಳೀ ಮಾತೆ ಕಲ್ಕತ್ತಾವಾಲೀ**", ಈ ದೇವಿಯ ಪೂಜೆ ಮಾಡುತ್ತಾನೆ ಎಂದುಕೊಳ್ಳುವ. ಇದರಲ್ಲಿ ಏನೂ ದೋಷವಿಲ್ಲ. ಭಕ್ತನ ಹೃದಯದಲ್ಲಿ ಪೂರ್ಣವಿಶ್ವಾಸವಿರಬೇಕು. ಇಷ್ಟೇ ಸಾಕು. ಕಾಳಿಮಾತೆಯು ಖಂಡಿತವಾಗಿಯೂ ಮುಕ್ತಿಯನ್ನು ಕೊಡುತ್ತಾಳೆ. ಇದೇ ರೀತಿಯಾರಾದರೂ, ಒಂದು ಕಲ್ಲಿನ ತುಂಡನ್ನು ಮನೆಗೆ ತಂದು ಪೂರ್ಣವಿಶ್ವಾಸದಿಂದ ಅದರ ಪೂಜೆ, ಎಂದರೆ ಅದಕ್ಕೆ ಸ್ನಾನಮಾಡಿಸುವುದು, ಭೋಜನ ಮಾಡಿಸುವುದು, ದೀಪಹಚ್ಚಿ ಅದನ್ನು ಬೆಳಗಿಸುವುದು, ಅದರ ಸ್ತುತಿ, ಪ್ರಾರ್ಥನೆ, ಉಪಾಸನೆ ಇತ್ಯಾದಿಗಳನ್ನು ಮಾಡುತ್ತಾ ಹೋದರೆ, ಆ ಕಲ್ಲು ಕೂಡಾ ಅವನನ್ನು ಭವಸಾಗರದಿಂದ ಪಾರುಮಾಡುತ್ತದೆ. ಆದುದರಿಂದ, ಎಲ್ಲಾ ಯೋಗ ಮಾರ್ಗಗಳೂ ಸರಿಯೇ ಆಗಿವೆ. ಯಾವುದೇ ಒಂದು ಮಾರ್ಗವನ್ನು ಆರಿಸಿಕೊಂಡು, ಅದರ ಮೇಲೆ ಪೂರ್ಣ ವಿಶ್ವಾಸದಿಂದ ಅದನ್ನು ಅನುಸರಿಸಿಕೊಂಡು ಹೋಗಬೇಕು. ಇದರಿಂದ ಎಲ್ಲರೂ ಭವಸಾಗರದಿಂದ ಪಾರಾಗುತ್ತಾರೆ.

ಈ ರೀತಿಯ ವಿಚಾರಗಳ ಪ್ರಚಾರದಿಂದ, ಅನೇಕ ಜನರು ಪ್ರಭಾವಿತರಾಗಿ, ಏನೂ ವಿಚಾರಮಾಡದೆ, ಕಣ್ಣುಮುಚ್ಚಿಕೊಂಡು ಸಿಕ್ಕಿದ ಮಾರ್ಗವನ್ನು ಹಿಡಿದುಕೊಂಡು ಹೋಗಿಬಿಡುತ್ತಾರೆ. ಇದರಿಂದ, ತಾವಂತೂ ದುಃಖಸಾಗರದಲ್ಲಿ ಮುಳುಗಿಬಿಡುತ್ತಾರೆ. ಇನ್ನು ತಮ್ಮ ಪರಿವಾರ ಮತ್ತು ಅನುಯಾಯಿಗಳಿಗೆ, ತಪ್ಪುದಾರಿಯನ್ನು ತೋರಿಸಿಕೊಟ್ಟು ಅವರನ್ನೆಲ್ಲಾ ಮನುಷ್ಯಜೀವನದ ಮುಖ್ಯ ಲಕ್ಷ್ಯ, ಮೋಕ್ಷದ ಸಿದ್ಧಿ, ಇದರಿಂದ ವಂಚಿತರನ್ನಾಗಿ ಮಾಡುತ್ತಾರೆ.

ಇಂತಹ ಪರಿಸ್ಥಿತಿಯಲ್ಲಿ ನಾವು, ಎಲ್ಲಾ ಯೋಗ-ಮಾರ್ಗಗಳೂ ಸರಿಯಾಗಿವೆ, ಅಥವಾ ಯಾವುದೂ ಸರಿಯಾಗಿಲ್ಲ ಎಂದು ಹೇಳಿದರೆ ಸಾಲದು, ಇದರಿಂದ ಸತ್ಯಾಸತ್ಯದ ನಿರ್ಣಯವು ಆಗುವುದಿಲ್ಲ. ಆದುದರಿಂದ, ಪ್ರಮಾಣ ಮತ್ತು ಯುಕ್ತಿಗಳಿಂದ ಈ ವಿಚಾರಗಳ ಪರೀಕ್ಷಣೆಯಾಗಬೇಕು. ಈಗ ಬಳಕೆಯಲ್ಲಿರುವ ಯೋಗ-ಮಾರ್ಗಗಳಲ್ಲಿ ಎಲ್ಲವೂ ಸರಿಯೆಂದು ಹೇಳಲಿಕ್ಕೆ ಸಾಧ್ಯವಿಲ್ಲ. ಯಾಕೆಂದರೆ, ಅವುಗಳು ಒಂದಕ್ಕೊಂದು ವಿರುದ್ಧವಾಗಿವೆ. ಒಂದು ವಿಷಯದ ಮೇಲೆ ಪರಸ್ಪರ ವಿರುದ್ಧವಾದ ಎರಡು ಅಭಿಪ್ರಾಯಗಳು ಇರುವಾಗ, ಇವೆರಡೂ ಸರಿಯಾಗಿರಲಿಕ್ಕೆ ಸಾಧ್ಯವೇ ಇಲ್ಲ. ಉದಾಹರಣೆಗಾಗಿ, ಒಬ್ಬ ಹೇಳುತ್ತಾನೆ— ಕಾರಣವಿಲ್ಲದೆ– ಕಾರ್ಯವಿಲ್ಲ. ಮಣ್ಣಿಲ್ಲದೆ ಮಡಿಕೆ, ಚಿನ್ನವಿಲ್ಲದೆ - ಚಿನ್ನದ ಆಭರಣ ಆಗಲಿಕ್ಕೆ ಸಾಧ್ಯವಿಲ್ಲ. ಇನ್ನೊಬ್ಬ ಹೇಳುತ್ತಾನೆ— ಮಣ್ಣಿಲ್ಲದೆಯೇ ಮಡಿಕೆ ಆಗುತ್ತದೆ. ಚಿನ್ನವು

ಇಲ್ಲದೆಯೇ ಚಿನ್ನದ ಆಭರಣವನ್ನು ತಯಾರಿಸಲು ಸಾಧ್ಯವಿದೆ, ಇವೆರಡೂ ವಿಚಾರಗಳು ಸತ್ಯವಾಗಲಿಕ್ಕೆ ಸಾಧ್ಯವಿಲ್ಲ.

ಎಲ್ಲಾ ಮಾರ್ಗಗಳು ಸರಿ ಎಂದು ಹೇಳುವವರ ಸಾಧ್ಯ - ಪರಮಾತ್ಮ ಅಥವಾ ಮೋಕ್ಷ, ಇದರ ಬಗ್ಗೆ ಇರುವ ಕಲ್ಪನೆಗಳು ಒಂದಕ್ಕೊಂದು ವಿರುದ್ಧವಾಗಿವೆ. ದೃಷ್ಟಾಂತಕ್ಕಾಗಿ ಹೇಳುತ್ತೇನೆ— ದಯಾನಂದರು, ಪರಮಾತ್ಮನು ಸರ್ವವ್ಯಾಪಕನೆಂದು ಹೇಳಿದ್ದಾರೆ. ವೇದಗಳೂ ಪರಮಾತ್ಮನು ಸರ್ವವ್ಯಾಪಕನೆಂದು ಹೇಳುತ್ತವೆ. ಯಥಾ— "**ಸಪರ್ಯಗಾತ್.......**" [ಯಜುರ್ವೇದ 40-8], ಅರ್ಥಾತ್, ಪರಮಾತ್ಮನು ಸರ್ವವ್ಯಾಪಕನಾಗಿದ್ದಾನೆ. "**ಸ ಓತಶ್ಚ ಪ್ರೋತಶ್ಚವಿಭುಃ ಪ್ರಜಾಸು..........**" (ಯಜುರ್ವೇದ 32-8) ಎಂದರೆ ಪರಮಾತ್ಮನು ಸೃಷ್ಟಿಯ ಎಲ್ಲಾ ಪದಾರ್ಥಗಳಲ್ಲಿ ಓತಪ್ರೋತನಾಗಿದ್ದಾನೆ.

ಈ ಸಿದ್ಧಾಂತಕ್ಕೆ ವಿರುದ್ಧವಾಗಿ, ಬ್ರಹ್ಮಕುಮಾರಿ ಸಂಪ್ರದಾಯದವರು, ಪರಮಾತ್ಮನು ಪರಮ ಧಾಮದಲ್ಲಿ ಇದ್ದಾನೆಂದು ಹೇಳುತ್ತಾರೆ. ಮುಸಲ್ಮಾನರು ಅವನು ಏಳನೆಯ ಆಕಾಶದಲ್ಲಿ ಇದ್ದಾನೆ ಎಂದು ಹೇಳುತ್ತಾರೆ. ಕ್ರಿಶ್ಚನ್ ಮತಾವಲಂಬಿಗಳು ದೇವರು ನಾಲ್ಕನೆಯ ಆಕಾಶದಲ್ಲಿ ಇದ್ದಾನೆ ಎಂದು ಹೇಳುತ್ತಾರೆ. ಪರಮಾತ್ಮನು ಸರ್ವವ್ಯಾಪಕನೆಂಬ ಮಾತು ನಿಜವಾದರೆ, ಅವನು ಏಕದೇಶೀಯ ನಾಗಿದ್ದಾನೆ ಎಂದು ಹೇಳುವವರ ಮಾತು ಅಸತ್ಯವೆಂದಾಗುತ್ತದೆ. ದೇವರು ಏಕದೇಶೀಯನೆಂಬ ಮಾತು ನಿಜವಾದರೆ ಅವನು ಸರ್ವವ್ಯಾಪಕನೆಂಬ ಮಾತು ಸುಳ್ಳಾಗುತ್ತದೆ.

ಒಂದು ಕಡೆಯಲ್ಲಿ, ದಯಾನಂದರು, ಪತಂಜಲಿ, ಗೌತಮ ಮೊದಲಾದ ಋಷಿಗಳು ಪರಮಾತ್ಮ, ಜೀವಾತ್ಮ ಮತ್ತು ಪ್ರಕೃತಿ ಇವು ಮೂರನ್ನೂ ಒಂದ ಕ್ಕಿಂತ ಇನ್ನೊಂದು ಭಿನ್ನವೆಂದೂ, ಅನಾದಿಯೆಂದೂ, ಹೇಳಿದ್ದಾರೆ. ವೇದವೂ ಕೂಡ, "**ದ್ವಾ ಸುಪರ್ಣಾ ಸಯುಜಾ.................**" [ಋಗ್ವೇದ 1-164-20] ಮುಂಡಕೋಪನಿಷತ್ [ಮುಂ. 3. ಖಂ 1 ಶ್ಲೋ 1] ಈ ಮಂತ್ರದ ಮೂಲಕ ಪರಮಾತ್ಮ, ಜೀವಾತ್ಮ ಮತ್ತು ಪ್ರಕೃತಿ ಇವುಗಳನ್ನು ಅನಾದಿ ಎಂದು ಹೇಳುತ್ತವೆ. ಮಹರ್ಷಿ ದಯಾನಂದರು, ಸತ್ಯಾರ್ಥಪ್ರಕಾಶದ ಎರಡನೇ ಸಮುಲ್ಲಾಸದಲ್ಲಿ ಈ ಮಂತ್ರದ ಸುಂದರವಾದ ವ್ಯಾಖ್ಯಾನವನ್ನು ಮಾಡಿದ್ದಾರೆ. ಇನ್ನೊಂದು ಕಡೆ ಯೋಗಾಭ್ಯಾಸ ಮಾಡಿರುವ ಶಂಕರಾಚಾರ್ಯರ ಅನುಯಾಯಿಗಳು ಕೇವಲ ಬ್ರಹ್ಮನನ್ನು ಮಾತ್ರ ಅನಾದಿ ಎಂದು ಹೇಳುತ್ತಾರೆ. ಜೀವ ಮತ್ತು ಪ್ರಕೃತಿಯನ್ನು ಇವರು ಅನಾದಿ ಎಂದು ಅಂಗೀಕರಿಸುವುದಿಲ್ಲ. ಮತ್ತೊಂದು ಕಡೆಯಲ್ಲಿ, ಜೈನರು

ಬಹಳ ಕಠೋರವಾದ ತಪಸ್ಸಿನೊಂದಿಗೆ ಯೋಗಾಭ್ಯಾಸವನ್ನು ಮಾಡುತ್ತಾರೆ. ಇವರಲ್ಲಿ ಕೆಲವರು ಯಾತ್ರೆಯ ಸಮಯದಲ್ಲಿ ವಾಹನಗಳನ್ನು ಉಪಯೋಗಿಸುವುದಿಲ್ಲ. ಕೇವಲ ನಡೆದುಕೊಂಡೇ ಬಹಳ ದೂರ ಪ್ರಯಾಣ ಮಾಡಿಕೊಂಡು ಹೋಗುತ್ತಾರೆ. ಇವರಲ್ಲಿ ಇನ್ನು ಕೆಲವರು ವಸ್ತ್ರವನ್ನು ಉಟ್ಟುಕೊಳ್ಳದೆಯೇ ಯೋಗಾಭ್ಯಾಸ ಮಾಡುತ್ತಾರೆ. ಜನರು ಇವರನ್ನು ಎಲ್ಲರಿಗಿಂತಲೂ ದೊಡ್ಡ ಸಿದ್ಧಯೋಗಿಗಳೆಂದು ಹೇಳುತ್ತಾರೆ. ಆದರೆ, ಈ ಜೈನ ಮತಾವಲಂಬಿಗಳು ಕೇವಲ ಜೀವ ಮತ್ತು ಪ್ರಕೃತಿಯನ್ನು ಮಾತ್ರ ಅಂಗೀಕರಿಸುತ್ತಾರೆ. ಪರಮಾತ್ಮನ ಅಸ್ಥಿತ್ವವನ್ನು ಇವರು ಒಪ್ಪುವುದಿಲ್ಲ.

ಈ ಪರಿಸ್ಥಿತಿಯಲ್ಲಿ, ಮೂರು ಅನಾದಿ ತತ್ವಗಳನ್ನು ನಂಬುವವರ ಸಿದ್ಧಾಂತವು ಸತ್ಯವೆಂದಾದರೆ, ಒಂದು ಅಥವಾ ಎರಡು ತತ್ವಗಳನ್ನು ನಂಬುವವರ ಸಿದ್ಧಾಂತಗಳು ಅಸತ್ಯವೆಂದಾಗುತ್ತದೆ. ಅಥವಾ ಒಂದು ಇಲ್ಲವೇ ಎರಡು ಅನಾದಿ ತತ್ವಗಳನ್ನು ನಂಬುವವರ ಸಿದ್ಧಾಂತವು ಸತ್ಯವೆಂದಾದರೆ, ಮೂರು ಅನಾದಿ ತತ್ವಗಳನ್ನು ನಂಬುವವರ ಸಿದ್ಧಾಂತವು ಸತ್ಯವಲ್ಲ ಎಂದಾಗುತ್ತದೆ. ಅಂತೂ ಉಭಯ ಪಕ್ಷಗಳ ಮತವೂ ಸತ್ಯವಾಗಲಿಕ್ಕೆ ಸಾಧ್ಯವಿಲ್ಲ.

ಒಂದು ಕಡೆಯಲ್ಲಿ ಮಹರ್ಷಿ ದಯಾನಂದರು, ಪರಮಾತ್ಮನನ್ನು ಸೃಷ್ಟಿಯ ಉತ್ಪತ್ತಿ, ಸ್ಥಿತಿ ಹಾಗೂ ಪ್ರಳಯ ಕರ್ತನೆಂದೂ, ಪರಮಾತ್ಮನಲ್ಲಿ ಜ್ಞಾನ ಮೊದಲಾದ ಅನೇಕ ಗುಣಗಳು ಇವೆಯೆಂದೂ, ಮತ್ತು ಜೀವಾತ್ಮನು ಅನಾದಿಯೆಂದೂ ಹೇಳುತ್ತಾರೆ. ಇನ್ನೊಂದು ಕಡೆಯಲ್ಲಿ ಇದಕ್ಕೆ ವಿರುದ್ಧವಾಗಿ ಸ್ವಾಮಿ ಯೋಗೇಶ್ವರಾನಂದರು, (ಇವರನ್ನು ಕೆಲವು ತಥಾಕಥಿಕ ಆರ್ಯಸಮಾಜಿಗಳು ಮಹಾನ್ ಯೋಗಿ ಮತ್ತು ತಮ್ಮ ಗುರುಗಳು ಎಂದು ಹೇಳುತ್ತಾರೆ) ಪರಮಾತ್ಮನು ಸೃಷ್ಟಿಕರ್ತಾ ಅಲ್ಲ ಎಂದೂ, ಅವನು ಗುಣರಹಿತನೆಂದೂ, ಜೀವಾತ್ಮನ ಯಾವ ಸ್ವತಂತ್ರ ಅಸ್ತಿತ್ವವೂ ಇಲ್ಲವೆಂದೂ ಹೇಳುತ್ತಾರೆ. ಮಹರ್ಷಿ ವ್ಯಾಸರು ಪರಮಾತ್ಮನನ್ನು ಸೃಷ್ಟಿ, ಸ್ಥಿತಿ ಮತ್ತು ಪ್ರಳಯ ಕರ್ತನೆಂದು ಹೇಳುತ್ತಾರೆ. **ಯಥಾ– "ಜನ್ಮಾದ್ಯಸ್ಯ ಯತಃ ॥"** [ವೇದಾಂತ ದರ್ಶನ 1-2] ಈಗ ಇವರಲ್ಲಿ ನಾವು ಮಹರ್ಷಿ ದಯಾನಂದರನ್ನು ಮತ್ತು ಮಹರ್ಷಿ ವ್ಯಾಸರನ್ನು ಯೋಗಿಗಳೆಂದು ಅಂಗೀಕರಿಸಬೇಕು. ಅಥವಾ ಸ್ವಾಮಿ ಯೋಗೇಶ್ವರಾನಂದರನ್ನು ಯೋಗಿಗಳೆಂದು ಒಪ್ಪಿಕೊಳ್ಳಬೇಕು. ಮೂವರೂ ಯೋಗಿಗಳೆಂದು ಹೇಳಲಿಕ್ಕೆ ಸಾಧ್ಯವಿಲ್ಲ.

ಇದೇ ರೀತಿಯಲ್ಲಿ ಮುಕ್ತಿಯ ವಿಷಯದಲ್ಲಿಯೂ ಪರಸ್ಪರ ವಿರುದ್ಧ ಸಿದ್ಧಾಂತಗಳು ಪ್ರಚಾರದಲ್ಲಿವೆ. ಕೆಲವರ ವಿಚಾರದಲ್ಲಿ ಮುಕ್ತಿಯ ಸ್ಥಿತಿಯಲ್ಲಿ ಜೀವಾತ್ಮನು ಬ್ರಹ್ಮನಲ್ಲಿ ಲೀನನಾಗುತ್ತಾನೆ. ಈ ರೀತಿ ಮೋಕ್ಷದಲ್ಲಿ ಜೀವಾತ್ಮನು

ತನ್ನ ಸ್ವತಂತ್ರ ಅಸ್ಥಿತ್ವವನ್ನು ಕಳೆದುಕೊಳ್ಳುತ್ತಾನೆ. ಇನ್ನು ಕೆಲವರ ದೃಷ್ಟಿಯಲ್ಲಿ, ಮೋಕ್ಷದಲ್ಲಿ ಜೀವಾತ್ಮನು ತನ್ನ ಮೂಲ ಸ್ವರೂಪದಲ್ಲಿ ಸ್ವತಂತ್ರ ಅಸ್ತಿತ್ವವನ್ನು ಇಟ್ಟುಕೊಂಡಿರುತ್ತಾನೆ. ಒಬ್ಬ ಹೇಳುತ್ತಾನೆ, ಮುಕ್ತಿಯ ಬಳಿಕವೂ ಜೀವಾತ್ಮನು ಪುನರ್ಜನ್ಮಕ್ಕೆ ಬರುತ್ತಾನೆ ಎಂದು. ಇನ್ನೊಬ್ಬ ಹೇಳುತ್ತಾನೆ, ಜೀವಾತ್ಮನು ಒಂದು ಬಾರಿ ಮೋಕ್ಷಕ್ಕೆ ಹೋದನಂತರ ಪುನಃ ಜನ್ಮ ತಾಳುವುದಿಲ್ಲ. ಕೆಲವರ ಸಿದ್ಧಾಂತಕ್ಕನುಸಾರವಾಗಿ ಮೋಕ್ಷವನ್ನು ಹೊಂದಿದ ಜೀವಾತ್ಮನು, ಪರಮಾತ್ಮನಂತೆ, ಸರ್ವಜ್ಞ, ಸರ್ವಶಕ್ತಿವಂತ, ಹಾಗೂ ಸೃಷ್ಟಿ, ಸ್ಥಿತಿ ಮತ್ತು ಪ್ರಳಯಗಳನ್ನು ಮಾಡಲು ಸಮರ್ಥನಾಗುತ್ತಾನೆ. ಆದರೆ, ಮಹರ್ಷಿದಯಾನಂದರು, ಇದನ್ನು ಅಸತ್ಯವೆಂದು ಹೇಳುತ್ತಾರೆ.

ಹೀಗೆ ಯೋಗಾಭ್ಯಾಸ ಮಾಡುವವರ ಸಾಧ್ಯವಾಗಿರುವ ಪರಮಾತ್ಮ ಅಥವಾ ಮೋಕ್ಷ, ಇವುಗಳ ಕಲ್ಪನೆಗಳು ಒಂದಕ್ಕೊಂದು ತೀರಾ ವಿರುದ್ಧವಾಗಿವೆ. ಯೋಗದ ಎಲ್ಲಾ ಮಾರ್ಗಗಳು ಸತ್ಯವೆಂದು ನಂಬುವುದರಲ್ಲಿ ಇನ್ನೊಂದು ದೋಷವೇನೆಂದರೆ, ಯಾವ ರೀತಿಯಲ್ಲಿ, ಈ ಮೊದಲು ಹೇಳಿದಂತೆ ಇವರ ಸಾಧ್ಯವು (ಪರಮಾತ್ಮ ಅಥವಾ ಮೋಕ್ಷ) ಪರಸ್ಪರ ವಿರುದ್ಧವಾಗಿದೆಯೋ, ಅದೇ ರೀತಿಯಲ್ಲಿ ಇವರ ಸಾಧನಗಳೂ ಒಂದಕ್ಕೊಂದು ತೀರಾ ವಿರುದ್ಧವಾಗಿವೆ. **"ತಮೇವ ವಿದಿತ್ವಾತಿ ಮೃತ್ಯುಮೇತಿ"** (ಯಜುರ್ವೇದ 31-18) ಅರ್ಥಾತ್, ಆ ಪರಮಾತ್ಮನನ್ನು ತಿಳಿದುಕೊಂಡ ಮೇಲೆ (ಜೀವರು) ಜನ್ಮ-ಮರಣಗಳ ದುಃಖದಿಂದ ಪಾರಾಗುತ್ತಾರೆ. ಈ ದುಃಖದಿಂದ ಪಾರಾಗುವುದಕ್ಕೆ ಬೇರೆ ಮಾರ್ಗವೇ ಇಲ್ಲ. ಇಂತಹ ವಿಚಾರವನ್ನು ವೇದಗಳ ಮೇಲೆ ನಂಬಿಕೆ ಇಟ್ಟವರು ಹೇಳುತ್ತಾರೆ. ಜೈನ ಸಿದ್ಧಾಂತಕ್ಕನುಸಾರವಾಗಿ, ಜೀವರನ್ನು ಬಿಟ್ಟು ಪರಮಾತ್ಮನೆಂಬ ಬೇರೆ ಯಾವ ಪದಾರ್ಥವೂ ಇಲ್ಲ, ಮತ್ತು ಮುಕ್ತಿಯ ಪ್ರಾಪ್ತಿಗೆ ಪರಮಾತ್ಮನನ್ನು ತಿಳಿದುಕೊಳ್ಳುವ ಅವಶ್ಯಕತೆಯೂ ಇಲ್ಲ.

ನವೀನ ವೇದಾಂತಿ, ಶಂಕರಾಚಾರ್ಯರ ಅನುಯಾಯಿಗಳು ತಮ್ಮನ್ನು ತಾವೇ ಬ್ರಹ್ಮನೆಂದು ಭಾವಿಸಿಕೊಂಡು ಯೋಗಾಭ್ಯಾಸವನ್ನು ಮಾಡಿದರೆ ಬೇಗನೇ ಮುಕ್ತಿಯು ಸಿಗುತ್ತದೆ ಎಂದು ಹೇಳುತ್ತಾರೆ. ಮಹರ್ಷಿ ದಯಾನಂದರು ಮತ್ತು ಮಹರ್ಷಿ ಪತಂಜಲಿ, ಇವರ ದೃಷ್ಟಿಯಲ್ಲಿ ಪರಮಾತ್ಮ, ಜೀವಾತ್ಮ ಮತ್ತು ಪ್ರಕೃತಿ ಇವುಗಳನ್ನು ಒಂದಕ್ಕೊಂದು ಭಿನ್ನವಾಗಿವೆ ಎಂಬುದನ್ನು ತಿಳಿದುಕೊಂಡು ಯೋಗಾಭ್ಯಾಸ ಮಾಡಿದರೆ ಮೋಕ್ಷದ ಪ್ರಾಪ್ತಿಯಾಗುತ್ತದೆ.

ಯೋಗದರ್ಶನಕಾರರು ಅಭ್ಯಾಸ ಮತ್ತು ವೈರಾಗ್ಯವನ್ನು ಯೋಗದ ಸಾಧನ ಎಂದು ಹೇಳುತ್ತಾರೆ. ಮಹರ್ಷಿ ವ್ಯಾಸರ ವಿಚಾರವೂ ಇದೇ ಆಗಿದೆ. ಯೋಗಿರಾಜ

ಶ್ರೀಕೃಷ್ಣ ಅಭ್ಯಾಸ ಮತ್ತು ವೈರಾಗ್ಯವೇ ಮನಸ್ಸನ್ನು ವಶದಲ್ಲಿ ಇಟ್ಟುಕೊಳ್ಳುವ ಉಪಾಯ ಎಂದು ಹೇಳಿದ್ದಾನೆ.

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಃ ಚಲಂ ।**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥**

[ಭಗವದ್ಗೀತೆ 6-35]

ಆದರೆ, ಮಹೇಶ ಯೋಗಿಯ ವಿಚಾರದಲ್ಲಿ, ಯೋಗದ ಸಿದ್ಧಿಗೆ ಅಭ್ಯಾಸ ಮತ್ತು ವೈರಾಗ್ಯಗಳ ಅವಶ್ಯಕತೆಯೇ ಇಲ್ಲ. ಇವರಿಗನುಸಾರವಾಗಿ ಹೇಳುವುದಾದರೆ, ಪ್ರಾಚೀನ ಗ್ರಂಥಗಳಲ್ಲಿ ಎಲ್ಲೆಲ್ಲಾ ಈ ರೀತಿಯಲ್ಲಿ ಅಭ್ಯಾಸ ಮತ್ತು ವೈರಾಗ್ಯಗಳು ಯೋಗದ ಸಾಧನಗಳು ಎಂದು ಬರೆದಿರುತ್ತದೆಯೋ ಅಲ್ಲೆಲ್ಲಾ ಇಂತಹ ಮಾತುಗಳನ್ನು ತೆಗೆದು ಬಿಡಬೇಕಾಗುತ್ತದೆ.

ಇಸ್ಲಾಂ ಮತಾನುಯಾಯಿಗಳು ಕೆಲವು ಸಾಧುಪ್ರಾಣಿಗಳನ್ನು 'ಅಲ್ಲಾ'ನ ಹೆಸರಿನಲ್ಲಿ ಕೊಂದು ತಿನ್ನುತ್ತಾರೆ. ಇದರಿಂದ ಮುಕ್ತಿ ಪಡೆಯಲಿಕ್ಕೆ ಸಹಾಯವಾಗುತ್ತದೆ ಎಂದು ಅವರ ನಂಬಿಕೆ. ಜೈನ ಮತಾನುಯಾಯಿಗಳು ತಮ್ಮಿಂದ ಪ್ರಾಣಿಗಳಿಗೆ ಲೇಶಮಾತ್ರವೂ ಹಿಂಸೆಯಾಗಬಾರದೆಂಬ ಭಾವನೆಯಿಂದ ಕುಡಿಯುವ ನೀರನ್ನು ಬಿಸಿಮಾಡುವುದಿಲ್ಲ. ಮತ್ತು ತಮ್ಮ ಬಿಸಿ ನಿಶ್ವಾಸದಿಂದ ಯಾವ ಸೂಕ್ಷ್ಮ ಜಂತುಗಳಿಗೂ ಹಾನಿಯಾಗಬಾರದೆಂದುಕೊಂಡು ತಮ್ಮ ಮುಖಕ್ಕೆ ವಸ್ತ್ರದ ಪಟ್ಟಿಯನ್ನು ಕಟ್ಟಿಕೊಂಡು ತಿರುಗುತ್ತಾರೆ. ಹಿಂಸೆಗೆ ಇವರು ಇಷ್ಟು ಹೆದರುತ್ತಾರೆ. ಈ ರೀತಿ ಜೀವಿಗಳು ಸಾಯುವುದನ್ನು ತಾವು ತಡೆಯದಿದ್ದರೆ ತಮಗೆ ಮುಕ್ತಿಯು ಲಭಿಸುವುದಿಲ್ಲವೆಂದು ಇವರಿಗೆ ಭಯ.

ಯೋಗದರ್ಶನಕಾರರ ಸಿದ್ಧಾಂತಕ್ಕನುಸಾರವಾಗಿ ಹೇಳುವುದಾದರೆ, ಪೂರ್ಣ ಬ್ರಹ್ಮಚರ್ಯೆಯ ಪಾಲನೆಯನ್ನು ಮಾಡದಿದ್ದರೆ ಮೋಕ್ಷವು ಸಿದ್ಧಿಸುವುದಿಲ್ಲ. ಯೋಗದರ್ಶನದಲ್ಲಿ ಇದಕ್ಕಾಗಿ ಜಾತಿ, ದೇಶ, ಕಾಲ, ಸಮಯಗಳ ಬಂಧನವಿಲ್ಲದೆ ಯಮ ನಿಯಮಗಳ ಪೂರ್ಣ ಪಾಲನೆ ಮಾಡುವ ಸಾರ್ವಭೌಮಮಹಾವ್ರತದ ಉಪದೇಶವನ್ನು ಕೊಟ್ಟಿದ್ದಾರೆ (ಯೋಗದರ್ಶನ 2-31) ರಜನೀಶನಂತಹ ತಥಾಕಥಿತ ಆಚಾರ್ಯರು ಇದಕ್ಕೆ ತೀರಾ ವಿರುದ್ಧ ಮಾತುಗಳನ್ನು ಪ್ರಚಾರ ಮಾಡುತ್ತಿದ್ದಾರೆ.

ಈ ರೀತಿ ಮೇಲೆ ಹೇಳಿದಂತೆ ಮೋಕ್ಷದ ಒಂದಕ್ಕೊಂದು ವಿರುದ್ಧವಾದ ಅನೇಕ ಸಾಧನ (ಉಪಾಯ)ಗಳು ಪ್ರಚಾರದಲ್ಲಿವೆ. ಇವುಗಳಲ್ಲಿ ಒಂದನ್ನು ಸತ್ಯವೆಂದು ಅಂಗೀಕರಿಸಿದರೆ, ಇನ್ನೊಂದನ್ನು ಸತ್ಯವೆಂದು ಸ್ವೀಕರಿಸಲಿಕ್ಕಾಗುವುದಿಲ್ಲ.

ಯಾವ ರೀತಿಯಲ್ಲಿ, ಯೋಗದ ವಿಷಯದಲ್ಲಿ ಮೇಲೆ ಹೇಳಿದಂತಹ ಒಂದು ಅಂಧಪರಂಪರೆಯು ಲೋಕದಲ್ಲಿ ಬೆಳೆದುಬಂದಿದೆಯೋ, ಅಂತಹ ಇನ್ನೊಂದು ಅಂಧಪರಂಪರೆಯು ಧರ್ಮದ ವಿಷಯದಲ್ಲಿ ಮಹರ್ಷಿದಯಾನಂದರ ಸಮಯದಲ್ಲಿ ಬೆಳೆದು ಬಂದಿತ್ತು. ಈ ಅಂಧ ಪರಂಪರೆಗನುಸಾರವಾಗಿ ಹೇಳುವುದಾದರೆ, ಎಲ್ಲಾ ಧರ್ಮಗಳೂ ಸತ್ಯವಾಗಿವೆ. ಯಾವ ಧರ್ಮವನ್ನೂ ಖಂಡಿಸುವುದು ಸರಿಯಲ್ಲ. ದಯಾನಂದರು ಈ ವಿಚಾರವನ್ನು ತೀವ್ರವಾಗಿ ಖಂಡಿಸಿದ್ದಾರೆ. ಆದರೂ, ಅವರ ಮುಂದೆ ಇಂತಹ ಒಂದು ಪ್ರಶ್ನೆಯು ಬಂದಿತ್ತು. ಅದು ಹೀಗಿದೆ.

**ಪ್ರಶ್ನೆ :–** ತಾವು ಎಲ್ಲಾ ಧರ್ಮಗಳ ಖಂಡನೆಯನ್ನು ಮಾಡುತ್ತಾ ಬಂದಿದ್ದಿರಿ. ಆದರೆ ಎಲ್ಲರಿಗೂ ತಮ್ಮ ತಮ್ಮ ಧರ್ವವು ಸರಿಯೆಂದೇ ತೋರುತ್ತದೆ. ಬೇರೆಯವರ ಧರ್ಮದ ಖಂಡನೆ ಮಾಡುವುದು ಒಳ್ಳೆಯ ಮಾತಲ್ಲ. ತಾವು ಎಲ್ಲಾ ಧರ್ಮಗಳಲ್ಲಿ ದೋಷಗಳನ್ನು ತೋರಿಸುತ್ತಿದ್ದೀರಿ, ತಮ್ಮ ಧರ್ಮದಲ್ಲಿ ಏನು ವಿಶೇಷ ಇದೆ, ಹೇಳಿರಿ.

**ಉತ್ತರ :–** ಧರ್ಮವು ಎಲ್ಲರಿಗೂ ಒಂದೆಯೋ, ಅಥವಾ ಬೇರೆ ಬೇರೆಯೋ? ಬೇರ ಬೇರೆ ಎಂದು ಹೇಳುವಿರಾದರೆ, ಇವು ಒಂದಕ್ಕೊಂದು ವಿರುದ್ಧ ವಾಗಿವೆಯೋ ಅಥವಾ ಅವಿರುದ್ಧವಾಗಿವೆಯೋ? ಒಂದಕ್ಕೊಂದು ವಿರುದ್ಧವಾಗಿವೆ ಎಂದು ಹೇಳುವಿರಾದರೆ, ಒಂದನ್ನು ಬಿಟ್ಟರೆ, ಇನ್ನೊಂದನ್ನು ಧರ್ಮ ಎಂದು ಹೇಳಲಿಕ್ಕೆ ಸಾಧ್ಯವಿಲ್ಲ. ಅವಿರುದ್ಧವಾಗಿವೆ ಎನ್ನುವಿರಾದರೆ, ಇವು ಬೇರೆ ಬೇರೆಯಾಗಿರುವುದು ವ್ಯರ್ಥವಾಗಿದೆ.

ಆದುದರಿಂದ, ಧರ್ಮ ಮತ್ತು ಅಧರ್ಮ ಎಲ್ಲಿರಿಗೂ ಒಂದೇ ಆಗಿದೆ. ಅನೇಕ ಧರ್ಮಗಳನ್ನು ಅಂಗೀಕರಿಸಲಿಕ್ಕೆ ಸಾಧ್ಯವಿಲ್ಲ. ಇಲ್ಲಿ ನಾನು ವಿಶೇಷವಾಗಿ ಹೇಳುವುದೇನೆಂದರೆ, ಎಲ್ಲಾ ಸಂಪ್ರದಾಯಗಳ ಉಪದೇಶಗಳನ್ನು ಯಾರಾದರೊಬ್ಬ ರಾಜನು ಸಂಗ್ರಹಮಾಡಿ ಒಟ್ಟಿಗೆ ಹಾಕಿದರೆ, ಇವು ಸಾವಿರಕ್ಕಿಂತ ಕಡಿಮೆಯಾಗಲಿಕ್ಕಿಲ್ಲ. ಆದರೂ ಕೂಡ, ಇವುಗಳ ಮುಖ್ಯ ಭಾಗಗಳನ್ನು ನೋಡಿದರೆ, ಇವು ನಾಲ್ಕೇ ಆಗಿವೆ. ಯಥಾ-ಪುರಾನೀ, ಕಿರಾನೀ, ಜೈನೀ ಮತ್ತು ಕುರಾನೀ. ಎಲ್ಲಾ ಸಂಪ್ರದಾಯಗಳೂ ಈ ನಾಲ್ಕರೊಳಗೇ ಬರುತ್ತವೆ. (ಸತ್ಯಾರ್ಥ ಪ್ರಕಾಶ ಹನ್ನೊಂದನೇ ಸಮುಲ್ಲಾಸ)

ಧರ್ಮದ ವಿಷಯದಲ್ಲಿ ದಯಾನಂದರು ಏನು ಹೇಳಿದ್ದಾರೆಯೋ ಯೋಗದ ವಿಷಯದಲ್ಲಿಯೂ ನಾವು ಹಾಗೆಯೇ ಎಂದು ತಿಳಿದುಕೊಳ್ಳಬೇಕು. ಯಾವ ರೀತಿಯಲ್ಲಿ ಧರ್ಮವು ಒಂದೇ ಆಗಿದೆಯೋ ಮತ್ತು ಬೇರೆ ಬೇರೆಯಾಗಿಲ್ಲವೋ

ತಥಾ ಅಧರ್ಮವೂ ಎಲ್ಲರಿಗೂ ಒಂದೇ ಆಗಿದೆಯೋ ಮತ್ತು ಬೇರೆ ಬೇರೆ ಯಾಗಿಲ್ಲವೋ ಅದೇ ರೀತಿಯಲ್ಲಿ ಯೋಗವೂ ಒಂದೇ ಇದೆ. ಅನೇಕ ಇಲ್ಲ. ಮಿಕ್ಕವುಗಳೆಲ್ಲಾ ಅಯೋಗಗಳು.

ಎಲ್ಲಾ ಯೋಗಮಾರ್ಗಗಳೂ ಸರಿಯಾಗಿಯೇ ಇವೆ, ಎಂದು ಹೇಳುವವರು, ತಮ್ಮ ವಿಚಾರದ ಸಮರ್ಥನೆಗಾಗಿ ಒಂದು ದೃಷ್ಟಾಂತವನ್ನು ಕೊಡುತ್ತಾರೆ. ಇವರು ಹೇಳುವ ಪ್ರಕಾರ, ಎಲ್ಲಾ ಯೋಗಮಾರ್ಗಗಳ ಮುಖ್ಯ ಪ್ರಯೋಜನವು ಒಂದೇ ಆಗಿದೆ. ಮೇಲಿನಿಂದ ಇವೆಲ್ಲಾ ಬೇರೆ, ಬೇರೆ, ಮತ್ತು ಪರಸ್ಪರ ವಿರುದ್ಧವಾಗಿವೆ ಎಂದು ಕಾಣುತ್ತವೆ. ಇವರು ಕೊಡುವ ದೃಷ್ಟಾಂತವು ಹೀಗಿದೆ : ರೋಹತಕಿನಿಂದ ಇಬ್ಬರು ದಿಲ್ಲಿಯ ಕೆಂಪು ಕೋಟೆಯನ್ನು ನೋಡಲಿಕ್ಕೆ ಹೊರಡುತ್ತಾರೆ. ಹೀಗೆ ಹೊರಟವರು, ಒಂದೇ ಮಾರ್ಗದಿಂದ ಹೋಗುವುದಿಲ್ಲ, ಬೇರೆ ಬೇರೆ ಮಾರ್ಗಗಳನ್ನು ಅನುಸರಿಸಿಕೊಂಡು ಹೋಗುತ್ತಾರೆ. ಆದರೂ ಕೂಡ, ಇವರು ಕೆಂಪುಕೋಟೆಗೆ ಬಂದು ತಲುಪುತ್ತಾರೆ. ಇದೇ ರೀತಿಯಲ್ಲಿ ಜನರು ಬೇರೆ ಬೇರೆ ಯೋಗಮಾರ್ಗಗಳನ್ನು ಅನುಸರಿಸಿಕೊಂಡು ಹೋದರೂ ಕೂಡ, ಅವರೆಲ್ಲರ ಗುರಿಯೂ ಮೋಕ್ಷವೊಂದೇ ಆಗಿದೆ.

ಇಂತಹ ದೃಷ್ಟಾಂತವನ್ನು ಕೊಡುವವರು, ತಮ್ಮ ದೃಷ್ಟಾಂತವು ತಮ್ಮ ಸಿದ್ಧಾಂತವನ್ನೇ ಖಂಡನೆ ಮಾಡುತ್ತಿದೆ ಎಂಬುದನ್ನು ತಿಳಿದಿಲ್ಲ. ಯಾಕೆಂದರೆ, ಇಬ್ಬರೂ ವ್ಯಕ್ತಿಗಳಿಗೆ, (ಅವರ ಪ್ರಯಾಣದ ಗುರಿ) ಕೆಂಪುಕೋಟೆಯ ಸ್ವರೂಪ ಮತ್ತು ಸ್ಥಾನ ಸಮಾನವಾಗಿವೆ. ಇವು ಬೇರೆ ಬೇರೆಯಲ್ಲ. ಆದರೆ, ಎಲ್ಲಾ ಯೋಗ ಮಾರ್ಗಗಳನ್ನೂ, ಸರಿಯೆಂದು ಹೇಳುವವರ ಪರಮಾತ್ಮ ಅಥವಾ ಮೋಕ್ಷದ ಕಲ್ಪನೆಗಳು ಪರಸ್ಪರ ವಿರುದ್ಧವಾಗಿವೆ.

ಇನ್ನೊಂದು ಮಾತು ಈ ದೃಷ್ಟಾಂತದಲ್ಲಿ ಕೆಂಪು ಕೋಟೆಯ ಕಡೆಗೆ ಹೋಗುವವರ ದಿಕ್ಕುಗಳು ಕೂಡ ಒಂದಕ್ಕೊಂದು ಅನುಕೂಲವಾಗಿವೆ. ಈ ದಿಕ್ಕುಗಳು ಬೇರೆ ಬೇರೆಯಾಗಿದ್ದರೆ, ಇವರು ಯಾವ ಜನ್ಮದಲ್ಲಿಯೂ ಕೆಂಪುಕೋಟೆಯನ್ನು ಹೋಗಿ ಮುಟ್ಟಲು ಸಾಧ್ಯವಿಲ್ಲ. ಬೇರೆ ಬೇರೆ ಪ್ರಕಾರದ ಯೋಗ ಮಾರ್ಗಗಳನ್ನು ಅನುಸರಿಸಿಕೊಂಡು ಹೋಗುವವರ ದಿಕ್ಕುಗಳು ಬೇರೆ ಬೇರೆಯಾಗಿವೆ. ಆದುದರಿಂದ ಇವರೆಲ್ಲಾ ಒಂದೇ ಗುರಿಯನ್ನು ಮುಟ್ಟಲು ಸಾಧ್ಯವಿಲ್ಲ.

**ಪ್ರಶ್ನೆ :–** ಎಲ್ಲಾ ಯೋಗಮಾರ್ಗಗಳೂ ಒಂದೇ, ಎಂದು ಅಂಗೀಕರಿಸಿದರೆ, ಏನು ತೊಂದರೆ?

**ಉತ್ತರ**:– ಇದರಿಂದ ತುಂಬಾ ಹಾನಿಯಾಗುತ್ತದೆ. ಯಥಾ—

1) ಒಂದು ಸಾವಿರ ಜನರು ಮುಕ್ತಿಯನ್ನು ಪಡೆಯುವ ಆಶೆಯಿಂದ ತಮ್ಮ ತನು, ಮನ, ಧನಗಳನ್ನೆಲ್ಲಾ ಇದಕ್ಕೆ ಹಾಕುತ್ತಾರೆ. ಆದರೆ, ಅವರಿಗೆ ಕೊನೆಗೆ ಸಿಗುವುದು ಮಾತ್ರ ದುಃಖವೇ ಆಗಿದೆ. ಯಾಕೆಂದರೆ, ಯಾವುದು ಮುಕ್ತಿಯ ಮಾರ್ಗವು ಅಲ್ಲವೋ ಅದನ್ನೇ ಅನುಸರಿಸಿಕೊಂಡು ಇವರು ಹೋಗಿದ್ದಾರೆ.

2) ಈ ಪರಸ್ಪರ ವಿರುದ್ಧ ವಿಚಾರಗಳನ್ನು ಕೇಳಿ ತುಂಬ ಮಂದಿ ಯೋಗಾಭ್ಯಾಸ, ಪರಮಾತ್ಮನ ಉಪಾಸನೆ, ಪುನರ್ಜನ್ಮದಲ್ಲಿ ವಿಶ್ವಾಸ ಇತ್ಯಾದಿಗಳನ್ನು ಬಿಟ್ಟು ನಾಸ್ತಿಕರಾಗುತ್ತಾರೆ.

3) ಕೆಲವು ಮಂದಿ ಬುದ್ಧಿ ಜೀವಿಗಳು, ಇಂತಹ ಮೂರ್ಖತಾಪೂರ್ಣ ವಿಚಾರಗಳನ್ನು ನೋಡಿ, ಎಲ್ಲಿ ಇಂತಹ ಪ್ರಚಾರಗಳು ನಡೆಯುತ್ತವೆಯೋ, ಅಲ್ಲಿಂದ ದೂರ ಹೋಗಿಬಿಡುತ್ತಾರೆ. ಯಾಕೆಂದರೆ, ಮೂರ್ಖರೂ ಬುದ್ಧಿವಂತರೂ ಒಮ್ಮತದಲ್ಲಿ ಇರಲಿಕ್ಕೆ ಸಾಧ್ಯವಿಲ್ಲ.

4) ಪ್ರಮಾಣ ಮತ್ತು ತರ್ಕವಿಲ್ಲದ ಸಿದ್ಧಾಂತಗಳನ್ನು ಕಣ್ಣುಮುಚ್ಚಿಕೊಂಡು ಅಂಗೀಕರಿಸಿ, ಅವುಗಳ ಪಾಲನೆ ಮಾಡುವ ಅಭ್ಯಾಸವಾಗಿ, ಜನರ ಬುದ್ಧಿಯು ಜಡವಾಗುತ್ತದೆ. ಇದಕ್ಕೆ ಕುಂಭಮೇಳದ ಒಂದೇ ಉದಾಹರಣೆ ಸಾಕು.

**ಪ್ರಶ್ನೆ** :– ಈ ಸಮಸ್ಯೆಯನ್ನು ಬಗೆಹರಿಸುವುದು ಹೇಗೆ?

**ಉತ್ತರ**:– ಯಾರಿಗೆ ನಿಜವಾದ ಯೋಗವಿದ್ಯೆ ಗೊತ್ತಿದೆಯೋ, ಅವನಿಗೆ ಮಾತ್ರ ಯೋಗ ಕಲಿಸುವ ಅಧಿಕಾರವು ಸಿಗಬೇಕು. ಬೇರೆಯವರಿಗೆ ಈ ಅಧಿಕಾರ ಸಿಗಬಾರದು.

**ಪ್ರಶ್ನೆ** :– ನಿಜವಾದ ಯೋಗವಿದ್ಯೆಯು ಯಾವುದೆಂದು ಗೊತ್ತಾಗುವುದು ಹೇಗೆ?

**ಉತ್ತರ**:– ಯೋಗದರ್ಶನಕಾರರಾದ ಮಹರ್ಷಿ ಪತಂಜಲಿಯು ನಿಜವಾದ ಯೋಗದ ಸ್ವರೂಪವನ್ನು ಹೇಳಿಕೊಟ್ಟಿದ್ದಾರೆ. ಯಾವುದು ಅದಕ್ಕನುಸಾರ ವಾಗಿದೆಯೋ ಅದು ನಿಜ. ಯಾವುದು ಅದಕ್ಕನುಸಾರವಾಗಿಲ್ಲವೋ ಅದು ನಿಜವಲ್ಲ.

**ಪ್ರಶ್ನೆ** :– ಯೋಗದರ್ಶನಕಾರರು ಹೇಳಿಕೊಟ್ಟ ಯೋಗದ ಸ್ವರೂಪವೇ ಸರಿ, ಎಂದು ನಾವು ಹೇಗೆ ಅಂಗೀಕರಿಸುವುದು?

**ಉತ್ತರ**:– ಅದು ವೇದಾನುಕೂಲವಾಗಿರುವುದರಿಂದ. ವೇದವು ಸರ್ವಜ್ಞ ಪರಮಾತ್ಮನ ಜ್ಞಾನವಾಗಿದೆ, ಇದರಲ್ಲಿ ಯಾವ ದೋಷವೂ ಇಲ್ಲ. ಇಷ್ಟರ ತನಕ ಸಾವಿರಾರು ಮಂದಿ ಋಷಿಗಳು ಪಾತಂಜಲ ಯೋಗವನ್ನು ಸತ್ಯವೆಂದು ಅಂಗೀಕರಿಸಿದ್ದಾರೆ. ಇದು ಸೃಷ್ಟಿಯ ನಿಯಮಕ್ಕನುಸಾರವಾಗಿಯೂ ಇದೆ. ಈ ಕಾರಣದಿಂದಲೂ ಇದನ್ನು ಸತ್ಯವೆಂದು ಒಪ್ಪಿಕೊಳ್ಳುವುದಕ್ಕೆ ಅಡ್ಡಿ ಇಲ್ಲ.

ಈಗ, ಲೋಕದಲ್ಲಿ ಪ್ರಚಾರದಲ್ಲಿರುವ ಎಲ್ಲಾ ಯೋಗ ಪದ್ಧತಿಗಳನ್ನು ಒಟ್ಟು ಸೇರಿಸಿ, ಅವುಗಳ ಅನುಯಾಯಿಗಳ ಸಭೆಕರೆದು, ನ್ಯಾಯದರ್ಶನದಲ್ಲಿ ಹೇಳಿರುವ ಪ್ರಕಾರ, ಪ್ರೇಮ ಪೂರ್ವಕವಾಗಿ, ಸತ್ಯಾಸತ್ಯಗಳನ್ನು ತಿಳಿದುಕೊಳ್ಳುವ ಉದ್ದೇಶದಿಂದ, (ಯಾರನ್ನಾದರೂ ಸೋಲಿಸಿ ಅವರಿಗೆ ಅಪಮಾನ ಮಾಡುವ ಉದ್ದೇಶದಿಂದಲ್ಲ) ಶಾಸ್ತ್ರಾರ್ಥವು ನಡೆಯಬೇಕು. ಆ ಮೇಲೆ, ಯಾವುದು ಸತ್ಯವೆಂದು ಸಿದ್ಧವಾಗುತ್ತದೆಯೋ, ಅದನ್ನು ಎಲ್ಲರೂ ಅಂಗೀಕರಿಸಬೇಕು. ಮತ್ತು ಅಸತ್ಯವನ್ನು ಬಿಟ್ಟುಬಿಡಬೇಕು. ತದನುಸಾರವಾಗಿಯೇ ಎಲ್ಲಾ ವಿದ್ಯಾಲಯಗಳಲ್ಲಿ ಯೋಗದರ್ಶನದ ಪಠನ-ಪಾಠನದ ಕಾರ್ಯವು ನಡೆಯಬೇಕು.

ಯೋಗದ ರಹಸ್ಯವನ್ನು ಚೆನ್ನಾಗಿ ತಿಳಿದುಕೊಳ್ಳುವುದಕ್ಕಾಗಿ, ವೇದಗಳು ಮತ್ತು ವೇದಾನುಕೂಲ ಆರ್ಷ ಗ್ರಂಥಗಳು, ಇವುಗಳ ಅಧ್ಯಯನ ಮತ್ತು ಅಧ್ಯಾಪನವೂ ಅಗತ್ಯವಾಗಿ ನಡೆಯಬೇಕು.

ಈ ಲೇಖನದಲ್ಲಿ, ಈಗ ಲೋಕದಲ್ಲಿ ಪ್ರಸಿದ್ಧವಾಗಿರುವ ಎಲ್ಲಾ ಯೋಗಮಾರ್ಗಗಳೂ ಸರಿ ಎಂಬ ವಿಚಾರದ ಖಂಡನೆಯನ್ನು ಮಾಡಲಾಗಿದೆ. ಯೋಗದ ವಿಕಾಸಕ್ಕಾಗಿ ಕೆಲವು ಉಪಾಯಗಳನ್ನೂ ಇಲ್ಲಿ ತಿಳಿಸಲಾಗಿದೆ.

## 14. ವಿದೇಹ ಮತ್ತು ಪ್ರಕೃತಿಲಯ ಯೋಗಿಯ ವಿಷಯದಲ್ಲಿರುವ ಭ್ರಾಂತಿ

ಇದು ಯೋಗದ ವಿಷಯದಲ್ಲಿರುವ 14ನೇ ಭ್ರಾಂತಿಯಾಗಿದೆ. ಇದಕ್ಕನುಸಾರವಾಗಿ, ವಿದೇಹ ಮತ್ತು ಪ್ರಕೃತಿಲಯ ಯೋಗಿಯ ಶರೀರವು ನಾಶವಾಗಿ ಹೋದ ನಂತರ, ಪ್ರಕೃತಿ ಮೊದಲಾದ ಜಡಪದಾರ್ಥಗಳನ್ನು ಆತ್ಮವೆಂದು ಭಾವಿಸಿ

ಅದರ ಉಪಾಸನೆಯನ್ನು ಮಾಡುತ್ತಾರೆ. ಮತ್ತು ಬಹಳ ದೀರ್ಘಕಾಲದ ತನಕ ಕೈವಲ್ಯ, ಎಂದರೆ ಮೋಕ್ಷದ ಅನುಭವವನ್ನು ಮಾಡಿಕೊಂಡಿರುತ್ತಾರೆ. ಈ ಮಾತುಗಳು ಎಷ್ಟು ತಾರ್ಕಿಕವಾಗಿವೆ ಎಂದು ನೋಡೋಣ.

ಯೋಗದರ್ಶನದಲ್ಲಿ, ಮುಖ್ಯವಾಗಿ ಎರಡು ಪ್ರಕಾರದ ಸಮಾಧಿಗಳ ವರ್ಣನೆ ಇದೆ. ಯಥಾ - **ಸಂಪ್ರಜ್ಞಾತ ಸಮಾಧಿ** ಮತ್ತು **ಅಸಂಪ್ರಜ್ಞಾತ ಸಮಾಧಿ.** ಅಸಂಪ್ರಜ್ಞಾತ ಸಮಾಧಿಯು ಎರಡು ವಿಧವಾಗಿದೆ. ಒಂದನೆಯದು "**ಭವಪ್ರತ್ಯಯ**" ಮತ್ತು ಎರಡನೆಯದು '**ಉಪಾಯ ಪ್ರತ್ಯಯ**'. ಈಗ ಭವ ಪ್ರತ್ಯಯ ಅಸಂಪ್ರಜ್ಞಾತ ಸಮಾಧಿ ಎಂದರೇನು ಎಂದು ನೋಡುವ.

**ಭವ ಪ್ರತ್ಯಯೋ ವಿದೇಹ ಪ್ರಕೃತಿಲಯಾನಾಮ್** II (ಯೋಗದರ್ಶನ 1-19) ಅರ್ಥಾತ್, ಭವ ಪ್ರತ್ಯಯ ಅಸಂಪ್ರಜ್ಞಾತ ಸಮಾಧಿಯು ವಿದೇಹ ಮತ್ತು ಪ್ರಕೃತಿಲಯ ಯೋಗಿಗಳಿಗೆ ಪ್ರಾಪ್ತವಾಗುತ್ತದೆ.

ಟೀಕಾಕಾರರಾದ ವಾಚಸ್ಪತಿಯವರು ಭವ ಶಬ್ದದ ವ್ಯಾಖ್ಯೆಯನ್ನು ಮಾಡುತ್ತಾ, "**ಭವಂತಿ ಜಾಯಂತೇಽಸ್ಯಾಂ ಜಂತವ ಇತಿ ಭವೋಽವಿದ್ಯಾ**" ಎಂದು ಹೇಳಿದ್ದಾರೆ. ಇದರ ಅರ್ಥವೇನೆಂದರೆ, ಯಾವ ಕಾರಣದಿಂದ ಜಂತುಗಳು ಹುಟ್ಟುತ್ತವೆಯೋ, ಅದಕ್ಕೆ '**ಭವ**' ಎಂದು ಹೆಸರು. ಇದೇ ಅವಿದ್ಯೆಯಾಗಿದೆ. '**ಪ್ರತ್ಯಯ**' ಎಂದರೆ ಇವರು '**ಕಾರಣ**' ಎಂದು ಹೇಳಿದ್ದಾರೆ. ದೇಹ ಪಾತವಾದ ನಂತರ ಪಂಚ ಮಹಾ ಭೂತಗಳನ್ನು ಅಥವಾ ಇಂದ್ರಿಯಗಳನ್ನು ಆತ್ಮನೆಂದು ಭಾವಿಸಿಕೊಂಡು ಅವುಗಳ ಉಪಾಸನೆಯನ್ನು ಮಾಡುವವರನ್ನು ವಿದೇಹಲಯ ಯೋಗಿಗಳೆಂದು ಹೇಳುತ್ತಾರೆ. ಇವರು ಹತ್ತು ಮನ್ವಂತರಗಳ ತನಕ ಸಮಾಧಿಯ ಸ್ಥಿತಿಯಲ್ಲಿ ಇದ್ದು ಕೈವಲ್ಯ, ಎಂದರೆ ಮೋಕ್ಷದ ಆನಂದವನ್ನು ಪಡೆಯುತ್ತಾರೆ, ಎಂದು ವಾಚಸ್ಪತಿಯವರ ವಿಚಾರವಾಗಿದೆ. ಇವರಿಗನುಸಾರವಾಗಿ ಹೇಳುವುದಾದರೆ, ಯಾರು ಸತ್ತನಂತರ, ಪ್ರಕೃತಿ, ಮಹತ್ತತ್ತ್ವ, ಅಹಂಕಾರ, ಹಾಗೂ ತನ್ಮಾತ್ರಗಳಲ್ಲಿ ಯಾವುದಾದರೊಂದನ್ನು ಆತ್ಮನೆಂದು ನಂಬಿ, ಅದರ ಉಪಾಸನೆಯನ್ನು ಮಾಡುತ್ತಾರೆಯೋ, ಅವರನ್ನು '**ಪ್ರಕೃತಿಲಯ**' ಯೋಗಿಗಳೆನ್ನುತ್ತಾರೆ. ಈ ಯೋಗಿಗಳು, ವಿದೇಹ ಯೋಗಿಗಳಿಗಿಂತಲೂ, ಅಧಿಕ ದೀರ್ಘಕಾಲ ಸಮಾಧಿಯ ಸ್ಥಿತಿಯಲ್ಲಿ ಇದ್ದುಕೊಂಡು ಮೋಕ್ಷದ ಅನುಭವವನ್ನು ಮಾಡುತ್ತಾರೆ.

ಅನೇಕ ಮಂದಿ ಟೀಕಾಕಾರರು ವಾಚಸ್ಪತಿಯವರ ಈ ವಿಚಾರವನ್ನು ಸಮರ್ಥಿಸಿದ್ದಾರೆ. ಕೆಲವರು ಮಾತ್ರ ಇಲ್ಲಿ ಸಮಾಧಿಯ ಸ್ಥಿತಿಯು ಸಂಭವವೆಂಬುದನ್ನು ಒಪ್ಪುವುದಿಲ್ಲ. ವಾಚಸ್ಪತಿಯವರ ವಿಚಾರಗಳು ಯೋಗದರ್ಶನ ಮತ್ತು

ವ್ಯಾಸಭಾಷ್ಯಗೆ ವಿರುದ್ಧವಾಗಿವೆ. ಆದುದರಿಂದ ಅವುಗಳನ್ನು ಅಂಗೀಕರಿಸುವುದಕ್ಕೆ ಸಾಧ್ಯವಿಲ್ಲ. ಅದು ಹೇಗೆಂದರೆ, ವಾಚಸ್ಪತಿಯವರು 'ಭವ' ಎಂದರೆ ಅವಿದ್ಯೆಯೆಂದೂ, ಮತ್ತು 'ಪ್ರತ್ಯಯ' ಎಂದರೆ ಕಾರಣವೆಂದೂ ಹೇಳಿದ್ದಾರೆ. ಇವರ ದೃಷ್ಟಿಯಲ್ಲಿ ಅವಿದ್ಯೆಯು ಈ ಭವ ಪ್ರತ್ಯಯ ಅಸಂಪ್ರಜ್ಞಾತ ಸಮಾಧಿಯ ಉಪಾಯವಾಗಿದೆ. ಇದು ಬಹಳ ಆಶ್ಚರ್ಯಕರವಾದ ಮಾತಾಗಿದೆ. ಯಾಕೆಂದರೆ, ಅವಿದ್ಯೆಯು ಎಂದಿಗೂ ಅಸಂಪ್ರಜ್ಞಾತ ಸಮಾಧಿಯ ಉಪಾಯವಾಗಲಿಕ್ಕೆ ಸಾಧ್ಯವೇ ಇಲ್ಲ. ಈ ಸಮಾಧಿಯ ಉಪಾಯವು ವಿವೇಕ ಮತ್ತು ವೈರತ್ಯಾಗವಾಗಿದೆ.

ಯೋಗದರ್ಶನಕಾರರು ಪರಮಾತ್ಮ, ಜೀವಾತ್ಮ ಮತ್ತು ಪ್ರಕೃತಿ ಇವುಗಳ ವಾಸ್ತವಿಕ ಜ್ಞಾನ ಮತ್ತು ವೈರಾಗ್ಯದಿಂದ ಅಸಂಪ್ರಜ್ಞಾತ ಸಮಾಧಿಯು ಸಿದ್ಧವಾಗುತ್ತದೆ ಎಂದು ಹೇಳುತ್ತಾರೆ. ವಾಚಸ್ಪತಿಯವರ ವಿಚಾರವು ಇದಕ್ಕೆ ತೀರಾ ವಿರುದ್ಧವಾಗಿದೆ.

**ವಿಪರ್ಯಯೋ ಮಿಥ್ಯಾಜ್ಞಾನಮತದ್ರೂಪಪ್ರತಿಷ್ಠಮ್ ॥**

(ಯೋಗದರ್ಶನ 1-8)

ಅರ್ಥಾತ್- ವಿಪರ್ಯಯವನ್ನೇ ಮಿಥ್ಯಾಜ್ಞಾನವೆಂದು ಹೇಳುತ್ತಾರೆ. ಈ ಮಿಥ್ಯಾಜ್ಞಾನವು ಸಮಾಧಿಯ ಶತ್ರುವಾಗಿದೆ. ಎಂದಿನ ತನಕ ಒಬ್ಬ ವ್ಯಕ್ತಿಯು ಜಡವನ್ನು ಚೇತನವೆಂದೂ, ಚೇತನವನ್ನು ಜಡವೆಂದೂ ತಿಳಿದುಕೊಂಡಿರುತ್ತಾನೆಯೋ, ಅಂದಿನ ತನಕ ಅವನಿಗೆ ಸಮಾಧಿಯು ಸಿದ್ಧಿಸಲಿಕ್ಕೆ ಸಾಧ್ಯವಿಲ್ಲ.

ವಿಪರ್ಯಯವು ಒಂದು ರೀತಿಯ ಚಿತ್ತವೃತ್ತಿಯಾಗಿದೆ. ಇದರಲ್ಲಿ ಯಥಾರ್ಥ ಜ್ಞಾನಕ್ಕೆ ತೀರಾ ವಿರುದ್ಧವಾದ ಜ್ಞಾನವು ಕಾಣುತ್ತದೆ. ಇದರಿಂದ ಸಮಾಧಿಯು ಅಸಂಭವ.

ಯೋಗದರ್ಶನ ಪಾದ ಒಂದು ಸೂತ್ರ ಹದಿನೆಂಟರ ಭಾಷ್ಯದಲ್ಲಿ ವ್ಯಾಸರು **"ತಸ್ಯ ಪರಂ ವೈರಾಗ್ಯಮುಪಾಯಃ"** ಎಂದು ಹೇಳಿದ್ದಾರೆ. ಎಂದರೆ, ವಾಸ್ತವಿಕ ಜ್ಞಾನದಿಂದಲೇ ಅಸಂಪ್ರಜ್ಞಾತ ಸಮಾಧಿಗೆ ಆವಶ್ಯಕವಾಗಿರುವ ಪರವೈರಾಗ್ಯವು ಉತ್ಪನ್ನವಾಗುತ್ತದೆ. ಅಜ್ಞಾನದಿಂದ ಅಲ್ಲ.

**"ಋತಂಭರಾ ತತ್ರಪ್ರಜ್ಞಾ "** ॥ (ಯೋಗದರ್ಶನ 1-48)

ಅಸಂಪ್ರಜ್ಞಾತ ಸಮಾಧಿಯ ಪರಿಪಕ್ವತೆಯ ಸ್ಥಿತಿಯಲ್ಲಿ ಬುದ್ಧಿಯು ಕೇವಲ ಸತ್ಯವನ್ನೇ ಧಾರಣೆ ಮಾಡುತ್ತದೆ ; ಅಸತ್ಯವನ್ನಲ್ಲ. **"ಅನ್ವರ್ಥಾ ಚ ಸಾ, ಸತ್ಯಮೇವ ಬಿಭರ್ತಿ, ನಚ ತತ್ರ ವಿಪರ್ಯಾಸ ಜ್ಞಾನ ಗಂಧೋಽಪ್ಯಸ್ತೀತಿ ।"** ಎಂದರೆ, ಋತಂಭರಾ

ಪ್ರಜ್ಞೆಯು ಅರ್ಥಾನುಸಾರವಾಗಿದೆ. ಅದು ಸತ್ಯವನ್ನೇ ಧಾರಣೆ ಮಾಡಿಕೊಂಡಿರುತ್ತದೆ. ಅಸತ್ಯದ ಗಂಧವೂ ಅಲ್ಲಿರುವುದಿಲ್ಲ. ಇದು ವ್ಯಾಸರ ಮಾತು.

ಯೋಗಾಭ್ಯಾಸಿಗೆ, ಅಸಂಪ್ರಜ್ಞಾತ ಸಮಾಧಿಯನ್ನು ಪ್ರಾಪ್ತಿಮಾಡಿಕೊಳ್ಳುವುದಕ್ಕೆ ಮುಂಚಿತವಾಗಿ ಸಂಪ್ರಜ್ಞಾತ ಸಮಾಧಿಯಲ್ಲಿ ನಿಪುಣನಾಗುವುದು ಅನಿವಾರ್ಯವಾಗಿದೆ. ಯಾರಲ್ಲಿ ಸಂಪ್ರಜ್ಞಾತ ಸಮಾಧಿಯ ಯೋಗ್ಯತೆ ಇಲ್ಲವೋ, ಅವನಿಂದ ಅಸಂಪ್ರಜ್ಞಾತ ಸಮಾಧಿಯನ್ನು ಪಡೆಯಲು ಸಾಧ್ಯವೇ ಇಲ್ಲ. ಮಹರ್ಷಿ ಪತಂಜಲಿ ಹಾಗೂ ವ್ಯಾಸರು ಅಸಂಪ್ರಜ್ಞಾತ ಸಮಾಧಿಯನ್ನು ಸಾಧಿಸುವ ವ್ಯಕ್ತಿಯ ಯೋಗ್ಯತೆ ಏನಿರಬೇಕೆಂದು ಹೇಳಿದ್ದಾರೆ. ಯಥಾ—

**ತತ್ಪರಂ ಪುರುಷಖ್ಯಾತೇರ್ಗುಣವೈತೃಷ್ಣ್ಯಮ್ ॥** (ಯೋಗದರ್ಶನ 1-16)

ಅರ್ಥಾತ್, ಜೀವಾತ್ಮ, ಮತ್ತು ಪರಮಾತ್ಮನ ಸಂಪೂರ್ಣ ಜ್ಞಾನವಾದಾಗ, ಪ್ರಕೃತಿ ಎಂದರೆ, ಸತ್ವ, ರಜ ಮತ್ತು ತಮೋಗುಣಗಳಿಂದಲೂ ಜೀವಾತ್ಮನ ಆಸಕ್ತಿಯು ಹೋಗಿಬಿಡುತ್ತದೆ. ಇದೇ ಉತ್ಕೃಷ್ಟವೈರಾಗ್ಯವಾಗಿದೆ. ಇದರ ತಾತ್ಪರ್ಯವೇನೆಂದರೆ, ಮೊದಲು ಸಂಪ್ರಜ್ಞಾತ ಸಮಾಧಿಯ ಪರಿಪಕ್ವ ಸ್ಥಿತಿಯನ್ನು ಸಂಪಾದಿಸಿ, ಆತ್ಮ ಮತ್ತು ಪರಮಾತ್ಮನ ವಾಸ್ತವಿಕ ಜ್ಞಾನವನ್ನು ಪಡೆದುಕೊಂಡಾಗ ಉತ್ಪನ್ನವಾಗುವ ವೈರಾಗ್ಯದಿಂದ ಅಸಂಪ್ರಜ್ಞಾತ ಸಮಾಧಿಯು ಸಿದ್ಧಿಸುತ್ತದೆ. ಆದುದರಿಂದ **'ಭವಪ್ರತ್ಯಯ'** ಮತ್ತು **'ಉಪಾಯ ಪ್ರತ್ಯಯ'** ಅಸಂಪ್ರಜ್ಞಾತ ಸಮಾಧಿಯ ಉಪಾಯ ಪರಮಾತ್ಮ, ಜೀವಾತ್ಮ, ಮತ್ತು ಪ್ರಕೃತಿಯ ಯಥಾರ್ಥ ಜ್ಞಾನ ಮತ್ತು ಪೂರ್ಣ ವೈರಾಗ್ಯವೆಂದು ಸಿದ್ಧವಾಗುತ್ತದೆ. ಈ ಎಲ್ಲಾ ಕಾರಣಗಳಿಂದ ವಾಚಸ್ಪತಿಯವರ ವಿಚಾರಗಳು ಅಸತ್ಯವೆಂದೂ ಸಿದ್ಧವಾಗುತ್ತದೆ.

ಪ್ರಕೃತಿ, ಮಹತ್ತತ್ತ್ವಾದಿ ಜಡ ಪದಾರ್ಥಗಳನ್ನು ಆತ್ಮನೆಂದು ತಿಳಿದುಕೊಂಡು ಅವುಗಳ ಉಪಾಸನೆ ಮಾಡುವವರು ಮೋಕ್ಷಕ್ಕೆ ಸಮಾನವಾದ ಸಿದ್ಧಿಯನ್ನು ಅನುಭವಿಸುತ್ತಾರೆ, ಎಂದು ವಾಚಸ್ಪತಿಯವರು ಹೇಳಿದ್ದಾರೆ. ಈ ಮಾತು ವೇದ ವಿರುದ್ಧವಾಗಿದೆ. ಯಜುರ್ವೇದವು ಹೇಳುತ್ತದೆ :–

**ಅಂಧತಮಃ ಪ್ರವಿಶಂತಿ ಯೋಽಸಂಭೂತಿಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ಸಂಭೂತ್ಯಾಂ ರತಾಃ ॥**

[ಯಜುರ್ವೇದ 40-9]

ಈ ಮಂತ್ರದಲ್ಲಿ, ಪ್ರಕೃತಿ ಮೊದಲಾದ ಜಡಪದಾರ್ಥಗಳ ಉಪಾಸನೆ ಮಾಡುವವರು ಅಜ್ಞಾನದಲ್ಲಿ ಮುಳುಗಿ ಕ್ಲೇಶಗಳನ್ನು ಅನುಭವಿಸುತ್ತಾರೆ, ಎಂದು ಹೇಳಿದೆ. ಮತ್ತು

ಮಹತ್ತತ್ತ್ವ, ಅಹಂಕಾರ, ತನ್ಮಾತ್ರಗಳು, ಪೃಥ್ವೀ ಮೊದಲಾದುವುಗಳ ಉಪಾಸನೆ ಮಾಡುವವರು ಇದಕ್ಕಿಂತಲೂ ಹೆಚ್ಚಿನ ಅಜ್ಞಾನದಲ್ಲಿ ಮುಳುಗಿ, ಬಹಳ ಅಧಿಕ ದುಃಖವನ್ನು ಅನುಭವಿಸುತ್ತಾರೆ. ಆದುದರಿಂದ ಪ್ರಕೃತಿ ಮೊದಲಾದ ಜಡವಸ್ತುಗಳ ಉಪಾಸನೆಯಿಂದ ಮುಕ್ತಿಯ ಆನಂದವು ಅಥವಾ ಅದಕ್ಕೆ ಸಮಾನವಾದ ಸುಖವು ಸಿಕ್ಕುವ ಪ್ರಶ್ನೆಯೇ ಇಲ್ಲ.

ಅವಿದ್ಯೆಯೇ ಎಲ್ಲಾ ದುಃಖಗಳಿಗೂ ಕಾರಣವೆಂದು ಮಹರ್ಷಿ ಪತಂಜಲಿ, ಯೋಗದರ್ಶನ ಪಾದ 2, ಸೂತ್ರ 4ರಲ್ಲಿ ಹೇಳಿದ್ದಾರೆ. ಆದುದರಿಂದ ಅವಿದ್ಯೆಯಿಂದ ಸುಖವು ಸಿಗುವ ಪ್ರಶ್ನೆಯೇ ಹುಟ್ಟುವುದಿಲ್ಲ. ವಾಚಸ್ಪತಿಯವರು, '**ವಿದೇಹ**' ಮತ್ತು '**ಪ್ರಕೃತಿಲಯ**' ಪ್ರಾಪ್ತವಾದ ಯೋಗಿಗಳು ಇಷ್ಟುವರ್ಷಗಳ ತನಕ ಸಮಾಧಿಯ ಸ್ಥಿತಿಯಲ್ಲಿ ಇರುತ್ತಾರೆ, ಮತ್ತು ಮೋಕ್ಷದಂತೆ ಆನಂದವನ್ನು ಅನುಭವಿಸುತ್ತಾರೆ, ಎಂದು ಹೇಳಿದ್ದಾರೆ. ಇದಕ್ಕೆ ವೇದ, ಅಥವಾ ವೇದಾನುಕೂಲ ಋಷಿಕೃತ ಗ್ರಂಥಗಳಲ್ಲಿ ಎಲ್ಲಿಯೂ ಪ್ರಮಾಣವು ಸಿಗುವುದಿಲ್ಲ.

ವಾಸ್ತವಿಕತೆ ಏನೆಂದರೆ, ವಾಚಸ್ಪತಿಯವರ ವಿಚಾರಗಳಿಗೆ ಆಧಾರವು-ಪುರಾಣಗಳಾಗಿವೆ. ಇವುಗಳನ್ನು ಪ್ರಮಾಣಗಳನ್ನಾಗಿ ಅಂಗೀಕರಿಸಲಿಕ್ಕೆ ಸಾಧ್ಯವಿಲ್ಲ. ಏಕೆಂದರೆ, ಪುರಾಣಗಳ ಅನೇಕ ವಿಚಾರಗಳು ವೇದ ಹಾಗೂ ತರ್ಕಕ್ಕೆ ವಿರುದ್ಧವಾಗಿವೆ.

ನಮ್ಮ ಪ್ರಾಚೀನ ಋಷಿಗಳು ಜೀವಾತ್ಮರ ಎರಡು ಸ್ಥಿತಿಗಳನ್ನು ಹೇಳಿದ್ದಾರೆ. ಯಥಾ— 1) ಮೋಕ್ಷ ಮತ್ತು 2) ಜನ್ಮ-ಮರಣಗಳ ಚಕ್ರದಲ್ಲಿ ಸಿಕ್ಕಿಕೊಂಡಿರುವುದು. ಜೀವಾತ್ಮರು ಮೋಕ್ಷಕ್ಕೆ ಯೋಗ್ಯರಾದಾಗ ಪರಮಾತ್ಮನು ಅವರನ್ನು ಮೋಕ್ಷಕ್ಕೆ ಕಳುಹಿಸುತ್ತಾನೆ ಅಷ್ಟರ ತನಕ ಜೀವಾತ್ಮರು ಜನ್ಮ ಮತ್ತು ಮರಣಗಳಿಗೆ ವಶರಾಗಿರುತ್ತಾರೆ. ಈ ಎರಡು ಸ್ಥಿತಿಗಳನ್ನು ಬಿಟ್ಟು ಮೂರನೆಯ ಸ್ಥಿತಿ-ಪೂರ್ಣಮೋಕ್ಷವೂ ಇಲ್ಲ, ಬಹು ದೀರ್ಘ ಕಾಲ ಪರ್ಯಂತ ಜನ್ಮ-ಮರಣಗಳ ರಗಳೆಯೂ ಇಲ್ಲ. ಇಂತಹ ಯಾವ ಸ್ಥಿತಿಯಲ್ಲಿಯೂ ಜೀವಾತ್ಮರು ಇರುವುದಿಲ್ಲ. ಆದುದರಿಂದ, ಈ ಮೂರನೆಯ ಸ್ಥಿತಿಯು ವಾಚಸ್ಪತಿಯವರ ಕಪೋಲಕಲ್ಪಿತ ವಿಚಾರ ಮಾತ್ರವಾಗಿದೆ. ಪ್ರಾಯಃ ಇವರಿಗೆ ವಾಯು ಪುರಾಣದಿಂದ ಇಂತಹ ವಿಚಾರಗಳು ಸಿಕ್ಕಿರಬೇಕು. ಯಾಕೆಂದರೆ ಇವರು ತಮ್ಮ ಟೀಕೆಯಲ್ಲಿ. ವಾಯು ಪುರಾಣದ ಮಾತುಗಳನ್ನೇ ವಿಶೇಷವಾಗಿ ಕೊಟ್ಟಿರುತ್ತಾರೆ. ಮನುಷ್ಯನ ಶರೀರಪಾತವಾದ ನಂತರ ಅವನು ಸಮಾಧಿಯಲ್ಲಿ ಇರುತ್ತಾನೆ, ಎಂಬ ಇವರ ಮಾತಿಗೆ ಅರ್ಥವಿಲ್ಲ. ಯಾಕೆಂದರೆ, ಒಬ್ಬ ಮನುಷ್ಯನು ಭಯಂಕರ ರೋಗಕ್ಕೆ ಒಳಗಾದಾಗ, ಅವನಿಗೆ ಪ್ರಜ್ಞೆಯೇ ಇರುವುದಿಲ್ಲ. ತಾನು ಎಲ್ಲಿದ್ದೇನೆ ಎಂದು ಅವನಿಗೆ ಗೊತ್ತಿರುವುದಿಲ್ಲ. ಇದೇ ರೀತಿ

ದೊಡ್ಡ ಆಘಾತವಾದಾಗಲೂ ಅವನು ಮೂರ್ಛಿತನಾಗುತ್ತಾನೆ. ಶಲ್ಯ ಚಿಕಿತ್ಸೆಯ ಸಮಯದಲ್ಲಿ, ಮೊದಲು ಅವನಿಗೆ ಔಷಧಿಯನ್ನು ಕೊಟ್ಟು ಮೂರ್ಛೆತಪ್ಪಿಸುತ್ತಾರೆ. ಬಳಿಕ ಅವನ ಶರೀರವನ್ನು ಕತ್ತರಿಸಿಹಾಕಿದರೂ, ಅಥವಾ ಸೀಳಿಹಾಕಿದರೂ ಅವನಿಗೆ ಗೊತ್ತೇ ಆಗುವುದಿಲ್ಲ. ಇಂತಹ ಸ್ಥಿತಿಯಲ್ಲಿ ಯಾರಿಗೂ, ಎಷ್ಟೇ ದೊಡ್ಡ ಸಿದ್ಧಯೋಗಿಯೇ ಇರಲಿ ಸಮಾಧಿಯನ್ನು ಹೊಂದಲು ಸಾಧ್ಯವಿಲ್ಲ. ಶರೀರವು ಇರುವಾಗ ಈ ಸ್ಥಿತಿಯಾದರೆ, ಶರೀರವು ನಾಶವಾಗಿ ಹೋದಮೇಲೆ, ಸಮಾಧಿಯು ಹೇಗೆ ಸಿದ್ಧಿಸಲು ಸಾಧ್ಯ? ಇದು ಅಸಂಭವ.

ಯೋಗದರ್ಶನದಲ್ಲಿ ವ್ಯಾದಿಯನ್ನು, ಸಮಾಧಿಯ ಶತ್ರುವೆಂದು ಹೇಳಿದ್ದಾರೆ. ವ್ಯಾದಿ = ರೋಗವು ಪ್ರಬಲವಾದಾಗ ಸಮಾಧಿಯು ಭಂಗವಾಗುತ್ತದೆ. ಆದರೆ, ಕೆಲವು ಜನರು ಯೋಗವನ್ನೂ ಸರಿಯಾಗಿ ತಿಳಿದುಕೊಳ್ಳದೆ, ಇತರ ಶಾಸ್ತ್ರಗಳನ್ನು ಓದುವ ಯೋಗ್ಯತೆಯನ್ನೂ ಪಡೆಯದೆ, ಪ್ರವಚನ ಮತ್ತು ವ್ಯಾಖ್ಯಾನಕ್ಕೆ ಸಿದ್ಧರಾಗಿ ಹೊರಡುತ್ತಾರೆ. ಇದರಿಂದ ಜಗತ್ತಿಗೆ ತುಂಬಾ ಹಾನಿಯಾಗುತ್ತದೆ.

## ಭವ ಪ್ರತ್ಯಯ, ವಿದೇಹ ಮತ್ತು ಪ್ರಕೃತಿಲಯ

ಈಗ ಭವ ಪ್ರತ್ಯಯಾಧಿ ಶಬ್ದಗಳ ಮೇಲೆ ಪುನಃ ಸ್ವಲ್ಪ ವಿಚಾರಮಾಡೋಣ, '**ಭವ**' ಎಂದರೆ, '**ಸಂಸಾರ**' ಮತ್ತು '**ಪ್ರತ್ಯಯ**' ಎಂದರೆ ಜ್ಞಾನ ಎಂದು ಅರ್ಥವಾಗುತ್ತದೆ. ಸಂಸಾರದಲ್ಲಿ ಜನ್ಮತಾಳಿದ ನಂತರ ಮನುಷ್ಯನು ರೋಗ, ವಿಯೋಗ, ಭೋಗ ಇತ್ಯಾದಿಗಳ ಮೂಲಕ ನಾನಾ ಪ್ರಕಾರದ ದುಃಖಿಗಳಿಗೆ ಒಳಗಾಗುತ್ತಾನೆ. ಇದು ದುಃಖಿಗಳಿಂದ ಪಾರಾಗಲು ಅವನು ಮನಸಾ, ವಾಚಾ ಮತ್ತು ಕರ್ಮಣಾ ಪೂರ್ಣಪ್ರಯತ್ನ ಮಾಡುತ್ತಾನೆ. ಅನೇಕ ಸಾಂಸಾರಿಕ ದುಃಖಗಳಲ್ಲಿ ಮೃತ್ಯುವಿನ ದುಃಖವೂ ಒಂದಾಗಿದೆ. ಪ್ರಾಯಃ ಪ್ರತಿಯೊಬ್ಬ ಮನುಷ್ಯನೂ ತಾನು ಸದಾ ಜೀವಿತನಾಗಿಯೇ ಇರಬೇಕೆಂದು ಬಯಸುತ್ತಾನೆ. ಆದರೆ, ಅವನು ಪ್ರಪಂಚದಲ್ಲಿ ಶರೀರಧಾರಿ ಮನುಷ್ಯ ಪ್ರಾಣಿಗಳೆಲ್ಲಾ ಮರಣವನ್ನು ಹೊಂದುವುದನ್ನು ನೋಡುತ್ತಿರುತ್ತಾನೆ. ಅವನ ಮನಸ್ಸಿನಲ್ಲಿ, ಈ ಪ್ರಾಣಿಗಳು ಮಾತ್ರವಲ್ಲದೇ ಪೃಥ್ವೀ, ಸೂರ್ಯ, ಚಂದ್ರಾದಿಗಳೂ ಖಂಡಿತವಾಗಿಯೂ, ವಿನಾಶವನ್ನು ಹೊಂದುತ್ತವೆ, ಎಂಬ ವಿಚಾರವು ಬರುತ್ತದೆ. ಈ ರೀತಿ ಸಂಸಾರದ ಉತ್ಪತ್ತಿ ಮತ್ತು ವಿನಾಶದ ಈ ಚಕ್ರವನ್ನು ನೋಡಿ, ಅವನು ಮೃತ್ಯು ಇತ್ಯಾದಿ ದುಃಖಿಗಳಿಂದ ಪಾರಾಗುವ ಉಪಾಯವೇನೆಂದು ಯೋಚಿಸತೊಡಗುತ್ತಾನೆ. ಸತ್ಯಾಸತ್ಯಗಳನ್ನು ನಿಶ್ಚಯಪೂರ್ವಕ ವಾಗಿ ತಿಳಿದುಕೊಳ್ಳುವುದಕ್ಕಾಗಿ ಅವನು ತುಂಬಾ ಕಷ್ಟ ಪಡುತ್ತಾನೆ. ಕೆಲವೊಮ್ಮೆ

ಆದಕ್ಕಾಗಿ ತನ್ನ ಸರ್ವಸ್ವವನ್ನೂ ಆಹುತಿಯನ್ನಾಗಿ ಕೊಟ್ಟುಬಿಡುತ್ತಾನೆ. ಮಹರ್ಷಿ ದಯಾನಂದರ ಜೀವನದಲ್ಲಿಯೂ ಇಂತಹ ಘಟನೆ ಆಗಿತ್ತು. ತನ್ನ ತಂಗಿಯ ಮೃತ್ಯುವನ್ನು ನೋಡಿ ಅವರು ತಮ್ಮ ಮೃತ್ಯುವಿನ ಬಗ್ಗೆ ವಿಚಾರಮಾಡತೊಡಗಿದರು. ಪುನಃ ಚಿಕ್ಕಪ್ಪನ ಸಾವನ್ನು ಅವರು ಕಣ್ಣಾರೆ ನೋಡುವಂತಾಯಿತು. ಇದರಿಂದ ಅವರಿಗೆ ಬಹಳ ದುಃಖವಾಯಿತು. ಈ ಮರಣದ ದುಃಖದಿಂದ ಪಾರಾಗುವ ಉದ್ದೇಶದಿಂದ ಅವರು ತಮ್ಮ ಎಲ್ಲಾ ಧನ-ಸಂಪತ್ತುಗಳನ್ನೂ ತ್ಯಾಗಮಾಡಿ ಮನೆಯನ್ನೂ ಬಿಟ್ಟು ಸತ್ಯಾನ್ವೇಷಣೆಗಾಗಿ ಹೊರಟುಹೋಗಿದ್ದರು.

ಇದೇ ರೀತಿ, ಇತರ ಮನುಷ್ಯರೂ ಕೂಡ, ಈ ಜನನ-ಮರಣಗಳ ಹಾಗೂ ಇತರ ನಾನಾ ದುಃಖಗಳ ಅನುಭವವನ್ನು ಪಡೆಯುತ್ತಾರೆ. ಮತ್ತು ಈ ಸಂಸಾರದ ರಹಸ್ಯವೇನೆಂಬುದನ್ನು ತಿಳಿದುಕೊಳ್ಳಲು ಬಯಸುತ್ತಾರೆ. ಈ ಸಂಸಾರವು ಮೊದಲಿನಿಂದಲೂ ಹೀಗೆಯೇ ಇದೆಯೋ, ಅಥವಾ ಇದರ ಉತ್ಪತ್ತಿಯಾಗಿದೆಯೋ? ಇದು ಶಾಶ್ವತವಾಗಿ ಉಳಿಯುತ್ತದೆಯೋ ಅಥವಾ ನಾಶವಾಗುತ್ತದೆಯೊ? ಇತ್ಯಾದಿ ಪ್ರಶ್ನೆಗಳು ಅವರನ್ನು ರಾತ್ರಿ ಹಗಲು ಕಾಡುತ್ತಿರುತ್ತವೆ. ಅವರು ಇದಕ್ಕೆ ಉತ್ತರವನ್ನೂ ಹುಡುಕುತ್ತಾರೆ. ಈ ಅನ್ವೇಷಣೆಯ ಪರಿಣಾಮವೇ ಪ್ರಕೃತಿ, ಜೀವ ಮತ್ತು ಪರಮಾತ್ಮನ ಪರಿಜ್ಞಾನ. ಈ ಜ್ಞಾನದಿಂದಲೇ ಪರವೈರಾಗ್ಯದ ಪ್ರಾಪ್ತಿ ಮತ್ತು ಇದರಿಂದ ಭವ-ಪ್ರತ್ಯಯ-ಅಸಂಪ್ರಜ್ಞಾತ ಸಮಾಧಿಯ ಸಿದ್ಧಿಯಾಗುತ್ತದೆ. ಎಂದರೆ, ಜಗತ್ತಿನ ಯಥಾರ್ಥ ಸ್ವರೂಪದ ಜ್ಞಾನದಿಂದಲೇ ಸಮಾಧಿಯು ಸಿದ್ಧಿಸುತ್ತದೆ. ಆದುದರಿಂದಲೇ, ಇದಕ್ಕೆ ಭವ-ಪ್ರತ್ಯಯ ಎಂದು ಹೇಳುತ್ತಾರೆ. "**ಭವಾತ್ ಪ್ರತ್ಯಯಃ, ಭವ ಪ್ರತ್ಯಯಃ** = ಭವದಿಂದ ಜ್ಞಾನದ ಪ್ರಾಪ್ತಿ ಇದೇ ಈ ವಾಕ್ಯದ ಸರಿಯಾದ ಅರ್ಥ. ಇದನ್ನು ಬಿಟ್ಟು, ಭವ ಎಂದರೆ ಅವಿದ್ಯೆ ಎಂದು ಹೇಳಿ, ಆ ವಿದ್ಯೆಯಿಂದ ಅಸಂಪ್ರಜ್ಞಾತ ಸಮಾಧಿಯ ಸಿದ್ಧಿಯಾಗುತ್ತದೆ ಎಂದು ಹೇಳುವುದು ಯೋಗದರ್ಶನದ ಸಿದ್ಧಾಂತಕ್ಕೆ ವಿರುದ್ಧವಾದ ಮಾತು. ಒಂದು ವೇಳೆ ಈ ಮಾತು ಯೋಗದರ್ಶನಕ್ಕನು ಸಾರವಾಗಿಯೇ ಇದೆ ಎಂದು ಹೇಳುವುದಾದರೆ, ಯೋಗದರ್ಶನಕಾರರು '**ವದತೋ ವ್ಯಾಘಾತಃ**' ಎಂಬ ದೋಷಕ್ಕೆ ಒಳಗಾಗುತ್ತಾರೆ. ಎಂದರೆ, ಇವರು ತಮ್ಮ ಮಾತನ್ನು ತಾವೇ ಖಂಡಿಸಿದಂತಾಗುತ್ತದೆ. ಯಾಕೆಂದರೆ, ಇವರು ಅವಿದ್ಯೆಯನ್ನು ಸಮಾಧಿಯ ಶತ್ರುವೆಂದು ಮೊದಲೇ ಸ್ಪಷ್ಟವಾಗಿ ಹೇಳಿಬಿಟ್ಟಿದ್ದಾರೆ. ಅವಿದ್ಯೆಯು ಇರುವಲ್ಲಿ ಸಮಾಧಿಯು ಇಲ್ಲ. ಸಮಾಧಿಯು ಇರುವಲ್ಲಿ ಅವಿದ್ಯೆಯು ನಿಲ್ಲುವುದಿಲ್ಲ.

'**ವಿದೇಹ**' ವೆಂದರೆ ಈ ದೇಹವು ಇರುವಾಗಲೇ ಇದು ಇಲ್ಲದೆ ಇರುವಂತಹ ಸ್ಥಿತಿ. ಒಬ್ಬ ಮನುಷ್ಯನು ತನ್ನ ಆತ್ಮವನ್ನು ತನ್ನ ಶರೀರದಿಂದ ಭಿನ್ನವೆಂದು ನಿಶ್ಚಯ

ಪೂರ್ವಕವಾಗಿ ತಿಳಿದುಕೊಂಡಾಗ, ಅವನು ಆ ದೇಹದಲ್ಲಿ ಇದ್ದರೂ ಕೂಡ, ಅವನ ಮಾನಸಿಕ ಸ್ಥಿತಿಯು ಅವನು ದೇಹದಲ್ಲಿ ಇಲ್ಲದ ಹಾಗೆಯೇ ಇರುತ್ತದೆ. ಕೆಲವೊಮ್ಮೆ ವ್ಯಕ್ತಿಯು, ತನ್ನ ಶರೀರದ ವಿಚಿತ್ರರಚನೆಯನ್ನು ನೋಡಿ ಇದರ ರಚನೆಯ ಕಾರ್ಯ ತನ್ನ ಸಾಮರ್ಥ್ಯಕ್ಕೆ ಹೊರಗಾಗಿದೆ, ಎಂದು ತಿಳಿದುಕೊಳ್ಳುತ್ತಾನೆ. ಆಗ ಈ ದೇಹದ ಮೇಲಿರುವ ಅವನ ಸ್ವಸ್ವಾಮಿಭಾವ-ಸಂಬಂಧವು ಕಳೆದು ಹೋಗುತ್ತದೆ. ಈ ಶರೀರವನ್ನು ಆತ ಪರಮಾತ್ಮನ ವಸ್ತುವೆಂದು ಭಾವಿಸುತ್ತಾನೆ. ದೇಹದಲ್ಲಿ ಇದ್ದರೂ ವಿದೇಹಿ ಎನಿಸಿಕೊಳ್ಳುತ್ತಾನೆ. ಪ್ರಕೃತಿ, ಜೀವ ಮತ್ತು ಪರಮಾತ್ಮನ ವಾಸ್ತವಿಕ ಜ್ಞಾನವನ್ನು ಅವನು ಪಡೆದುಕೊಂಡು ಹೋದಂತೆ, ತನ್ನ ದೇಹವನ್ನು ಮರೆಯಲಾರಂಭಿಸುತ್ತಾನೆ. ಆತನಿಗೆ ತನ್ನ ಬಲ, ಸೌಂದರ್ಯಾದಿಗಳ ಅಭಿಮಾನವು ಇರುವುದಿಲ್ಲ. ಜಗತ್ತಿನ ಎಲ್ಲಾ ಪದಾರ್ಥಗಳ ನಿಮಿತ್ತಕಾರಣ = ಆದಿ ಮೂಲವು ಪರಮಾತ್ಮನೆಂದು ಆತನು ಎಣಿಸುತ್ತಾನೆ. ವಿದೇಹ ಶಬ್ದದ ನಿಜವಾದ ಅರ್ಥವು ಇದೇ ಆಗಿದೆ. ವಿದೇಹ ಎಂದರೆ, ಶರೀರ ರಹಿತವಾದ ಸ್ಥಿತಿ ಎಂದುಕೊಳ್ಳುವುದು ಯೋಗದರ್ಶನದ ಪ್ರಕರಣಾನುಸಾರವಾಗಿ ಅಸಂಗತವಾಗಿದೆ. ವಾಚಸ್ಪತಿ ಮೊದಲಾದವರು, 'ಪ್ರಕೃತಿಲಯ' ವೆಂದರೆ ಪ್ರಕೃತಿ, ಮಹತ್ತತ್ತ್ವಾದಿಗಳನ್ನು ಆತ್ಮನೆಂದು ಭಾವಿಸಿಕೊಂಡು ಅವುಗಳ ಉಪಾಸನೆಯನ್ನು ಮಾಡುವುದು ಎಂದು ಹೇಳಿದ್ದಾರೆ. ಇದು ಸರಿಯಲ್ಲ. ಯಾಕೆಂದರೆ ಜಡಪದಾರ್ಥಗಳನ್ನು ಚೇತನವೆಂದು ಭಾವಿಸಿಕೊಂಡು ಅವುಗಳ ಉಪಾಸನೆಯನ್ನು ಮಾಡುವ ವ್ಯಕ್ತಿಯು ಎಂದೆಂದಿಗೂ ಸಮಾಧಿಯನ್ನು ಸಿದ್ಧಿಸಿಕೊಳ್ಳಲು ಸಮರ್ಥನಾಗಲಾರನು. ಪ್ರಕೃತಿಯ ಸೂಕ್ಷ್ಮಸ್ಥಿತಿಯನ್ನು ತಲ್ಲೀನನಾಗಿ ತಿಳಿದು ಕೊಳ್ಳುವವನು ಎಂದು ಪ್ರಕೃತಿಲಯ ಶಬ್ದದ ನಿಜವಾದ ಅರ್ಥವಾಗಿದೆ. ಪರಮಾತ್ಮ, ಜೀವಾತ್ಮ ಮತ್ತು ಪ್ರಕೃತಿಗಳ ಯಥಾರ್ಥ ಸ್ವರೂಪವನ್ನು ತಿಳಿದುಕೊಳ್ಳಬೇಕಾದರೆ, ನಿಜವಾಗಿಯೂ ತುಂಬಾ ಪರಿಶ್ರಮ ಮಾಡಬೇಕಾಗುತ್ತದೆ. ಈ ಮೂರು ತತ್ವಗಳ ವಿಶೇಷ ಪರಿಜ್ಞಾನವನ್ನು ಗಳಿಸುವುದು ಒಂದು ಅಸಾಧಾರಣ ಕಾರ್ಯವಾಗಿದೆ. ಎಂದಿನ ತನಕ ಒಬ್ಬ ಮನುಷ್ಯನು ಪ್ರಕೃತಿಯ ಯಥಾರ್ಥ ಸ್ವರೂಪವನ್ನು ಸರಿಯಾಗಿ ತಿಳಿದುಕೊಳ್ಳುವುದಿಲ್ಲವೋ ಅಂದಿನ ತನಕ ಅವನು ಅದನ್ನು ಬಿಟ್ಟು ನಿಜವಾಗಿ ಪರಮಾತ್ಮನ ಉಪಾಸನೆಯನ್ನು ಮಾಡಲಾರನು. ಪ್ರಕೃತಿಯ ವಾಸ್ತವಿಕತೆಯನ್ನು ತಿಳಿದುಕೊಳ್ಳುವುದಕ್ಕಾಗಿ ತನ್ನ ತನುಮನ ಮತ್ತು ಧನದಿಂದ ಪ್ರಯತ್ನ ಮಾಡುವ ಯೋಗಿಯು ಅದರ ಸ್ಥೂಲ ಹಾಗೂ ಸೂಕ್ಷ್ಮ ವಿಕಾರಗಳ ಚಿಂತನೆಯಲ್ಲಿ ತಲ್ಲೀನನಾಗುತ್ತಾನೆ. ಅವನ ಈ ಸ್ಥಿತಿಯನ್ನೇ ಪ್ರಕೃತಿಲಯ ಎಂದು ಹೇಳುತ್ತಾರೆ. ಕಪಿಲಾಚಾರ್ಯರು ಸೂಕ್ಷ್ಮಜಗತ್ತಿನಿಂದ ಸ್ಥೂಲಜಗತ್ತಿನ ಕಡೆಗೆ ಮತ್ತು ಸ್ಥೂಲಜಗತ್ತಿನಿಂದ ಸೂಕ್ಷ್ಮಜಗತ್ತಿನ ಕಡೆಗೆ ಹೋಗುವ ಮಾರ್ಗವನ್ನು

ತೋರಿಸಿದ್ದಾರೆ. (ಸಾಂಖ್ಯದರ್ಶನ 1-61, 62 ಮತ್ತು 65) ಇದರಿಂದ ವಿವೇಕವು ಪ್ರಾಪ್ತವಾಗುತ್ತದೆ. ಸಾರಾಂಶವೇನೆಂದರೆ, ಪ್ರಕೃತಿಯೊಡನೆ ಸಂಬಂಧವನ್ನು ಇಟ್ಟುಕೊಂಡು ಬಹಳ ಪರಿಶ್ರಮಮಾಡಿ ಅದರ ಸೂಕ್ಷ್ಮ ಸ್ವರೂಪವನ್ನು ತಿಳಿದುಕೊಳ್ಳುವ ಯೋಗಿಯನ್ನು ಪ್ರಕೃತಿಲಯ ಯೋಗಿ ಎನ್ನುತ್ತಾರೆ.

**ಪ್ರಶ್ನೆ** :- ಕೈವಲ್ಯದಂತೆ ಅನುಭವ ಮಾಡಿಕೊಳ್ಳುತ್ತಾರೆ, ಎಂದರೇನು?

**ಉತ್ತರ**:- ಯೋಗಿಯು, ಸಮಾಧಿಯ ಸ್ಥಿತಿಯಲ್ಲಿ ಇರುವ ತನಕ ಮೋಕ್ಷದ ಹಾಗೆ ಆನಂದವನ್ನು ಅನುಭವಿಸುತ್ತಾನೆ. ಸ್ಥೂಲ ಶರೀರವು ಇರುವಾಗಲೇ ಈ ಸ್ಥಿತಿಯು ಸಂಭವ. ಇದು ನಶಿಸಿ ಹೋದ ಮೇಲೆ ಅಲ್ಲ. ಸಮಾಧಿಯ ಸ್ಥಿತಿಯಲ್ಲಿ ಯೋಗಿಯು ದುಃಖವನ್ನು ಮರೆತು ಸುಖವನ್ನು ಅನುಭವಿಸುತ್ತಾನೆ. ಈ ಕಾರಣದಿಂದ ಈ ಸ್ಥಿತಿಗೆ ಕೈವಲ್ಯದಂತೆ ಅನುಭವ ಮಾಡಿಕೊಳ್ಳುತ್ತಾನೆ, ಎಂದು ಹೇಳುತ್ತಾರೆ.

ಭವ ಪ್ರತ್ಯಯ, ಮತ್ತು ಉಪಾಯ ಪ್ರತ್ಯಯ, ಇವು ಅಸಂಪ್ರಜ್ಞಾತ ಸಮಾಧಿಯ ಎರಡು ವಿಧಗಳಾಗಿವೆ. ಭವ ಪ್ರತ್ಯಯದ ಅರ್ಥವನ್ನು ಹೇಳಿ ಆಗಿದೆ. ಈಗ ಉಪಾಯ ಪ್ರತ್ಯಯ ವೆಂದರೇನೆಂದು ಹೇಳುತ್ತೇವೆ. ನಿಜವಾಗಿ ನೋಡಿದರೆ ಸಮಾಧಿಯನ್ನು ಸಿದ್ಧಿಸಿಕೊಳ್ಳಲಿಕ್ಕೆ ಕೆಲವು ವಿಶೇಷ ಉಪಾಯಗಳನ್ನು ಅನುಷ್ಠಾನ ಮಾಡಬೇಕಾಗುತ್ತದೆ. ಮೋಕ್ಷದ ಪ್ರಾಪ್ತಿಗೆ ಯಮ, ನಿಯಮ, ಆಸನ, ಪ್ರಾಣಾಯಾಮಾದಿ, ಹಾಗೂ ಶ್ರದ್ಧೆ, ವೀರ್ಯ, ಸ್ಮೃತಿ ಸಮಾಧಿ ಇತ್ಯಾದಿ ಉಪಾಯಗಳನ್ನು ಪ್ರಯೋಗಿಸಬೇಕಾಗುತ್ತದೆ. ಆದುದರಿಂದ ಇದಕ್ಕೆ ಉಪಾಯ ಪ್ರತ್ಯಯ ಎಂದು ಹೇಳುತ್ತಾರೆ.

ಈ ಲೇಖನದಲ್ಲಿ, ಭವಪ್ರತ್ಯಯ, ಉಪಾಯ ಪ್ರತ್ಯಯ, ವಿದೇಹ, ಪ್ರಕೃತಿಲಯ ಮೊದಲಾದ ಅನೇಕ ಶಬ್ದಗಳ ಮೇಲೆ ವಿಚಾರ ಮಾಡಿದ್ದೇವೆ. ಮತ್ತು ಈ ಎಲ್ಲಾ ಶಬ್ದಗಳ ನಿಜವಾದ ಅಭಿಪ್ರಾಯವನ್ನು ತಿಳಿಸುವುದಕ್ಕೂ ಪ್ರಯತ್ನಿಸಿದ್ದೇವೆ. ಇದರೊಟ್ಟಿಗೆ, ಇತ್ತೀಚೆಗಿನ ಕೆಲವು ಟೀಕಾಕಾರರ ತರ್ಕ ವಿರುದ್ಧ ಹಾಗೂ ಮಿಥ್ಯಾ ವಿಚಾರಗಳ ಖಂಡನೆಯನ್ನೂ ಮಾಡಿದ್ದೇವೆ.

## 15. ಹಠಯೋಗ ಪ್ರದೀಪಿಕೆಯು ಪಾತಂಜಲ ಯೋಗಕ್ಕೆ ಎಷ್ಟು ಅನುಕೂಲವಾಗಿದೆ?

ಈಗಿನ ಕಾಲದಲ್ಲಿ, ಹಠಯೋಗ ಪ್ರದೀಪಿಕಾ ಎಂಬ ಪುಸ್ತಕವನ್ನು ಯೋಗದ

ವಿಷಯದಲ್ಲಿ ಒಂದು ದೊಡ್ಡ ಗ್ರಂಥವೆಂದು ಹೇಳಲಾಗುತ್ತಿದೆ. ಈ ಗ್ರಂಥದಲ್ಲಿ, ಪಾತಂಜಲ ಯೋಗದರ್ಶನ ತಥಾ ಅನ್ಯ ಋಷಿಗಳ ಮತಾನುಸಾರವಾಗಿ ಯೋಗದ ಸ್ವರೂಪವನ್ನು ತಿಳಿಸಲಾಗಿದೆಯೆಂದೂ, ಪ್ರಾಚೀನ ಕಾಲದಲ್ಲಿ ಈ ಯೋಗವನ್ನೇ ಋಷಿಗಳು ತಾವು ಅನುಷ್ಠಾನ ಮಾಡುತ್ತಿದ್ದರು ಮತ್ತು ಅನ್ಯರಿಗೆ ಕಲಿಸಿಕೊಡುತ್ತಿದ್ದರೆಂದೂ ಕೆಲವರ ಅಭಿಪ್ರಾಯವಾಗಿದೆ. ಈ ಹಠಯೋಗ ಪ್ರದೀಪಿಕಾದ ಲೇಖಕರ ಹೆಸರು ಸ್ವಾತ್ಮಾರಾಮ ಎಂದಾಗಿದೆ. ಇದರ ಟೀಕೆಯನ್ನು ಬರೆದವರು ಡಾ|| ಜಮನ್‌ಲಾಲ್ ಗೌತಮ ಎಂಬವರು. ಈ ಪುಸ್ತಕವು ಯೋಗದ ವಿಷಯದಲ್ಲಿ ಎಷ್ಟು ಪ್ರಾಮಾಣಿಕವಾಗಿದೆ ಎಂಬುದನ್ನು ಈಗ ನೋಡುವ.

1. ಹಠಯೋಗ ಪ್ರದೀಪಿಕೆಯಲ್ಲಿ ಯಮ-ನಿಯಮಗಳ ಪರಿತ್ಯಾಗ

ಹಠಯೋಗ ಪ್ರದೀಪಿಕೆಯಲ್ಲಿ ಆಸನವು ಯೋಗದ ಪ್ರಥಮ ಅಂಗವಾಗಿದೆ. **(ಹಠಸ್ಯ ಪ್ರಥಮಾಂಗತ್ವಾದಾಸನಂ ಪೂರ್ವ ಮುಚ್ಯತೆ ||** ಉಪದೇಶ 1 ಶ್ಲೋಕ 19) ಯಮ-ನಿಯಮಗಳಿಗೆ ಇಲ್ಲಿ ಪ್ರಥಮ ಮತ್ತು ದ್ವಿತೀಯ ಸ್ಥಾನವು ದೊರೆತಿಲ್ಲ. ಪಾತಂಜಲ ಯೋಗದಲ್ಲಿ ಯಮ-ನಿಯಮಗಳ ಪಾಲನೆಗೆ ವಿಶೇಷ ಮಹತ್ವವನ್ನು ಕೊಡಲಾಗಿದೆ, ಇದಕ್ಕನುಸಾರವಾಗಿ ತ್ರಿಕರಣ ಪೂರ್ವಕವಾಗಿ, ಸರ್ವದಾ ಯಮ-ನಿಯಮಗಳ ಪಾಲನೆ ಮಾಡದೆ ಯಾರಿಗೂ ಯೋಗಿಯಾಗಲಿಕ್ಕೆ ಸಾಧ್ಯವಿಲ್ಲ. ಆದುದರಿಂದ, ಹಠಯೋಗ ಪ್ರದೀಪಿಕೆಯು ಪತಂಜಲಿ ಮೊದಲಾದ ಪ್ರಾಚೀನ ಋಷಿಗಳ ಮತಾನುಸಾರವಾಗಿಲ್ಲ.

**ಪ್ರಶ್ನೆ :–** ಹಠಯೋಗ ಪ್ರದೀಪಿಕೆಯಲ್ಲಿ, ಅಹಿಂಸಾದಿ ಹತ್ತು ಯಮ ತಪಸ್ಸು ಇತ್ಯಾದಿ ಹತ್ತು ನಿಯಮಗಳ ಉಪದೇಶವು (1-17, 18 ರಲ್ಲಿ) ಇದೆ. ಆದುದರಿಂದ, ಹಠಯೋಗದಲ್ಲಿ ಯಮ-ನಿಯಮಗಳನ್ನು ಬಿಟ್ಟಿದ್ದಾರೆ ಎಂದು ಹೇಳುವುದು ಸರಿಯಲ್ಲ.

**ಉತ್ತರ :–** ಹಠಯೋಗ ಪ್ರದೀಪಿಕೆಯಲ್ಲಿ ಉಪದೇಶ 1ರಲ್ಲಿ ಬರುವ ಈ ಶ್ಲೋಕಗಳನ್ನು ಕೆಲವರು ಪ್ರಕ್ಷಿಪ್ತವೆಂದು ಹೇಳುತ್ತಾರೆ. ಇವುಗಳನ್ನು ನಾವು ಯಮ-ನಿಯಮಗಳ ರೂಪದಲ್ಲಿ ಅಂಗೀಕರಿಸಿದರೆ, ಇಲ್ಲಿ ಪರಸ್ಪರ ವಿರೋಧವು ಉತ್ಪನ್ನವಾಗುತ್ತದೆ. ಹಠಯೋಗ ಪ್ರದೀಪಿಕೆಯ ಲೇಖಕರು ಆಸನವನ್ನು ಪ್ರಥಮ ಅಂಗವೆಂದು ಹೇಳಿದ್ದಾರೆ. ಆಸನವು ಯೋಗದ ಪ್ರಥಮಾಂಗವಾದರೆ, ಯಮ-ನಿಯಮಗಳು ಯೋಗದ ಪ್ರಥಮ ಮತ್ತು ದ್ವಿತೀಯ ಅಂಗಗಳಾಗಲಿಕ್ಕೆ ಸಾಧ್ಯವಿಲ್ಲ. ಈ ಮೇಲೆ ಹೇಳಿದ ಹಠಯೋಗ ಪ್ರದೀಪಿಕೆಯ ಶ್ಲೋಕಗಳು ಹೀಗಿವೆ :

**ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಕ್ಷಮಾಧೃತಿಃ ।**
**ದಯಾರ್ಜವಂ ಮಿತಾಹಾರಃ ಶೌಚಂ ಚೈವ ಯಮಾದಶ ॥**
**ತಪಃ ಸಂತೋಷ ಆಸ್ತಿಕ್ಯಂ ದಾನಮೀಶ್ವರ ಪೂಜನಮ್ ।**
**ಸಿದ್ಧಾಂತವಾಕ್ಯ ಶ್ರವಣಂ ಹ್ರೀಮತೀ ಚ ತಪೋಹುತಂ ।**
**ನಿಯಮಾ ದಶ ಸಂಪ್ರೋಕ್ತಾ ಯೋಗ ಶಾಸ್ತ್ರ ವಿಶಾರದೈಃ ।**

2. **ವಜ್ರೋಲೀಮುದ್ರಾ** :— ಹಠಯೋಗ ಪ್ರದೀಪಿಕೆಯಲ್ಲಿ ವಜ್ರೋಲೀ ಮುದ್ರೆಯ ವಿಷಯದಲ್ಲಿ ಕೆಳಗಿನಂತೆ ಬರೆದಿದೆ.

**ಸ್ವೇಚ್ಛಯಾ ವರ್ತಮಾನೋಽಪಿ ಯೋಗೋಕ್ತೈರ್ನಿಯಮೈರ್ವಿನಾ ।**
**ವಜ್ರೋಲಿಂ ಯೋ ವಿಜಾನಾತಿ ಸ ಯೋಗೀ ಸಿದ್ಧಿಭಾಜನಂ ॥**

(ಉಪದೇಶ - 3, ಶ್ಲೋಕ - 83)

ಅರ್ಥ — ಯೋಗ ಶಾಸ್ತ್ರದಲ್ಲಿ ಹೇಳಿರುವ ನಿಯಮಗಳ ಪಾಲನೆಯನ್ನು ಮಾಡದೆ ಇದ್ದರೂ ಮತ್ತು ಸ್ವೇಚ್ಛಾಪೂರ್ವಕವಾಗಿ ವ್ಯವಹರಿಸುತ್ತಾ ಇದ್ದರೂ ಕೂಡ, ವಜ್ರೋಲಿ ಮುದ್ರೆಯನ್ನು ಬಲ್ಲ ಯೋಗಿಯು ಯೋಗದ ಸಿದ್ಧಿಗಳಿಗೆ ಅರ್ಹನಾಗಿರುತ್ತಾನೆ.

ಈ ಮಾತು ಸರಿಯಲ್ಲ. ಯಾವ ವ್ಯಕ್ತಿಯು ಯೋಗದರ್ಶನದ ನಿಯಮಗಳ ಪಾಲನೆಯನ್ನು ಮಾಡುವುದಿಲ್ಲವೋ, ಅವನು ಯೋಗದ ಸಿದ್ಧಿಗಳನ್ನು ಹೇಗೆ ಪಡೆಯಬಹುದು? ಇದು ನಿರಾಧಾರವಾದ ಮಾತಾಗಿದೆ. ವಜ್ರೋಲೀ ಮುದ್ರೆಯ ಮೂಲಕ ಅನೇಕ ಮಂದಿ ಸ್ತ್ರೀ ಪುರುಷರನ್ನು ಆಚಾರಹೀನರನ್ನಾಗಿ ಮಾಡಲಾಗುತ್ತದೆ. ಇದರಿಂದ ಯೋಗದ ಸಿದ್ಧಿಯು ಸಾಧ್ಯವಿಲ್ಲ. ವಿಷಯ ಭೋಗದ ಸಿದ್ಧಿಯು ಸಂಭವವಾಗಿರಬಹುದು.

3. **ವೇದ ಶಾಸ್ತ್ರಗಳ ನಿಂದೆ** : — ಹಠಯೋಗ ಪ್ರದೀಪಿಕೆಯಲ್ಲಿ ವೇದ ಶಾಸ್ತ್ರಗಳ ನಿಂದೆ ಇದೆ. ಯಥಾ- ವೇದಶಾಸ್ತ್ರ ಮತ್ತು ಪುರಾಣಗಳು, ಇವೆಲ್ಲಾ ಸಾಮಾನ್ಯ ಗಣಿಕಾ ಸ್ತ್ರೀಯರಂತೆ ಇವೆ. ಶಾಂಭವೀ ಮುದ್ರೆಯು ಕುಲವಧುವಿನಂತೆ ಗೋಪನೀಯವಾಗಿದೆ.

ಪಾತಂಜಲ ಯೋಗ ದರ್ಶನದಲ್ಲಿ, ವೇದ ಮತ್ತು ವೇದಾನುಕೂಲ ಋಷಿಗ್ರಂಥಗಳ ಅಧ್ಯಯನವನ್ನು ಮಾಡಬೇಕೆಂದು ಹೇಳಿದ್ದಾರೆ. (ಯೋಗದರ್ಶನ 2-1) ಆದರೆ ಹಠಯೋಗ ಪ್ರದೀಪಿಕೆಯಲ್ಲಿ ಇದಕ್ಕೆ ವಿರುದ್ಧವಾದ ಮಾತು ಇದೆ. ಮನುಸ್ಮೃತಿಯಲ್ಲಿ "**ನಾಸ್ತಿಕೋ ವೇದ ನಿಂದಕ**" ಅರ್ಥಾತ್, ವೇದಗಳ ನಿಂದೆ

ಮಾಡುವವನು ನಾಸ್ತಿಕನಾಗಿದ್ದಾನೆ, ಎಂದು ಹೇಳಿದೆ. ಆದುದರಿಂದ, ಹಠಯೋಗ ಪ್ರದೀಪಿಕೆಯು ನಾಸ್ತಿಕರ ಗ್ರಂಥವಾಗಿದೆ. ಇದರಿಂದ ಯೋಗದ ಸಿದ್ಧಿಯು ಎಂದಿಗೂ ಸಾಧ್ಯವಿಲ್ಲವೆಂದು ಸ್ಪಷ್ಟವಾಗುತ್ತದೆ.

4. **ಯೋಗದ ಸಿದ್ಧಿಗೆ ಕುಂಡಲಿನಿಯ ಆವಶ್ಯಕತೆ** :— ಹಠಯೋಗ ಪ್ರದೀಪಿಕೆಯಲ್ಲಿ ಕುಂಡಲಿನಿಯನ್ನು ಎಲ್ಲಾ ಯೋಗಗಳ ಆಧಾರವೆಂದು ಹೇಳಿದ್ದಾರೆ. ನೋಡಿರಿ:- ಯಾವ ರೀತಿಯಲ್ಲಿ ಪರ್ವತ ಮತ್ತು ವನಗಳಿಂದ ಯುಕ್ತವಾದ ಈ ಪೃಥ್ವಿಯನ್ನು ಶೇಷನಾಗನು ಧಾರಣೆ ಮಾಡಿಕೊಂಡಿದ್ದಾನೆಯೋ, ಅದೇ ರೀತಿಯಲ್ಲಿ ಕುಂಡಲಿನಿಯು ಸಂಪೂರ್ಣ ಯೋಗ ತಂತ್ರವನ್ನು ಧಾರಣೆ ಮಾಡಿಕೊಂಡಿದೆ. ಈ ರೀತಿ, ಕುಂಡಲಿನಿಯನ್ನು ಎಲ್ಲಾ ಯೋಗಗಳ ಆಧಾರವೆಂದು ಇಲ್ಲಿ ಹೇಳಲಾಗಿದೆ. (ಉಪದೇಶ 3 ಶ್ಲೋಕ 1)

"ಯಾವ ರೀತಿಯಲ್ಲಿ ಬೀಗದ ಕೈಯಿಂದ ನಾವು ಕಪಾಟಿನ ಬಾಗಿಲನ್ನು ಹಠಾತ್ತಾಗಿ ತೆರೆಯುತ್ತೇವೆಯೋ ಅದೇ ರೀತಿಯಲ್ಲಿ ಯೋಗಿಯು ಕುಂಡಲಿನಿಯ ಮೂಲಕ ಮೋಕ್ಷದ ದ್ವಾರವನ್ನು ತೆರೆಯುತ್ತಾನೆ. ಯಾವ ಮಾರ್ಗದಿಂದ ಜೀವಾತ್ಮರು ನಿರಾಮಯ ಬ್ರಹ್ಮಸ್ಥಾನಕ್ಕೆ ಹೋಗುತ್ತಾರೆಯೋ, ಆ ಮಾರ್ಗದ ದ್ವಾರವನ್ನು ಪರಮೇಶ್ವರೀ ಕುಂಡಲಿನಿಯು ಆವರಿಸಿಕೊಂಡು ಮಲಗಿರುತ್ತಾಳೆ. ಇವಳು ಯೋಗಿಗಳಿಗೆ ಮೋಕ್ಷದಾಯಿನಿಯೂ, ಮಂದಮತಿಗಳಿಗೆ ಬಂಧನಕಾರಿಣಿಯೂ ಆಗಿರುತ್ತಾಳೆ. ಯಾರಿಗೆ ಇವಳ ರಹಸ್ಯವು ಗೊತ್ತಿದೆಯೋ ಅವರೇ ಯೋಗದ ರಹಸ್ಯವನ್ನು ಬಲ್ಲರು". (ಉಪದೇಶ 3 ಶ್ಲೋ. 105, 106, 107)

ಈ ಶ್ಲೋಕಗಳಲ್ಲಿ ಕುಂಡಲಿನಿಯನ್ನು ಮೋಕ್ಷಸಿದ್ಧಿಯ ಆಧಾರವೆಂದು ಹೇಳಿದ್ದಾರೆ. ಇಂತಹ ಮಾತುಗಳಿಗೆಲ್ಲಾ ವೇದ ಶಾಸ್ತ್ರಗಳಲ್ಲಿ ಯಾವ ಪ್ರಮಾಣವೂ ಇಲ್ಲ. ಒಂದು ವೇಳೆ ನಿಜವಾಗಿಯೂ ಕುಂಡಲಿನೀ ಶಕ್ತಿಯು ಯೋಗ ಹಾಗೂ ಮೋಕ್ಷದ ಆಧಾರವಾಗಿದ್ದರೆ ವೇದಗಳು, ದರ್ಶನಗಳು, ತಥಾ ಈಶ, ಕೇನಾದಿ ದಶೋಪನಿಷತ್ತುಗಳಲ್ಲಿ ಇದರ ಉಲ್ಲೇಖವು ಅವಶ್ಯಕವಾಗಿ ಬರುತ್ತಿತ್ತು. ಆದರೆ, ಈ ಎಲ್ಲಾ ಗ್ರಂಥಗಳಲ್ಲಿ, ಯೋಗದ ಪ್ರಕರಣಗಳಲ್ಲಿ ಎಲ್ಲಿಯೂ ಕುಂಡಲಿನಿಯ ಉಲ್ಲೇಖವು ಇಲ್ಲ. ಯೋಗದ ವಾಸ್ತವಿಕ ಸ್ವರೂಪವನ್ನು ಹೇಳುವ ಯೋಗದರ್ಶನದಲ್ಲಾಗಲೀ ಅಥವಾ ಇದರ ವ್ಯಾಸಭಾಷ್ಯೆಯಲ್ಲಾಗಲೀ ಕುಂಡಲಿನೀ ಶಕ್ತಿಯ ಹೆಸರುಕೂಡ ಬರುವುದಿಲ್ಲ. ಕುಂಡಲಿನೀ ಶಕ್ತಿಯು ನಿಜವಾಗಿಯೂ ಯೋಗಕ್ಕೆ ಸಾಧನವಾಗಿರುವುದು ಹೌದಾಗಿದ್ದರೆ, ಪತಂಜಲಿ, ಮುನಿಗಳು ಖಂಡಿತವಾಗಿಯೂ ಇದರ ಉಲ್ಲೇಖವನ್ನು ಮಾಡುತ್ತಿದ್ದರು.

ಯಜುರ್ವೇದದ ಮಂತ್ರ **"ವಿದ್ಯಾಂಚಾऽವಿದ್ಯಾಂಚ ಯಸ್ತದ್ವೇದೋಭಯಂ ಸಹ । ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾऽಮೃತ ಮಶ್ನುತೇ ॥** (ಅಧ್ಯಾಯ 40 ಮಂತ್ರ 14) ಇದರ ಅರ್ಥವನ್ನು ವಿವರಿಸುತ್ತಾ, ಮಹರ್ಷಿ ದಯಾನಂದರು, ಸತ್ಯಾರ್ಥ ಪ್ರಕಾಶದ 9ನೇ ಸಮುಲ್ಲಾಸದಲ್ಲಿ : ಯಾವ ಮನುಷ್ಯರು ವಿದ್ಯೆ ಮತ್ತು ಅವಿದ್ಯೆಯ ಸ್ವರೂಪವನ್ನು ಒಟ್ಟಿಗೆ ತಿಳಿದುಕೊಳ್ಳುತ್ತಾನೆಯೋ ಅವನು ಅವಿದ್ಯೆ, ಎಂದರೆ, ಕರ್ಮೋಪಾಸನೆಯ ಮೂಲಕ (ಭವಸಾಗರವನ್ನು)ಪಾರು ಮಾಡಿ, ವಿದ್ಯೆ ಎಂದರೆ, ಯಥಾರ್ಥ ಜ್ಞಾನದಿಂದ ಮೋಕ್ಷವನ್ನು ಪಡೆಯುತ್ತಾರೆ" ಎಂದು ಹೇಳಿದ್ದಾರೆ. ಪವಿತ್ರ ಕರ್ಮ, ಪವಿತ್ರ ಜ್ಞಾನ ಮತ್ತು ಪವಿತ್ರವಾದ ಉಪಾಸನೆಯಿಂದಲೇ ಮನುಷ್ಯರಿಗೆ ಮೋಕ್ಷವು ಸಿಗಲು ಸಾಧ್ಯವೆಂದು ಇದರ ತಾತ್ಪರ್ಯವಾಗಿದೆ.

ಈಶಾದಿ ದಶ ಉಪನಿಷತ್ತುಗಳಲ್ಲಿ ಪರಮಾತ್ಮನ ಸ್ವರೂಪ ಮತ್ತು ಅವನ ಪ್ರಾಪ್ತಿಯ ಉಪಾಯಗಳ ವರ್ಣನೆಗಳು ಇವೆ. ಆದರೆ ಕುಂಡಲಿನೀ ಶಕ್ತಿಯ ವರ್ಣನೆಯು ಎಲ್ಲಿಯೂ ಇಲ್ಲ. ಸಾಂಖ್ಯದರ್ಶನವನ್ನು ರಚಿಸಿದ ಕಪಿಲಾಚಾರ್ಯರು ಮೋಕ್ಷದ ಪ್ರಾಪ್ತಿಗೆ ಪುರುಷ ಮತ್ತು ಪ್ರಕೃತಿಯ ವಿವೇಕ, ವೈರಾಗ್ಯ ಮತ್ತು ಅಭ್ಯಾಸ ಇವುಗಳ ಅವಶ್ಯಕತೆ ಇದೆ ಎಂದು ಹೇಳಿದ್ದಾರೆ. ಆದರೆ, ಕುಂಡಲಿನಿಯ ಆವಶ್ಯಕತೆ ಇದೆ ಎಂದು ಇವರು ಕೂಡ ಎಲ್ಲಿಯೂ ಹೇಳಲಿಲ್ಲ. ಕಣಾದ ಮುನಿಗಳು ದ್ರವ್ಯಾದಿ ಆರು ಪದಾರ್ಥಗಳ ವಾಸ್ತವಿಕ ಜ್ಞಾನವೇ. ಮೋಕ್ಷ ಪ್ರಾಪ್ತಿಯ ಉಪಾಯವೆಂದು ಹೇಳಿದ್ದಾರೆ. ಇವರೂ ಕುಂಡಲಿನಿಯ ಹೆಸರೆತ್ತಲಿಲ್ಲ. ನ್ಯಾಯದರ್ಶನಕಾರರು ಹದಿನಾರು ಪದಾರ್ಥಗಳ ಯಥಾರ್ಥ ಜ್ಞಾನದಿಂದ ಮುಕ್ತಿ ಎಂದು ಹೇಳಿದ್ದಾರೆ. ಕುಂಡಲಿನಿಯ ಉಪಯೋಗದ ಕುರಿತು ಏನೂ ಹೇಳಿಲ್ಲ.

ಹಠಯೋಗ ಪ್ರದೀಪಿಕೆಯಲ್ಲಿ, ಕುಂಡಲಿನಿಯ ಇನ್ನೊಂದು ವರ್ಣನೆ ಈ ರೀತಿ ಇದೆ :—

".........ಆದುದರಿಂದ, ದಿನಂಪ್ರತಿ ಸುಖಪೂರ್ವಕವಾಗಿ ಸುಪ್ತವಾಗಿರುವ ಅರುಂಧತಿ(ಕುಂಡಲಿನಿ)ಯನ್ನು ಎಬ್ಬಿಸಿ ಚಲಿಸುವ ಅಭ್ಯಾಸ ಮಾಡಬೇಕು. ಒಂದು ಬಾರಿ ಇದರ ಸಂಚಲನೆಯು ಪ್ರಾರಂಭವಾಯಿತೆಂದರೆ, ಮತ್ತೆ ಯೋಗಿಯು ಎಲ್ಲಾ ರೋಗಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ, ಮತ್ತು ಮೋಕ್ಷದ ಸಿದ್ಧಿಗೆ ಪಾತ್ರನಾಗುತ್ತಾನೆ. ಹೆಚ್ಚೇಕೆ, ಅವನು ಲೀಲಾಪೂರ್ವಕವಾಗಿ ಕಾಲ (ಮೃತ್ಯು)ವನ್ನು ಜಯಿಸುತ್ತಾನೆ". (ಉಪದೇಶ 3 ಶ್ಲೋಕ 119, 120)

ಈ ಮಾತುಗಳಲ್ಲಿ ಏನೂ ಸತ್ಯಾಂಶವಿಲ್ಲ. ಆದರೂ ಕೂಡ, ಈಗ ತುಂಬಾ

ಮಂದಿ ಜನರು ಕುಂಡಲಿನಿಯನ್ನು ಜಾಗೃತಗೊಳಿಸುವ ವಿಧಿಯನ್ನು ಕಲಿಸುತ್ತಿದ್ದಾರೆ. ಕುಂಡಲಿನಿಯ ಜಾಗ್ರತಿಯಿಂದ ಸಮಾಧಿಯ ಡಂಭಾಚಾರವನ್ನು ತೋರಿಸುತ್ತಾರೆ. ಕುಂಡಲಿನೀ ವಿದ್ಯೆಯನ್ನು ಕಲಿಸುವ ಶಿಕ್ಷಕರು ಈ ಶಕ್ತಿಯು ಜಾಗ್ರತವಾದಾಗ ಶರೀರದಲ್ಲಿ ಅಶಾಂತಿಯು ಉತ್ಪನ್ನವಾಗುತ್ತದೆಯೆಂದೂ, ಆಗ ಯೋಗಿಯು ಅತ್ತಿತ್ತ ಕುಣಿಯಲು ಪ್ರಾರಂಭಮಾಡುತ್ತಾನೆ ಎಂದೂ ಹೇಳುತ್ತಾರೆ. ಇವರ ಕೆಲವು ಶಿಷ್ಯರು, ತಮ್ಮನ್ನು ತಾವೇ ಸುಪಾತ್ರರೆಂದು ಸಿದ್ಧಪಡಿಸುವುದಕ್ಕಾಗಿ ತಮ್ಮ ಶರೀರದಲ್ಲಿ ಅಶಾಂತಿಯ ಲಕ್ಷಣವನ್ನು ತೋರಿಸಲಿಕ್ಕೆ ಪ್ರಯತ್ನ ಮಾಡುತ್ತಾರೆ. ಯಾರ ಕುಂಡಲಿನಿಯು ಜಾಗ್ರತವಾಗುವುದಿಲ್ಲವೋ, ಅವರನ್ನು ಅಯೋಗ್ಯರೆಂದು ತಿಳಿದುಕೊಳ್ಳಲಾಗುತ್ತದೆ. ಈ ಅಪಮಾನದಿಂದ ತಮ್ಮನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಕೆಲವರು ತನ್ನೊಳಗೆ ಕುಂಡಲಿನೀ ಜಾಗ್ರತವಾಗಿದೆ ಎಂದು ಸುಳ್ಳುಹೇಳುತ್ತಾರೆ. ಕುಂಡಲಿನೀ ಜಾಗ್ರತವಾದವರಿಗೆ ಸಿದ್ಧಿಯೋಗಿ ಎಂಬ ಬಿರುದು ಸಿಗುತ್ತದೆ. ಈ ರೀತಿ ಅಸಂಖ್ಯ ಜನರು ಈ ಕುಂಡಲಿನಿಯ ಜಾಲದಲ್ಲಿ ಸಿಕ್ಕಿಕೊಂಡು ತಮ್ಮ ಹಾಗೂ ಇತರರ ಜೀವನವನ್ನು ವ್ಯರ್ಥವಾಗಿ ಹಾಳುಮಾಡುತ್ತಿದ್ದಾರೆ.

ಕುಂಡಲಿನಿಯ ವಿಷಯದಲ್ಲಿ ಇನ್ನೂ ಒಂದು ಮಾತು ಕೇಳಿಬರುತ್ತಿದೆ. ಕುಂಡಲಿನಿಯಿಂದ ಸಮಾಧಿಯು ಸಿದ್ಧಿಸುತ್ತದೆ, ಎಂದು ಹೇಳುವವರು ಪರಸ್ಪರ ಜಗಳ ಮಾಡುತ್ತಿದ್ದಾರೆ. ವಿದ್ಯಾನಂದ '**ವಿದೇಹ**'ರು ತಮ್ಮ ಪುಸ್ತಕ "**ಪರಮಯೋಗ**"ದಲ್ಲಿ ಸ್ತ್ರೀಯರ ಶರೀರದಲ್ಲಿ ಕುಂಡಲಿನೀ ಇಲ್ಲವೇ ಇಲ್ಲ ಎಂದು ಬರೆದಿದ್ದಾರೆ. ಇವರ ವಿಚಾರಕ್ಕನುಸಾರವಾಗಿ, ಸ್ತ್ರೀಯರು ಪರಮ ಯೋಗಿನಿಯರಾಗಲಿಕ್ಕೆ ಸಾಧ್ಯವೇ ಇಲ್ಲ. ಇದಕ್ಕೆ ವಿರುದ್ಧವಾಗಿ, ವಿದ್ಯೋತ್ತಮಾದೇವಿ ಎಂಬ ಸನ್ಯಾಸಿನಿಯು ತನ್ನ ಕುಂಡಲಿನಿಯು ಜಾಗ್ರತವಾಗಿದೆ ಎಂದು ಹೇಳುತ್ತಾಳೆ. ಕುಂಡಲಿನೀ ಯೋಗಿಗಳು ಈ ರೀತಿ ಪರಸ್ಪರ ವಿರುದ್ಧವಾದ ಮಾತುಗಳನ್ನಾಡುವುದರಿಂದ, ಇವರ ವಿಚಾರಗಳು ವಿಶ್ವಾಸಕ್ಕೆ ಯೋಗ್ಯವಲ್ಲ.

5. **ಜಿಹ್ವಾಮೂಲದಲ್ಲಿ ಛಿದ್ರಮಾಡುವ ವಿಧಾನ**:— ಹಠಯೋಗಪ್ರದೀಪಿಕೆಯಲ್ಲಿ ನಾಲಿಗೆಯ ಮೂಲಭಾಗವನ್ನು ಛೇದಿಸುವ ವಿಧಾನವನ್ನು ಕಲಿಸುತ್ತಾರೆ, ನೋಡಿರಿ : "ಬಹಳ ಹರಿತವಾದ ಶಸ್ತ್ರದಿಂದ ನಾಲಿಗೆಯ ಮೂಲಭಾಗ ದಲ್ಲಿರುವ ನಾಡಿಯನ್ನು ರೋಮದಷ್ಟು ಛೇದನ ಮಾಡಿ, ಸೈಂಧವ ಲವಣದ ಹುಡಿ ಮತ್ತು ಹರಡೆಯನ್ನು ಮಿಶ್ರಮಾಡಿ, ಅದರ ಚೂರ್ಣವನ್ನು ಆ ಜಾಗದಲ್ಲಿ ತಿಕ್ಕಬೇಕು. ಈ ರೀತಿ ಏಳು ದಿನಗಳ ತನಕ ಈ ಕ್ರಿಯೆಯನ್ನು ಮಾಡಿ, ನಂತರ ಪುನಃ ಮೊದಲಿನ ಹಾಗೆಯೇ ರೋಮದಷ್ಟು ಮಾತ್ರ ಛೇದನ

ಮಾಡಬೇಕು. ಹೀಗೆ ಕ್ರಮಪ್ರಕಾರ ದಿನಾಲೂ ಆರು ತಿಂಗಳು ಮಾಡುತ್ತಾಹೋದರೆ, ಜಿಹ್ವಾಮೂಲದ ಶಿಕಾ-ಬಂಧವು ನಶಿಸಿ ಹೋಗುತ್ತದೆ" (ಉಪದೇಶ 3 ಶ್ಲೋಕ34-36)

ಯೋಗ ಸಿದ್ಧಿಗೆ ಈ ರೀತಿ ಜಿಹ್ವಾಮೂಲದ ನಾಡಿಯ ಛೇದನವನ್ನು ಮಾಡಲಿಕ್ಕೆ ಪತಂಜಲಿ ಮೊದಲಾದ ಯೋಗಜ್ಞ ಋಷಿಗಳು ಹೇಳಲಿಲ್ಲ. ಯಾಕೆಂದರೆ, ಯೋಗ ಸಿದ್ಧಿಗೆ ಇದರ ಆವಶ್ಯಕತೆಯೇ ಇಲ್ಲ. ಇಂತಹ ಮಾತುಗಳೆಲ್ಲಾ ಜನರನ್ನು ಭ್ರಮೆಗೊಳಪಡಿಸುತ್ತವೆ. ಆದುದರಿಂದ, ಇವುಗಳ ಪ್ರಚಾರದಿಂದ ನಾವೂ ದೂರವಿರಬೇಕು, ಇತರರನ್ನೂ ದೂರದಲ್ಲಿ ಇಡಬೇಕು.

6. **ಖೇಚರೀ ಮುದ್ರೆ**:— ಮೇಲೆ ಹೇಳಿದ ರೀತಿಯಲ್ಲಿ ಛೇದನಾದಿ ಕ್ರಿಯೆಗಳಿಂದ ಜಿಹ್ವಾ-ವೃದ್ಧಿಯನ್ನು ಮಾಡಿಕೊಂಡು, ನಂತರ, ನಾಲಿಗೆಯನ್ನು ಮೇಲ್ಭಾಗದಿಂದ ಹಿಂದುಗಡೆಗೆ ಮಡಚಿ ಮೂರು ನಾಡಿಗಳ ಮಾರ್ಗದಲ್ಲಿ ಇಡಬೇಕು. ಇದನ್ನು ಖೇಚರೀ ಮುದ್ರೆ ಅಥವಾ ವ್ಯೋಮ ಚಕ್ರವೆಂದೂ ಕರೆಯುತ್ತಾರೆ.

ಈ ಮುದ್ರೆಯ ಮೂಲಕ ಚಿತ್ತವು ಕಣ್ಣಿನ ಭ್ರುಕುಟಿಗಳ ನಡುವೆ ಆಕಾಶದಲ್ಲಿ ವಿಹರಿಸುತ್ತದೆ. ಆದುದರಿಂದ, ಸಿದ್ಧಪುರುಷರು ಇದಕ್ಕೆ ಖೇಚರೀ ಎಂದು ಹೆಸರಿಟ್ಟಿದ್ದಾರೆ. (ಉಪದೇಶ 3 ಶ್ಲೋಕ 37-41)

**ಖೇಚರೀ ಮುದ್ರೆಯಫಲ** :— "ಖೇಚರೀ ಮುದ್ರೆಯ ಮೂಲಕ ತಾಲುಭಾಗದ ಮೇಲಿನ ಕಂಠದ್ವಾರವನ್ನು ಮುಚ್ಚಿದರೆ, ಕಾಮಿನಿಯರ ಸ್ಪರ್ಶವಾದರೂ ಕೂಡ, ಯೋಗಿಯ ಬಿಂದು ಕ್ಷರಿತವಾಗುವುದಿಲ್ಲ. ಒಂದು ವೇಳೆ ಬಿಂದುವು ಚಲಾಯಮಾನವಾದರೂ ಕೂಡ, ಅದು ಯೋನಿಮಂಡಲದೊಳಗೆ ಹೋದರೂ ಕೂಡ ವಜ್ರೋಲಿಯ ಬಂಧನದಿಂದಾಗಿ ಊರ್ಧ್ವ ಮುಖಿಯಾಗಿ ಹೋಗುತ್ತದೆ. ಮತ್ತು ತಾಲುವಿನ ವಿವರ ಭಾಗದಲ್ಲಿ, ತನ್ನ ಜಿಹ್ವೆಯನ್ನು ಉನ್ಮುಖೀಮಾಡಿಕೊಂಡ ಯೋಗಿಯು ಸೋಮಪಾನವನ್ನು ಮಾಡುತ್ತಾ ಒಂದೇ ಪಕ್ಷದಲ್ಲಿ (ಹದಿನೈದು ದಿನಗಳಲ್ಲಿ) ಮೃತ್ಯುವನ್ನು ಜಯಿಸುತ್ತಾನೆ. (ಉಪದೇಶ 3 ಶ್ಲೋಕ 42-43)

ಈ ಖೇಚರೀ ಮುದ್ರೆಯ ಮೂಲಕ ಯೋಗ ಸಿದ್ಧಿಯ ವಿಷಯದಲ್ಲಿ ವೇದಗಳಲ್ಲಾಗಲೀ ಅಥವಾ ವೇದಾನುಕೂಲ ಇತರ ಗ್ರಂಥಗಳಲ್ಲಾಗಲೀ ಎಲ್ಲಿಯೂ ಉಲ್ಲೇಖವು ಕಾಣುವುದಿಲ್ಲ. ವ್ಯಕ್ತಿಗತ ಅನುಭವವೂ ಇದಕ್ಕೆ ಸರಿಯಾಗಿ ಇಲ್ಲ. ಸರಳ ಮನಸ್ಸಿನ ಜನರನ್ನು ಸಿಕ್ಕಿಸಿಕೊಳ್ಳುವುದಕ್ಕಾಗಿ ಈ ಖೇಚರೀ ಮುದ್ರೆಯ ಬಲೆಯನ್ನು ತಯಾರಿಸಿರಬೇಕೆಂದು ಅನ್ನಿಸುತ್ತದೆ. ಖೇಚರೀ ಮುದ್ರೆಯನ್ನು ಸಿದ್ಧಿಸಿದ

ವ್ಯಕ್ತಿಗೆ ಕಾಮಿನಿಯರ ಸ್ಪರ್ಶವಾದರೂ ಅವನ (ವೀರ್ಯ)ಬಿಂದುವು ಕ್ಷರಿತವಾಗುವುದಿಲ್ಲ. ಮತ್ತು ಒಂದು ವೇಳೆ ಹಾಗೆ ಆದರೂ ಕೂಡ, ವಜ್ರೋಲಿಯ ಮೂಲಕ ಅದನ್ನು ಮೇಲೆ ಎಳೆಯುತ್ತಾ ಹೋಗಬಹುದು, ಎಂದು ಮೇಲೆ ಹೇಳಿದೆ. ಇದರಿಂದ ಹಠಯೋಗ ಪ್ರದೀಪಿಕೆಯಲ್ಲಿ ವ್ಯಭಿಚಾರದ ಸ್ಪಷ್ಟವಿಧಾನಗಳಿವೆ, ಎಂದು ತಿಳಿದುಬರುತ್ತದೆ. ಒಂದು ವೇಳೆ ಯಾರಾದರೂಬ್ಬ ವ್ಯಕ್ತಿಯು ವ್ಯಭಿಚಾರ ಮಾಡುತ್ತಿರುವಾಗ ಸಿಕ್ಕಿಬಿದ್ದರೆ, ಆಗ, ಅವನು ತನ್ನ ವೀರ್ಯದ ಸ್ಖಲನವಾಗುವುದಿಲ್ಲ. ಯಾಕೆಂದರೆ, ನಾನು ಖೇಚರೀ ಮುದ್ರೆಯನ್ನು ಸಿದ್ಧಿಸಿಕೊಂಡಿದ್ದೇನೆ ; ಒಂದು ವೇಳೆ ವೀರ್ಯ ಸ್ಖಲನವಾದರೂ, ಅದನ್ನು ನಾನು ವಜ್ರೋಲಿಯ ಮುಖಾಂತರ ಮೇಲಲೆಳೆದುಕೊಳ್ಳುತ್ತೇನೆ; ಹೀಗಾಗಿ ತನಗೆ ಯಾವ ದೋಷವೂ ತಾಗುವುದಿಲ್ಲ, ಎಂದು ಹೇಳಬಹುದಾಗಿದೆ. ಆದುದರಿಂದ, ಅನೇಕ ಮಂದಿ ಜನರು ಖೇಚರೀ ಮುದ್ರೆ ಮತ್ತು ವಜ್ರೋಲಿಯ ಹೆಸರಿನಲ್ಲಿ ತಮ್ಮ ಕಾಮವಾಸನೆಯನ್ನು ತೃಪ್ತಿಮಾಡಿಕೊಳ್ಳುತ್ತಿದ್ದಾರೆ. ಬೇರೆಯವರಿಗೂ ಇವರು ಈ ವಿದ್ಯೆಯನ್ನು ಕಲಿಸಿಕೊಡುತ್ತಿದ್ದಾರೆ. ಇನ್ನು ಸೋಮರಸ ಪ್ರಾಪ್ತಿಯ ಮಾತು ; ಇದೂ ಕೂಡ ಸತ್ಯವಲ್ಲ. ಯಾಕೆಂದರೆ, ನಾಲಿಗೆಯನ್ನು ಮೇಲ್ಗಡೆ ಕಳಚಿ ಇಟ್ಟರೆ, ಪರಮಾತ್ಮನ ಧ್ಯಾನದಿಂದ ಪ್ರಾಪ್ತವಾಗುವ ರಸವೂ ನಶಿಸಿ ಹೋಗುತ್ತದೆ. ಇದು ಪ್ರತ್ಯಕ್ಷ ಅನುಭವದ ಮಾತು. ಹೀಗೆ, ಖೇಚರೀ ಮುದ್ರೆಯ ಪ್ರಚಾರಕರು ಅಸಂಖ್ಯಮಂದಿ ಜನರನ್ನು ಪರಮಾತ್ಮನ ಧ್ಯಾನದಿಂದ ದೊರೆಯುವ ಆನಂದದಿಂದ ವಂಚಿತರನ್ನಾಗಿ ಮಾಡಿದ್ದಾರೆ.

7. **ಈ ಮುದ್ರೆಗಳನ್ನು ಕಲಿಸಿದವನು ಈಶ್ವರನು** :— ಹಠಯೋಗ ಪ್ರದೀಪಿಕೆಯ ಲೇಖಕರು, ಈ ಮುದ್ರೆಗಳನ್ನೆಲ್ಲಾ ಪ್ರಾರಂಭದಲ್ಲಿ ಕಲಿಸಿಕೊಟ್ಟವನು ಈಶ್ವರನೆಂದು ಹೇಳುತ್ತಾರೆ. ಇದು ನಿರಾಧಾರವಾದ ಮಾತು. ಇದರ ಪ್ರಚಾರಕರ ಮುಖ್ಯ ಉದ್ದೇಶ್ಯವು ವಿಷಯ-ಭೋಗಗಳಲ್ಲಿ ತಲ್ಲೀನರಾಗಿರುವುದು, ಹಾಗೂ ಯಾರಿಗೆ ಇದರಲ್ಲಿ ಆಸಕ್ತಿ ಇದೆಯೋ ಅವರನ್ನು ವಂಚಿಸಿ ಅವರ ಧನ-ಸಂಪತ್ತನ್ನು ಹರಣಮಾಡುವುದು ಎಂದು ಸ್ಪಷ್ಟವಾಗುತ್ತದೆ. (ಉಪದೇಶ 3 ಶ್ಲೋಕ 129)

8. **ಪ್ರಾಣಾಯಾಮ** :— ಹಠಯೋಗದ ಆಚಾರ್ಯರು ತಮ್ಮ ಶಿಷ್ಯರಿಗೆ ಪ್ರಾತಃ, ಮಧ್ಯಾಹ್ನ, ಸಾಯಂ ಮತ್ತು ಮಧ್ಯರಾತ್ರಿಯ ಕಾಲದಲ್ಲಿ ಎಂಬತ್ತು, ಎಂಬತ್ತು ಕುಂಭಕಗಳನ್ನು ಅಭ್ಯಾಸ ಮಾಡಬೇಕೆಂದು ಹೇಳುತ್ತಾರೆ. (ಉಪದೇಶ 2 ಶ್ಲೋಕ 11)

ಈ ರೀತಿ ಪ್ರಾಣಾಯಾಮವನ್ನು ಅಭ್ಯಾಸ ಮಾಡಲಿಕ್ಕೆ ಹೇಳುವುದು ಸರಿಯಲ್ಲ.

ಯಾಕೆಂದರೆ, ಇದರಿಂದ ವ್ಯಕ್ತಿಯ ಜೀವನವು ಅಸುರಕ್ಷಿತವಾಗುತ್ತದೆ. ರಾತ್ರಿ - ಹಗಲು ಈ ರೀತಿ ಪ್ರಾಣಯಾಮವನ್ನೇ ಮಾಡುತ್ತಿರುವ ವ್ಯಕ್ತಿಯ ಆತ್ಮಿಕ ಅಥವಾ ಸಾಮಾಜಿಕ ಉನ್ನತಿಯಾಗಲಿಕ್ಕೆ ಸಾಧ್ಯವಿಲ್ಲ. ಇದಕ್ಕೆ ಕಾರಣ ಸಮಯ, ಸ್ಥಾನ, ಮತ್ತು ಅನ್ನಪಾನಾದಿಗಳ ಅಭಾವ. ಇದರಿಂದ ವ್ಯಕ್ತಿಯು ದುರ್ಬಲ ಮತ್ತು ರೋಗಿಯಾಗಿ ಅಕಾಲ ಮೃತ್ಯುವಿಗೊಳಗಾಗಬಹುದು. ಋಷಿಗಳು ಪ್ರಾಣಾಯಾಮದೊಂದಿಗೆ ಯಮ-ನಿಯಮಗಳ ಪಾಲನೆಯನ್ನು ಮಾಡಲಿಕ್ಕೆ ಹೇಳಿದ್ದಾರೆ. ಕೇವಲ ಪ್ರಾಣಾಯಾಮದಿಂದ ಯಾರೂ ಯೋಗಿಗಳಾಗಲಿಕ್ಕೆ ಸಾಧ್ಯವಿಲ್ಲ. ಯೋಗಿಯಾಗಲಿಕ್ಕೆ ಈ ಮೊದಲೇ ಹೇಳಿದಂತೆ ಪರಮಾತ್ಮ, ಜೀವಾತ್ಮ, ಪ್ರಕೃತಿ ಹಾಗೂ ವಿಕೃತಿಯ ಯಥಾರ್ಥ ಜ್ಞಾನ, ಶುದ್ಧಕರ್ಮ ಮತ್ತು ಶುದ್ಧ ಉಪಾಸನೆಯು ಬಹಳ ಅಗತ್ಯ.

ಹಠಯೋಗಿಗಳು ಹೇಳುವ ಈ ದಿನಂಪ್ರತಿ ನಾಲ್ಕು ಸಮಯದ ಪ್ರಾಣಾಯಾಮವು ಪ್ರತಿಯೊಂದು ಬಾರಿ 80 ರಂತೆ 320 ಬಾರಿ ಆಗುತ್ತದೆ. ಇಷ್ಟು ಹೆಚ್ಚು ಪ್ರಾಣಾಯಾಮ ಮಾಡಿದರೆ, ಶರೀರವು ಒಣಗುತ್ತದೆ. ಮತ್ತು ಕೆಲವು ಬಾರಿ ಮೂರ್ಛೆಯೂ ತಪ್ಪುತ್ತದೆ. ನಾನಾ ಪ್ರಕಾರದ ರೋಗಗಳೂ ಉತ್ಪನ್ನವಾಗುತ್ತವೆ. ಬುದ್ಧಿಯೂ ಭ್ರಷ್ಟವಾಗುತ್ತದೆ. ಇದಕ್ಕೆ ಅನೇಕ ಪ್ರಮಾಣಗಳು ಇವೆ.

ಮಹರ್ಷಿ ದಯಾನಂದರು, ಸಂಸ್ಕಾರ ವಿಧಿಯಲ್ಲಿ, ಗೃಹಾಶ್ರಮ ಪ್ರಕರಣದಲ್ಲಿ, ಪ್ರಾತಃಸಾಯಂ ದಿನಕ್ಕೆ ಎರಡು ಬಾರಿ ಕನಿಷ್ಠ ಪಕ್ಷ ಮೂರು, ಅಧಿಕವೆಂದರೆ ಇಪ್ಪತ್ತೊಂದು ಪ್ರಾಣಾಯಾಮಗಳನ್ನು ಮಾಡಬೇಕೆಂದು ಹೇಳಿದ್ದಾರೆ. ಹೀಗೆ ದಿನಕ್ಕೆರಡು ಬಾರಿ ಪ್ರಾಣಾಯಾಮವನ್ನು ಮಾಡಿದರೆ ಹೆಚ್ಚೆಂದರೆ ದಿನಕ್ಕೆ 42 ಪ್ರಾಣಾಯಾಮಗಳಾಗುತ್ತವೆ. ಇದೇ ವ್ಯಾವಹಾರಿಕವಾಗಿದೆ. ಹಠಯೋಗ ಪ್ರದೀಪಿಕೆಯಲ್ಲಿ, ಇದಕ್ಕಿಂತ ಅನೇಕ ಪಟ್ಟು ಹೆಚ್ಚು ಪ್ರಾಣಾಯಾಮ ಮಾಡಲಿಕ್ಕೆ ಹೇಳಿದೆ. ಇದು ಬಹಳ ಹಾನಿಕಾರಕವಾಗಿದೆ.

**9. ಬೆರಳುಗಳಿಂದ ಮೂಗನ್ನು ಹಿಡಿದು ಪ್ರಾಣಾಯಾಮ ಮಾಡುವ ವಿಧಿ:—**

ಹಠಯೋಗದ ಆಚಾರ್ಯರು ಬೆರಳುಗಳಿಂದ ಮೂಗನ್ನು ಹಿಡಿದು ಪ್ರಾಣಾಯಾಮ ಮಾಡಲಿಕ್ಕೆ ಕಲಿಸುತ್ತಾರೆ. ಯಥಾ : "ಮಧ್ಯಮಾ ಮತ್ತು ತರ್ಜನಿಯನ್ನು ಬಿಟ್ಟು ಉಳಿದ ಮೂರು ಬೆರಳುಗಳಿಂದ ಮೂಗನ್ನು ಬಿಗಿಯಾಗಿ ಹಿಡಿದು ಕುಂಭಕವನ್ನು ಅಭ್ಯಾಸ ಮಾಡಬೇಕು, ಮತ್ತು ಎಡಮೂಗಿನಿಂದ ರೇಚಕವನ್ನು ಅಭ್ಯಾಸ ಮಾಡಬೇಕು. (ಉಪದೇಶ 2 ಶ್ಲೋಕ 64)

ಈ ರೀತಿ ಬೆರಳುಗಳಿಂದ ಮೂಗನ್ನು ಬಿಗಿಯಾಗಿ ಹಿಡಿದು ಪ್ರಾಣಾಯಾಮ

ಮಾಡುವ ಪದ್ಧತಿಯು ಋಷಿಗಳು ಕಲಿಸಿರುವ ಪದ್ಧತಿಗೆ ವಿರುದ್ಧವಾಗಿವೆ. ಮಹರ್ಷಿ ದಯಾನಂದರು ಇದನ್ನು ನಿಷೇಧಮಾಡಿದ್ದಾರೆ. (ಸಂಸ್ಕಾರ ವಿಧಿ, ಗೃಹಾಶ್ರಮ ಪ್ರಕರಣ) ಋಗ್ವೇದಾದಿ ಭಾಷ್ಯಭೂಮಿಕೆಯಲ್ಲಿ, ಉಪಾಸನಾ ವಿಷಯದ ಕೆಳಗೆ ಇವರು, "ಮೂಗನ್ನು ಕೈಯಿಂದ ಯಾವಾಗಲೂ ಹಿಡಿಯಬಾರದು. ಜ್ಞಾನದಿಂದಲೇ (ಪ್ರಾಣಸಂಚಾರವನ್ನು) ತಡೆಯುವುದಕ್ಕೆ ಪ್ರಾಣಾಯಾಮ ಎಂದು ಹೆಸರು", ಎಂದು ಹೇಳಿದ್ದಾರೆ. ಪತಂಜಲಿ ಮತ್ತು ವ್ಯಾಸರು ಕೂಡ, ಯೋಗದರ್ಶನದಲ್ಲಿ ಮೂಗನ್ನು ಹಿಡಿದು, ಪ್ರಾಣಾಯಾಮ ಮಾಡುವ ವಿಧಿಯನ್ನು ಹೇಳಲಿಲ್ಲ. ಮೂಗನ್ನು ಬಿಗಿಯಾಗಿ ಹಿಡಿದು ಪ್ರಾಣಾಯಾಮ ಮಾಡಲಿಕ್ಕೆ ಹೇಳಿದರೆ, ಪ್ರಾಯಃ ಜನರು ತಮ್ಮ ಶಕ್ತಿಗೆ ಮೀರಿ ಪ್ರಾಣಾಯಾಮ ಮಾಡಬಹುದು. ಇದರಿಂದ, ಹಾನಿಯಾಗುವ ಸಂಭವವಿದೆ. ಈ ರೀತಿ ಪ್ರಾಣಾಯಾಮ ಮಾಡುವಾಗ ಪರಮಾತ್ಮನ ಧ್ಯಾನವನ್ನು ಮಾಡಲಿಕ್ಕೆ ಆಗುವುದಿಲ್ಲ. ಯಾಕೆಂದರೆ, ಇಲ್ಲಿ ಬಲಪ್ರಯೋಗವಾಗುವುದರಿಂದ ಕ್ಲೇಶವು ಉತ್ಪನ್ನವಾಗುತ್ತದೆ. ಮನಸ್ಸಿನ ಪ್ರಸನ್ನತೆಯು ಹೋಗಿಬಿಡುತ್ತದೆ. ಆದುದರಿಂದ ಈ ರೀತಿ ಪ್ರಾಣಾಯಾಮ ಮಾಡಬಾರದು.

10. **ಎಲ್ಲಾ ಆಸನಗಳು ಯೋಗದ ಅಂಗಗಳು ಅಲ್ಲ** :— ಹಠಯೋಗ ಪ್ರದೀಪಿಕೆಯಲ್ಲಿ ಎಲ್ಲಾ ಆಸನಗಳನ್ನೂ ಯೋಗದ ಅಂಗವೆಂದು ಹೇಳಿದ್ದಾರೆ. ಯೋಗಾಸನಗಳು ಒಟ್ಟು 84 ಇವೆ. ಇವುಗಳಲ್ಲಿ ಅನೇಕ ಆಸನಗಳು ಬಹಳ ಕಠಿಣವಾಗಿವೆ. ಯಾವ ಆಸನಗಳಲ್ಲಿ ಒಬ್ಬ ವ್ಯಕ್ತಿಯು ದೀರ್ಘಕಾಲದ ತನಕ ಸುಖ ಪೂರ್ವಕವಾಗಿ ಕುಳಿತುಕೊಳ್ಳಲಾರನೋ ಮತ್ತು ಯಾವ ಆಸನಗಳಲ್ಲಿ ತುಂಬಾ ನಲಿಯುವುದು ಮತ್ತು ಕುಣಿಯುವುದು ಇದೆಯೋ, ಅಂತಹ ಆಸನಗಳಲ್ಲಿ ಸಾಧಕನು ತನ್ನ ಮನಸ್ಸನ್ನು ತನ್ನ ವಶದಲ್ಲಿ ಇಟ್ಟುಕೊಳ್ಳಲಾರನು. ಆಸನದ ಸಿದ್ಧಿಯಾಗದೆ ಪ್ರಾಣಾಯಾಮವೂ ಸರಿಯಾಗಿ ಆಗುವುದಿಲ್ಲ. "**ಸ್ಥಿರಸುಖಮಾಸನಮ್**" (ಯೋಗದರ್ಶನ 2-46) ಎಂದು ಮಹರ್ಷಿ ಪತಂಜಲಿ ಹೇಳಿದ್ದಾರೆ. ಅರ್ಥಾತ್ ಆಸನವು ಸ್ಥಾಯಿಯಾಗಿರಬೇಕು ಮತ್ತು ಸುಖಪ್ರದವಾಗಿರಬೇಕು. ಯಾವ ಆಸನದಲ್ಲಿ ದೀರ್ಘಕಾಲ ಸುಖಪೂರ್ವಕ ವಾಗಿ ಕುಳಿತುಕೊಳ್ಳಲು ಸಾಧ್ಯವೋ ಆ ಆಸನದಲ್ಲಿ ಪ್ರಾಣಾಯಾಮವನ್ನು ಸರಿಯಾಗಿ ಮಾಡಬಹುದು. ಇಂತಹ ಆಸನಗಳನ್ನೇ ಯೋಗದ ಅಂಗಗಳೆಂದು ಅಂಗೀಕರಿಸಬಹುದೇ ಹೊರತು ಎಲ್ಲಾ ರೀತಿಯ ಆಸನಗಳನ್ನೂ ಈ ರೀತಿ ಸ್ವೀಕರಿಸಲಿಕ್ಕೆ ಸಾಧ್ಯವಿಲ್ಲ. ಮಹರ್ಷಿ ಕಪಿಲರು ಕೂಡ ಸುಖಪ್ರದ ಆಸನಗಳಲ್ಲಿಯೇ ಸಾಧನೆ ಮಾಡಲಿಕ್ಕೆ ಹೇಳಿರುತ್ತಾರೆ. (ಸಾಂಖ್ಯದರ್ಶನ

3-34) ಮತ್ತು ಆಸನಗಳ ವಿಷಯದಲ್ಲಿ ಇಂತಹ ಆಸನವೇ ಆಗಬೇಕು, ಅಥವಾ ಆಸನವು ಸಿದ್ಧಿಸದೆ ಯೋಗವು ಸಿದ್ಧಿಸುವುದಿಲ್ಲ ಎಂದು ಹೇಳುವುದು ಸರಿಯಲ್ಲವೆಂದು ಇವರ ಅಭಿಪ್ರಾಯವಾಗಿದೆ. (**ಸ್ಥಿರ ಸುಖಮಾಸನಮಿತಿನ ನಿಯಮಃ** II ಸಾಂಖ್ಯದರ್ಶನ 6-24)

**11. ಹಠಯೋಗ ಪ್ರದೀಪಿಕಾದ ಯೋಗವು ಮೋಕ್ಷಕ್ಕೆ ಅಡ್ಡಿಯಾಗಿದೆ :—**

ಹಠಯೋಗ ಪ್ರದೀಪಿಕೆಯನ್ನು ಆಧಾರವಾಗಿಟ್ಟುಕೊಂಡು ಯೋಗ ಕಲಿಸುವವರು ಬಹಳ ದೀರ್ಘಕಾಲದ ತನಕ ಅನಾವಶ್ಯಕವಾಗಿ ಪ್ರಾಣವನ್ನು ತಡೆದಿಡುವುದು, ಅನೇಕ ಅನಾವಶ್ಯಕ ಆಸನಗಳನ್ನು ಅಭ್ಯಾಸವನ್ನು ಮಾಡುವುದು, ನೇತಿ, ದೋತಿ, ಇತ್ಯಾದಿ ಷಟ್ಕರ್ಮಗಳನ್ನು ಮಾಡುವುದು, ವಜ್ರೋಲಿಯಂತಹ ಮನುಷ್ಯರನ್ನು ಆಚಾರ ಹೀನರನ್ನಾಗಿ ಮಾಡುವ ಕೆಟ್ಟ ಕ್ರಿಯೆಗಳನ್ನು ಮಾಡುವುದು, ಇತ್ಯಾದಿಗಳನ್ನೇ ಯೋಗವೆಂದು ಹೇಳುತ್ತಾರೆ. ಇದರಿಂದಲೇ ಮೋಕ್ಷ ಸಿಗುತ್ತದೆ ಎಂದು ಇವರ ನಂಬಿಕೆ. ಈಗಿನ ಸಮಯದಲ್ಲಿ ಯೋಗಾಚಾರ್ಯರಾಗುವುದಕ್ಕೆ ಹೆಚ್ಚುಕಾಲ ತಾಗುವುದಿಲ್ಲ. ವಿಶೇಷ ವಿದ್ಯೆಕಲಿಯುವ ಅಗತ್ಯವೂ ಇಲ್ಲ. ಯಮ-ನಿಯಮಗಳ ಪಾಲನೆಯೂ ಬೇಡ, ಅನ್ನ-ಪಾನಾದಿಗಳ ಸೇವನೆಯಲ್ಲಿಯೂ ಏನೂ ನಿಯಮ ಬೇಡ, ಶರಾಬು ಕುಡಿಯುವುದು, ಮಾಂಸ ತಿನ್ನುವುದು, ವ್ಯಭಿಚಾರ ಮಾಡುವುದು, ಇವೆಲ್ಲಾ ಯೋಗಕ್ಕೆ ಅನುಕೂಲವೆಂದೇ ತಿಳಿದುಕೊಳ್ಳಲಾಗುತ್ತದೆ. ಇಂತಹ ದುರಾಚಾರಿ ಸ್ತ್ರೀ ಪುರುಷರೂ ಯೋಗಾಚಾರ್ಯರಾಗುತ್ತಿದ್ದಾರೆ. ದೌರ್ಭಾಗ್ಯದಿಂದ, ಇಂತಹ ಯೋಗಾಚಾರ್ಯರಿಗೆ ಹೇರಳ ಧನ ಸಂಪತ್ತು ಮತ್ತು ಸನ್ಮಾನವೂ ದೊರೆಯುತ್ತಿದೆ. ಇದರಿಂದ ಪವಿತ್ರ ಯೋಗವಿದ್ಯೆಯ ಹೆಸರು ಈಗ ಕಲಂಕಿತವಾಗಿದೆ. ಬುದ್ಧವಂತರು ಇದರಿಂದ ದೂರವಾಗುತ್ತಿದ್ದಾರೆ. ಆದುದರಿಂದ, ಯೋಗದ ಹೆಸರಿನಲ್ಲಿ ನಡೆಯುತ್ತಿರುವ ಇಂತಹ ಕೆಲವು ಅಂಧ ಪರಂಪರೆಗಳು ಬೆಳೆಯುವುದನ್ನು ತಡೆದು, ನಿಜವಾದ ಯೋಗದ ಪರಂಪರೆಯನ್ನು ಬೆಳೆಸುವುದು ಎಲ್ಲಾ ಮನುಷ್ಯರ ಕರ್ತವ್ಯವಾಗಿದೆ. ಮಹರ್ಷಿ ದಯಾನಂದರು ಸತ್ಯಾರ್ಥ ಪ್ರಕಾಶದ ಮೂರನೆಯ ಸಮುಲ್ಲಾಸದಲ್ಲಿ ಈ ಹಠಯೋಗ ಪ್ರದೀಪಿಕೆಯನ್ನು ತ್ಯಾಜ್ಯವೆಂದು ಹೇಳಿದ್ದಾರೆ. ಯಾಕೆಂದರೆ, ಇದರ ಸಿದ್ಧಾಂತಗಳು ಕಪೋಲಕಲ್ಪಿತ ಮತ್ತು ಅಸತ್ಯವಾಗಿವೆ.

**ಪ್ರಶ್ನೆ** :- ಹಠಯೋಗ ಪ್ರದೀಪಿಕೆಯು ಇಷ್ಟುಹಾನಿಕಾರಕವಾಗಿದೆಯಾದರೆ ಸಾವಿರಾರು ಜನರು ಇದರ ಹಿಂದೆ ಯಾಕೆ ಹೋಗುತ್ತಿದ್ದಾರೆ?

**ಉತ್ತರ**:- ಇದಕ್ಕೆ ಅನೇಕ ಕಾರಣಗಳಿವೆ. ಯಥಾ:-

1) ವೇದಗಳು, ದರ್ಶನಗಳು ಮತ್ತು ಯೋಗವಿದ್ಯೆ ಇವುಗಳನ್ನು ಬಲ್ಲವರ ಸಂಖ್ಯೆ ಕಡಿಮೆಯಾಗುತ್ತಾಹೋದಂತೆ, ಸ್ವಾರ್ಥಿಗಳೂ, ಯೋಗವಿದ್ಯೆಯನ್ನು ಸರಿಯಾಗಿ ತಿಳಿಯದೆ ಇದ್ದರೂ, ಹಠಯೋಗ ಪ್ರದೀಪಿಕೆಯಂತಹ ಪುಸ್ತಕಗಳನ್ನು ಬರೆದು ಪ್ರಚಾರ ಮಾಡಿದರು.

2) ವೇದ ಮತ್ತು ಯೋಗ-ವಿದ್ಯೆಯ ಜ್ಞಾನವು ಇಲ್ಲದ ರಾಜರು ಇಂತಹ ಕಪಟ ಯೋಗಿಗಳಿಗೆ ಪ್ರೋತ್ಸಾಹಕೊಡುತ್ತಾ ಬಂದರು.

3) ಹಠಯೋಗ ಮಾರ್ಗದಲ್ಲಿ ಹೋಗುವವರಿಗೆ ಅನ್ನ, ಪಾನಾದಿಗಳು, ಬ್ರಹ್ಮಚರ್ಯೆ ಇತ್ಯಾದಿಗಳ ಯಾವ ನಿಯಮವೂ ಇಲ್ಲ. ವಿಷಯ ವಾಸನೆಗಳಿಗೆ ಒಳಗಾದ ಜನರಿಗೆ ಇಲ್ಲಿ ಬೇಕಾದ ಭೋಗದ ಸಾಮಗ್ರಿಗಳು ಸಿಗುತ್ತವೆ.

4) ವಂಚಕರೂ, ಕಪಟಿಗಳೂ, ಕುಡುಕರೂ, ಆಚಾರಹೀನರೂ ಬಹುಬೇಗನೆ ಯೋಗಾಚಾರ್ಯರಾಗಿ ಸನ್ಮಾನವನ್ನು ಪಡೆಯುತ್ತಾರೆ.

5) ಇಂತಹ ಕಪಟ ಯೋಗಿಗಳ ಪ್ರಚಾರ ಮಾಡುವವರಿಗೆ ಸಾಕಷ್ಟು ಹಣ ಸಿಗುತ್ತದೆ. ಇಂತಹ ಜನರಿಗೆ ಇದೊಂದು ಹಣ ಸಂಪಾದನೆಯ ಸುಲಭಮಾರ್ಗವಾಗಿದೆ.

6) ಮೋಕ್ಷದ ಮಾರ್ಗವು ಇಲ್ಲಿ ಬಹಳ ಸುಲಭವಾಗಿದೆ. ವಿದ್ಯೆಕಲಿಯುವ ಅಥವಾ ಸಂಯಮ ಮಾಡುವ ರಗಳೆಯೇ ಇಲ್ಲ. ಏನು ಪಾಪ ಕರ್ಮ ಮಾಡಿದರೂ, ಮೋಕ್ಷವು ಸಿಗುತ್ತದೆ.

ಈ ಎಲ್ಲಾ ಕಾರಣಗಳಿಂದ ಹಠಯೋಗ ಪ್ರದೀಪಿಕೆಯಂತಹ ಹಾನಿಕಾರಕ ಗ್ರಂಥಗಳ ಪ್ರಚಾರವು ತುಂಬಾ ನಡೆಯುತ್ತಿದೆ.

**ಪ್ರಶ್ನೆ** :- ಯೋಗದರ್ಶನದಲ್ಲಿ ಹೇಳಿರುವ ಯೋಗ ಮಾರ್ಗವು ಈಗಿನ ಕಾಲದ ಜನರಿಗೆ ಬಹಳ ಕಠಿಣವಾಗಿದೆ ಮತ್ತು ಹಠಯೋಗ ಪ್ರದೀಪಿಕೆಯಲ್ಲಿ ಹೇಳಿರುವ ಯೋಗವು ಸುಲಭವಾಗಿದೆ. ಆದುದರಿಂದ, ಅಧಿಕಾಂಶ ಜನರು ಇದರ ಹಿಂದೆ ಹೋಗುತ್ತಿದ್ದಾರೆ, ಎಂದು ಕೆಲವರ ಅಭಿಪ್ರಾಯವಾಗಿದೆ, ಇದು ಸರಿಯೆ?

**ಉತ್ತರ:–** ನಿಜವಾದ ಮಾತೇನೆಂದರೆ, ಹಠಯೋಗ ಪ್ರದೀಪಿಕಾದಲ್ಲಿ ಯೋಗವನ್ನು ಎಷ್ಟು ಕಠಿಣವೆಂದು ತೋರಿಸಿದ್ದಾರೆ, ಎಂದರೆ, ಈ ಮಾರ್ಗದಲ್ಲಿ ಹೋಗುವವನಿಗೆ ಸಾವಿರಾರು ಜನ್ಮಗಳಲ್ಲಿಯೂ ಯೋಗಿಯಾಗಲಿಕ್ಕೆ ಸಾಧ್ಯವಿಲ್ಲ. ಯಾರು ಇದನ್ನು ಸುಲಭವೆಂದು ಹೇಳುತ್ತಾರೆಯೋ, ಅವರಿಗೆ ಯೋಗದ ವಾಸ್ತವಿಕ ಸ್ವರೂಪದ ಜ್ಞಾನವು ಇಲ್ಲ. ಯಾವ ಮಾರ್ಗವನ್ನು ಅನುಸರಿಸಿಕೊಂಡು ಹೋದವನು, ಅಜ್ಞಾನಿ, ಆಚಾರಹೀನ, ನಿರ್ಬಲ, ರೋಗಿ ಮತ್ತು ಸ್ವಾರ್ಥಿಯಾಗುತ್ತಾನೆಯೋ ಆ ಮಾರ್ಗವು ಸುಲಭ ಎಂದು ಹೇಗೆ ಹೇಳುವುದು? ಹಠಯೋಗ ಪದ್ಧತಿಯನ್ನು ಆಧಾರವನ್ನಾಗಿ ಇಟ್ಟುಕೊಂಡು ಹೋಗುವವರಿಗೆ ಯೋಗದ ವಾಸ್ತವಿಕ ಸ್ವರೂಪದ ಜ್ಞಾನವೇ ಇರುವುದಿಲ್ಲ. ಆದರೂ ಇದರ ಪ್ರಚಾರವು ತೀವ್ರಗತಿಯಿಂದ ನಡೆಯುತ್ತಿದೆ. ಇದರ ಪರಿಣಾಮವಾಗಿ ಅಜ್ಞಾನ, ಅನ್ಯಾಯ, ದೌರ್ಬಲ್ಯ, ಮತ್ತು ಕ್ಲೇಶಗಳು ವೃದ್ಧಿಯಾಗುತ್ತಾ ಹೋಗುತ್ತಿವೆ. ಇಂತಹ ಅನರ್ಥವನ್ನು ನಿಲ್ಲಿಸುವುದು ಮತ್ತು ಎಲ್ಲರಿಗೂ ಹಿತಕರವಾದಂತಹ ವಾಸ್ತವಿಕ ಯೋಗದ ಪ್ರಚಾರ ಮಾಡುವುದು ನಮ್ಮೆಲ್ಲರ ಕರ್ತವ್ಯವಾಗಿದೆ.

ಈ ಲೇಖನದಲ್ಲಿ ಅನೇಕ ತರ್ಕಗಳನ್ನು ಮುಂದಿಟ್ಟು ಹಠಯೋಗ ಪ್ರದೀಪಿಕಾದ ಯೋಗವು ಪತಂಜಲಿ ಮೊದಲಾದ ಋಷಿಗಳು ಹೇಳಿಕೊಟ್ಟ ಯೋಗಕ್ಕನುಸಾರವಾಗಿ ಇಲ್ಲ ಎಂದು ಸಿದ್ಧಪಡಿಸಿದ್ದೇನೆ. ಆದುದರಿಂದ, ಸ್ತ್ರೀ ಪುರುಷರೆಲ್ಲಾ ಹಠಯೋಗಕ್ಕೆ ಹೋಗಿ ತಮ್ಮ ತನು, ಮನ, ಧನವನ್ನು ವ್ಯರ್ಥ ಮಾಡಿಕೊಳ್ಳುವುದನ್ನು ಬಿಟ್ಟು, ಪಾತಂಜಲ ಯೋಗವನ್ನು ಕಲಿತು ಇತರರಿಗೂ ಕಲಿಸಿ ಲೋಕದ್ದ ಕಲ್ಯಾಣವನ್ನು ಮಾಡಲಿಕ್ಕೆ ಪ್ರಯತ್ನಮಾಡಬೇಕು.

